ಬಾಪು 150ನೇ ಜನ್ಮ ವರ್ಷಾಚರಣೆ ಪುಸ್ತಕ ಮಾಲಿಕೆ

# ನಗಳಲ್ಲಿ ಮೂಡಿದ ಗಾಂಧಿ

ಂಕಲನ

ಸಂಪಾದಕರು : ಇಂದಿರಾ ಕೃಷ್ಣಪ್ಪ



ಕರ್ನಾಟಕ ಗಾಂಧಿ ಸ್ಮಾರಕ ನಿಧಿ
ಬೆಂಗಳೂರು

ಸ್ವಾತಂತ್ರ್ಯೋತ್ಸವದ
ಅಮೃತ ಮಹೋತ್ಸವ

ಬಾ-ಬಾಪು



ವರ್ಷಾಚರಣೆ

# ಕವನಗಳಲ್ಲಿ ಮೂಡಿದ ಗಾಂಧಿ

## ಕವನ ಸಂಕಲನ

ಪ್ರಧಾನ ಸಂಪಾದಕರು

ಇಂದಿರಾ ಕೃಷ್ಣಪ್ಪ

ಗೌರವ ಕಾರ್ಯದರ್ಶಿ, ಗಾಂಧಿ ಭವನ

ಸಹಕಾರ : ಡಾ. ವಸುಂಧರಾ ಭೂಪತಿ

ಶ್ರೀಮತಿ ನಳಿನಾ ಡಿ.

ಡಾ. ಎಸ್. ರಾಮಲಿಂಗೇಶ್ವರ (ಸಿಸಿರಾ)

ಶ್ರೀ ರುದ್ರಪ್ಪ ಹನಗವಾಡಿ

ಪ್ರಕಾಶಕರು

**ಕರ್ನಾಟಕ ಗಾಂಧೀ ಸ್ಮಾರಕ ನಿಧಿ**

ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ

ಬೆಂಗಳೂರು – 560001, ದೂರವಾಣಿ : 080–22261967

ಇಮೇಲ್ : gandhibhavanabengaluru@gmail.com

---

ಕವನಗಳಲ್ಲಿ ಮೂಡಿದ ಗಾಂಧಿ – ಕವನ ಸಂಕಲನ
ಸಂಪಾದಕರು : ಇಂದಿರಾ ಕೃಷ್ಣಪ್ಪ
ಪ್ರಕಾಶಕರು : ಕರ್ನಾಟಕ ಗಾಂಧೀ ಸ್ಮಾರಕ ನಿಧಿ
ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560001, ದೂರವಾಣಿ : 080–22261967

| | | |
|---|---|---|
| ಪುಟಗಳು | : | XXVIII + 308 |
| ಬೆಲೆ | : | ರೂ. 170/- |
| ಪ್ರತಿಗಳು | : | 1000 |
| ಮೊದಲ ಮುದ್ರಣ | : | 2021 |
| © | : | ಕರ್ನಾಟಕ ಗಾಂಧಿ ಸ್ಮಾರಕ ನಿಧಿ |
| ಒಳ ಪುಟ ಕಾಗದ | : | 58 ಜಿ.ಎಸ್.ಎಂ. ಮ್ಯಾಫ್‌ಲಿತೋ |
| ಮುಖ ಪುಟ | : | 300 ಜಿ.ಎಸ್.ಎಂ. ಆರ್ಟ್ ಕಾರ್ಡ್ |
| ಸಹಕಾರ | : | ರಾಷ್ಟ್ರೀಯ ಸೇವಾ ಯೋಜನೆ |
| ವಿನ್ಯಾಸ & ಮುದ್ರಣ | : | ಕ್ರಿಯೇಟಿವ್‌ಗೀಕ್ಸ್, ಯಾದವ ಕಾಲೇಜು ರಸ್ತೆ<br>ಮಾಧವನಗರ, ಬೆಂಗಳೂರು–560001<br>ದೂರವಾಣಿ : 080 40927049 |



## ಅರ್ಪಣೆ

ಜಗದ ಕವಿ, ಯುಗದ ಕವಿ, ರಾಷ್ಟ್ರಕವಿ

**ಕುವೆಂಪು** ಅವರಿಗೆ

ಗೌರವಪೂರ್ವಕವಾಗಿ



"ಜೀವನವೆಂದರೆ ಆಕಾಂಕ್ಷೆ. ಚಿತ್ರ, ಸಿದ್ಧಿ, ಆತ್ಮಸಾಕ್ಷಾತ್ಕಾರಗಳಿಗಾಗಿ ಹೆಣಗುವುದೇ ಅದರ ಧ್ಯೇಯವಾಗಿದೆ. ನಮ್ಮ ಲೋಪದೋಷಗಳ ಮೂಲಕ ನಾವು ಆ ಉಚ್ಚ ಧ್ಯೇಯವನ್ನು ಕೆಳಗಿಳಿಸಕೂಡದು. ಅಂಥ ನನ್ನ ಲೋಪದೋಷಗಳ ಪೂರ್ಣ ಅರಿವು ನನಗೆ ಇದೆ. ಅವುಗಳನ್ನು ಹೋಗಲಾಡಿಸಲು ನಾನು ಸತ್ಯದೇವತೆಯನ್ನು ಮೂಕ ಪ್ರಾರ್ಥನೆಯಿಂದ ಆರಾಧಿಸುತ್ತಿರುವೆ".

- ಮಹಾತ್ಮ ಗಾಂಧಿ

# ನಿಮ್ಮೊಂದಿಗೆ

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ಬಾ ಮತ್ತು ಬಾಪು ಅವರ ಜನ್ಮ ದಿನಾಚರಣೆ ಮತ್ತು ಸ್ವಾತಂತ್ರ್ಯೋತ್ಸವ – 75 ಅಮೃತ ಮಹೋತ್ಸವ ಅರ್ಥಪೂರ್ಣವಾಗಿ ಆಚರಿಸಲು ಹಾಕಿಕೊಂಡಿರುವ ಹಲವಾರು ಕಾರ್ಯ ಯೋಜನೆಗಳಲ್ಲಿ, ಗಾಂಧೀಜಿ ಅವರ ಚಿಂತನೆಗಳು ಮತ್ತು ತತ್ವ ಸಿದ್ಧಾಂತಗಳುಳ್ಳ ಸಾಹಿತ್ಯವನ್ನು ಪ್ರಕಟಿಸುವುದು, ಪ್ರದರ್ಶಿಸುವುದು ಮತ್ತು ವಿತರಿಸುವುದೂ ಪ್ರಮುಖವಾದುದಾಗಿದೆ. ಅದರಂತೆ ಗಾಂಧೀಜಿ ಅವರ ಕುರಿತು ಹಿರಿಯ ಕವಿಗಳು ಮತ್ತು ಕಿರಿಯ ಕವಿಗಳ ಪ್ರಕಟಿತ ಕವನಗಳನ್ನು ಸಂಗ್ರಹಿಸಿ ಮುತ್ತಿನ ಮಣಿಗಳಂತೆ ಪೋಣಿಸಿ "ಕವನಗಳಲ್ಲಿ ಮೂಡಿದ ಗಾಂಧಿ" ಎಂಬ ಮೋಹನಮಾಲೆಯ ಕವನ ಸಂಕಲನವನ್ನು ನಿಮ್ಮೊಂದಿಗೆ ಹಂಚಿಕೊಂಡಿದ್ದೇವೆ.

ಮಹಾತ್ಮಾಜಿ ಅವರನ್ನು ಕನ್ನಡದ ಕವಿಗಳು ಅವರ ಕವನಗಳ ಮುಖಾಂತರ ಹೇಗೆ ಕಂಡಿದ್ದಾರೆ ಎಂಬ ಚಿತ್ರಣ, ಈ ಕವನ ಸಂಕಲನ ಕಟ್ಟಿಕೊಡುತ್ತದೆ. ಕನ್ನಡ ಜಾನಪದ, ಲಾವಣಿಯಿಂದ ಮೊದಲ್ಗೊಂಡು ಈ ತಹಲ್‌ವರೆಗಿನ ಅಂದರೆ ಸುಮಾರು 100 ವರ್ಷಗಳಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರವು ಗಾಂಧೀಜಿ ಅವರನ್ನು ದರ್ಶಿಸಿದ್ದ ವಿಹಂಗಮ ನೋಟವನ್ನು ಈ ಕವನ ಸಂಕಲನ ಅನಾವರಣ ಮಾಡುತ್ತದೆ. ಕನ್ನಡದಲ್ಲಿ ಗಾಂಧೀಜಿ ಅವರ ಜೀವನ, ಹೋರಾಟದ ಕುರಿತು ಸಾಹಿತಿಗಳು, ಹೋರಾಟಗಾರರು, ಗಾಂಧಿ ಅನುಯಾಯಿಗಳು ವಿಪುಲ ಸಾಹಿತ್ಯವನ್ನು ರಚನೆ ಮಾಡಿದ್ದಾರೆ. ಅವರ ಜೀವನ ಚರಿತ್ರೆ, ಸ್ವಾತಂತ್ರ್ಯ ಹೋರಾಟದಲ್ಲಿ ಅವರ ಪಾತ್ರ, ಕಸ್ತೂರ್‌ಬಾ ಗಾಂಧಿ ಮತ್ತವರ ಕುಟುಂಬ, ಅವರ ವೈಯಕ್ತಿಕ ಬದುಕು, ಅವರ ಆಶ್ರಮ ಜೀವನ, ಅವರ ಉಪವಾಸ ಸತ್ಯಾಗ್ರಹ, ಅವರ ತತ್ವಾದರ್ಶಗಳ ಕುರಿತು ಕರ್ನಾಟಕದ ಗಾಂಧಿ ಅನುಯಾಯಿಗಳು, ಗಣ್ಯರು, ಸಾಹಿತಿಗಳು,

ಸಾಹಿತ್ಯದ ಎಲ್ಲಾ ಆಯಾಮಗಳಲ್ಲಿ ಅಂದರೆ ವಿಮರ್ಶಾತ್ಮಕ ದೃಷ್ಟಿ ಮತ್ತು ಟೀಕೆ ಟಿಪ್ಪಣಿ, ವ್ಯಂಗ್ಯೋಕ್ತಿಗಳಿಂದಲೂ ವಿಮರ್ಶಿಸಿದ್ದಾರೆ. ಅವರ ಕುರಿತಾಗಿ ಪ್ರಬಂಧಗಳು, ಕಾದಂಬರಿ, ಸಣ್ಣಕತೆ, ಲೇಖನಗಳು, ಸಂಕೀರ್ಣ ವಿಚಾರ ಮಂಥನ ಹಾಗೂ ಕವನಗಳನ್ನೂ ರಚಿಸಿದ್ದಾರೆ. ಆ ಕವನಗಳು, ಕವಿಗಳು – ಕವಯಿತ್ರಿಯರ ಕವನ ಸಂಕಲನಗಳಲ್ಲಿ ಸೇರಿಕೊಂಡಿವೆ. ಅವುಗಳನ್ನು ಸಾರ ಸಂಗ್ರಹವಾಗಿ ಒಗ್ಗೂಡಿಸಿ, ಈ ಕವನ ಸಂಕಲನವನ್ನು ಹೊರತರಲಾಗಿದೆ. ಇಂಥಹ ಸಂಗ್ರಹಣೆ ಮತ್ತು ಒಗ್ಗೂಡಿಸುವಿಕೆಗೆ ಕನ್ನಡ ಸಾಹಿತ್ಯ, ಕನ್ನಡದ ಪತ್ರಿಕೆಗಳು, ಸಂಚಿಕೆಗಳ ಆಳವಾದ ಓದುವಿಕೆ, ಕನ್ನಡದ ಕೃತಿಗಳ ಪರಿಜ್ಞಾನ ಮತ್ತು ಸೂಕ್ಷ್ಮತೆಗಳ ಅರಿವು ಇದ್ದವರು ಮಾತ್ರ ಇಂಥಹ ಅನನ್ಯವಾದ ಕಾರ್ಯಕ್ಕೆ ಕೈಹಚ್ಚುವರು.

ಇಂಥಹ ಅಪರೂಪದ ಕಾರ್ಯವನ್ನು ಕೈಗೆತ್ತಿಕೊಂಡು ಸುಮಾರು ಎರಡು ವರ್ಷಗಳಿಂದ, ಕನ್ನಡದ ಕವಿಗಳನ್ನು ಓದುತ್ತಾ, ಮನದೊಳಗೆ ತುಂಬಿಕೊಂಡು, 'ಕವನಗಳಲ್ಲಿನ ಗಾಂಧಿ'ಯನ್ನು ಶ್ರೀಮತಿ ಇಂದಿರಾ ಕೃಷ್ಣಪ್ಪನವರು ನಮ್ಮ ಮುಂದೆ ಅನಾವರಣಗೊಳಿಸಿದ್ದಾರೆ. ಕನ್ನಡದ ಸಾಹಿತ್ಯ ಕ್ಷೇತ್ರಕ್ಕೆ ಇದೊಂದು ಅಪೂರ್ವವಾದ ಕೊಡುಗೆಯಾಗಿದೆ. ನೂರಾರು ಕವಿಗಳು ಬರೆದಿರುವುದನ್ನು ಓದುವುದು ಮತ್ತು ಒಗ್ಗೂಡಿಸುವುದು, ಕವನ ಸಂಕಲನ ರೂಪದಲ್ಲಿ ಪ್ರಕಟಿಸುವುದು ಅಪಾರ ಶ್ರಮ ಮತ್ತು ಅಗಾಧ ಆಸಕ್ತಿಯನ್ನು ಬೇಡುತ್ತದೆ. ಇಂಥಹ ಶ್ರಮದಾಯಕ ಕಾರ್ಯವನ್ನು ಇಷ್ಟಪಟ್ಟು ಮಾಡಿದ ಶ್ರೀಮತಿ ಇಂದಿರಾ ಕೃಷ್ಣಪ್ಪ ಅವರಿಗೆ ನನ್ನ ವಿಶೇಷ ಅಭಿನಂದನೆಗಳು ಸಲ್ಲುತ್ತವೆ. ಗಾಂಧೀಜಿಯ ಕುರಿತಾಗಿ ಇಂಥಹ ಪ್ರಯತ್ನ ಇದುವರೆಗೆ ಆಗಿಲ್ಲದಿರುವುದು, ಇದೇ ಪ್ರಥಮ ಕವನ ಸಂಕಲನವಾಗಿರುವುದೂ ಸಹ ಕನ್ನಡ ಭಾಷೆಯ ಘನತೆಯನ್ನು ಔನ್ನತ್ಯಕ್ಕೇರಿಸಿದೆ. ಜಗತ್ತಿನ ಶಾಂತಿದೂತ, ವಿಶ್ವವಂದ್ಯ ಗಾಂಧಿಯನ್ನು ಕನ್ನಡ ಕಾವ್ಯಲೋಕ ತನ್ನೊಳಗೆ ಮೇಳೈಸಿಕೊಂಡ ವಿಹಂಗಮ ನೋಟವನ್ನು ಈ ಕೃತಿ ಕೊಡುವಂತೆ ಮಾಡಿರುವುದಕ್ಕೆ ಶ್ರೀಮತಿ ಇಂದಿರಾ ಕೃಷ್ಣಪ್ಪ ಅವರಿಗೆ ನಾನು ಅನಂತ

ಧನ್ಯವಾದಗಳನ್ನು ತಿಳಿಸುತ್ತೇನೆ. ಇದರೊಂದಿಗೆ ಸಹಕರಿಸಿದ, ಡಾ. ವಸುಂಧರಾ ಭೂಪತಿ, ಶ್ರೀಮತಿ ನಳಿನ, ಡಾ. ರಾಮಲಿಂಗೇಶ್ವರ, ಶ್ರೀ ರುದ್ರಪ್ಪ ಹನಗವಾಡಿ ಅವರ ನೆರವಿನ ಹಸ್ತಕ್ಕೆ ವಂದನೆಗಳನ್ನು ತಿಳಿಸುತ್ತೇನೆ. ಈ ಕಾವ್ಯಕುಸುಮವನ್ನು ಹೊರತರಲು ಗಾಂಧಿ ಭವನದೊಂದಿಗೆ ಅವರಿಟ್ಟಿರುವ ವಿಶ್ವಾಸ ಮತ್ತು ಸೇವಾ ಮನೋಭಾವವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಮುನ್ನುಡಿಯನ್ನು ಬರೆದು ಈ ಕಾವ್ಯಗುಚ್ಛಕ್ಕೆ ಮೆರಗು ತುಂಬಿದ ಡಾ. ಬೈರಮಂಗಲ ರಾಮೇಗೌಡ ಅವರಿಗೆ ಗೌರವ ನಮನಗಳು ಸಲ್ಲುತ್ತವೆ. ಇಂಥಹ ಅಪೂರ್ವ ಕೃತಿಯನ್ನು ಪ್ರಕಟಿಸಲು ಸಹಕರಿಸಿದ ಗಾಂಧಿ ಭವನದ ಎಲ್ಲಾ ಸದಸ್ಯರಿಗೆ ಕೃತಜ್ಞತೆಗಳನ್ನು ತಿಳಿಸುತ್ತೇನೆ.

ಈ ಹೊತ್ತಿಗೆಯನ್ನು ಅಂದವಾದ ವಿನ್ಯಾಸದೊಂದಿಗೆ ಮುದ್ರಿಸಿದ ಕ್ರಿಯೇಟಿವ್‌ಗೀಕ್ಸ್‌ನ ಶ್ರೀ ಮಹೇಶ್ ಮತ್ತು ತಂಡದವರಿಗೆ ಗಾಂಧಿ ಭವನದ ಪರವಾಗಿ ನಮನಗಳು ಸಲ್ಲುತ್ತವೆ.

ನಾಡೋಜ ಡಾ. ವೂಡೇ ಪಿ. ಕೃಷ್ಣ
ಅಧ್ಯಕ್ಷರು, ಕರ್ನಾಟಕ ಗಾಂಧಿ ಸ್ಮಾರಕ ನಿಧಿ



ಮನಸ್ಸಿನಲ್ಲಿ, ಮಾತಿನಲ್ಲಿ, ಕೆಲಸದಲ್ಲಿ ಯಾರನ್ನೂ ನೋಯಿಸಬಾರದು. ಎಲ್ಲರನ್ನೂ ಪ್ರೀತಿಸುವುದು, ಎಲ್ಲರಿಗೂ ಒಳ್ಳೆಯದನ್ನು ಬಯಸುವುದೇ ಅಹಿಂಸಾ ಧರ್ಮ.

- ಮಹಾತ್ಮ ಗಾಂಧಿ

# ನಮ್ಮ ನಮ್ಮಲ್ಲಿ

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ಬಾ-ಬಾಪು ಜನ್ಮದಿನಾಚರಣೆ ಮತ್ತು ಸ್ವಾತಂತ್ರ್ಯೋತ್ಸವ - 75ರ ಅಮೃತ ಮಹೋತ್ಸವದ ಈ ಸುಸಂದರ್ಭದಲ್ಲಿ, ಮಹಾತ್ಮಾಜಿ ಅವರ ಜೀವನ, ತತ್ವಸಿದ್ಧಾಂತಗಳು ಮತ್ತು ಸ್ವಾತಂತ್ರ್ಯ ಹೋರಾಟದ ಘಟ್ಟಗಳನ್ನು ಪರಿಣಾಮಕಾರಿಯಾಗಿ ಜನಮನದಲ್ಲಿ ಒಡಮೂಡಿಸಲು ಹಾಕಿಕೊಂಡಿರುವ ಹಲವಾರು ಕಾರ್ಯಯೋಜನೆಗಳಲ್ಲಿ ಪುಸ್ತಕಗಳನ್ನು ಪ್ರಕಟಿಸುವುದು, ಪ್ರದರ್ಶಿಸುವುದು, ವಿತರಿಸುವುದೂ ಸಹ ಅತ್ಯಂತ ಗುರುತರವಾದ ಜವಾಬ್ದಾರಿಯೆಂದು ಮನಗಾಣಲಾಗಿದೆ. ಅದರಂತೆ ಮಹಾತ್ಮಾಜಿ ಅವರ 153ನೇ ಜನ್ಮದಿನಾಚರಣೆಯಂದು "ಕವನಗಳಲ್ಲಿ ಮೂಡಿದ ಗಾಂಧಿ" ಎಂಬ ಪ್ರಾತಿನಿಧಿಕ ಕಾವ್ಯಗುಚ್ಛವನ್ನು ಪ್ರಕಟಿಸಲು ಸಾಧ್ಯವಾದುದಕ್ಕಾಗಿ ಹರ್ಷವೆನಿಸುತ್ತದೆ.

ಗಾಂಧೀಜಿ ಅವರು ಹದಿನೆಂಟಕ್ಕೂ ಹೆಚ್ಚು ಬಾರಿ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಕರ್ನಾಟಕಕ್ಕೆ ಆಗಮಿಸಿದ್ದರು. ಭಾರತ ಸ್ವಾತಂತ್ರ್ಯ ಹೋರಾಟವು, ಅಂದು ಹರಿದು ಹಂಚಿಹೋಗಿದ್ದ ಕರ್ನಾಟಕದಲ್ಲೂ ಬಹಳ ಪ್ರಖರವಾಗಿಯೇ ನಡೆದಿದ್ದು ಸಾಮಾನ್ಯ ಜನರು ಮತ್ತು ಎಲ್ಲಾ ಸಮುದಾಯದ ಪ್ರಜಾಜನರು ಮತ್ತು ಮಹಿಳೆಯರು ಪಾಲ್ಗೊಂಡಿದ್ದರು. ಉತ್ತರ ಭಾರತದಲ್ಲಿ ನಡೆಯುತ್ತಿದ್ದ ಭಾರತ ವಿಮೋಚನಾ ಹೋರಾಟದ ವಿಷಯಗಳನ್ನು ಅರಗಿಸಿಕೊಂಡ ಕರ್ನಾಟಕದಲ್ಲಿನ ಗಾಂಧಿ ಅನುಯಾಯಿಗಳು ಜನರನ್ನು ಒಗ್ಗೂಡಿಸಿ, ಸಂಘ ಸಂಸ್ಥೆಗಳನ್ನು ಕಟ್ಟಿ, ಜನರ ಮನಸ್ಸನ್ನು ಸ್ವಾತಂತ್ರ್ಯ ಹೋರಾಟಕ್ಕೆ ಸಜ್ಜುಗೊಳಿಸಿದ್ದರು. ಜನರನ್ನು ಏಕತ್ರಗೊಳಿಸಲು, ಸಭೆ, ಸಮಾರಂಭ, ವಿಚಾರಗೋಷ್ಠಿ, ಸಂವಾದಗಳೊಂದಿಗೆ, ಪತ್ರಿಕೆ, ಕಥೆ, ಕಾದಂಬರಿ, ಲಾವಣಿ, ಭಜನೆ, ಕಾವ್ಯ, ಕವನಗಳ ಮುಖಾಂತರ ಬಡಿದೆಬ್ಬಿಸಿದ್ದರು. ಭಾರತ ಸ್ವಾತಂತ್ರ್ಯದ ನಂತರವೂ ಅಂದಿನ ವರ್ತಮಾನದ ಜನರ ನಿಸ್ವಾರ್ಥತೆ, ತ್ಯಾಗ, ಬಲಿದಾನಗಳನ್ನು ಕರ್ನಾಟಕದ ಸಾಹಿತಿಗಳು ಅವರ

ಕವನಗಳಲ್ಲಿ ಕಟ್ಟಿಕೊಟ್ಟಿದ್ದಾರೆ. ಸ್ವಾತಂತ್ರ್ಯ ಚಳುವಳಿ, ಕನ್ನಡ ಸಾಹಿತ್ಯ ಮತ್ತು ಪತ್ರಿಕೆಗಳ ನಿರಂತರ ಓದುಗಳಾದ ನನಗೆ, ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ಗಾಂಧಿ ಮತ್ತು ಅವರ ಜೀವನ ಪಥದ ವಿಪುಲ ಆಕರ ಕೃತಿಗಳು ಕಂಡವು. ಹಾಗೆಯೇ ಕಾವ್ಯ, ಕವನಗಳು, ಅಲ್ಲಲ್ಲಿ ಬಿಡಿಬಿಡಿಯಾಗಿ ಗೋಚರಿಸಿದವು. ಸುಮಾರು ನೂರು ವರ್ಷಗಳ ಕರ್ನಾಟಕದ ಇತಿಹಾಸದಲ್ಲಿ ಸ್ವಾತಂತ್ರದ ನಿಕಟಪೂರ್ವ ಮತ್ತು ಸ್ವಾತಂತ್ರ್ಯಾ ನಂತರದಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದವರೂ, ಗಾಂಧೀಜಿ ಅವರೊಂದಿಗೆ ಒಡನಾಡಿದವರೂ ಹಾಗೂ ಸ್ವಾತಂತ್ರ್ಯ ಹೋರಾಟಕ್ಕೆ ಬೆಂಬಲ ನೀಡಿದ ಕವಿಗಳು ಮತ್ತು ಕವಿಯಿತ್ರಿಯವರು, ಜಯದೇವಿತಾಯಿ ಲಿಗಾಡೆ, ಬೆಳಗೆರೆ ಜಾನಕಮ್ಮ, ಗೋವಿಂದ ಪೈ, ಕುವೆಂಪು, ಸಿದ್ದವನಹಳ್ಳಿ ಕೃಷ್ಣಶರ್ಮ, ದ.ರಾ. ಬೇಂದ್ರೆ, ಮಾಸ್ತಿ ವೆಂಕಟೇಶ ಐಯ್ಯಂಗಾರ್, ವಿ.ಸೀ. ಇನ್ನೂ ಮುಂತಾದವರು ಮಹಾತ್ಮಾಜಿ ಅವರನ್ನು ಕವನಗಳಲ್ಲಿ ಹಿಡಿದಿಟ್ಟಿದ್ದರು. ಅವುಗಳನ್ನು ಓದುತ್ತಾ ಹೋದಂತೆ, ಸಂಗ್ರಹಿಸುವ ಆಸಕ್ತಿ ಬೆಳೆದು, ನಿರಂತರವಾಗಿ ಎರಡು ವರ್ಷ ಕನ್ನಡದ ಕವನಗಳನ್ನು ಅರಸುತ್ತಾ ಸಾಗಿದೆ. ಆಗ ದೊರಕಿದ ಗಾಂಧೀಜಿ ಅವರ ಕವನಗಳನ್ನು ಒಗ್ಗೂಡಿಸಿದಾಗ, "ಕವನಗಳಲ್ಲಿ ಮೂಡಿದ ಗಾಂಧಿ" ಕಾವ್ಯಗುಚ್ಛ ಹೊರಬರಲು ಸಾಧ್ಯವಾಯಿತು. ಬಹಳ ಸಂತೋಷದ ವಿಷಯವೆಂದರೆ, ಕನ್ನಡದ ಎಲ್ಲಾ ಮಹತ್ವದ ಕವಿಗಳು, ಕವಿಯಿತ್ರಿಯರು ಗಾಂಧಿ ಅವರನ್ನು ಅರಸಿದ್ದಾರೆ, ಬೆದಕಿದ್ದಾರೆ, ಮನಸ್ಸಿನಲ್ಲಿ ಒಡಮೂಡಿಸಿಕೊಂಡು ಅನುಸಂಧಾನ ಮಾಡಿದ್ದಾರೆ. ನಂತರ ನುಡಿಗಳಲ್ಲಿ ಗೀತೆಗಳಲ್ಲಿ, ಕಾವ್ಯದಲ್ಲಿ, ಭಜನೆಗಳಲ್ಲಿ ಹಾಡುತ್ತಾ ಕನ್ನಡಿಗರಿಗೆ ಹಾಡಲು, ಮನದಲ್ಲಿ ತುಂಬಿಕೊಳ್ಳಲು ಕೃತಿರೂಪದಲ್ಲಿ ಕೊಟ್ಟಿದ್ದಾರೆ.

ರಾಷ್ಟ್ರಕವಿ ಕುವೆಂಪು, ದ.ರಾ. ಬೇಂದ್ರೆ, ಪ್ರೊ. ವಿ. ಸೀತಾರಾಮಯ್ಯ, ಮಾಸ್ತಿ ವೆಂಕಟೇಶ ಐಯ್ಯಂಗಾರ್, ದಿನಕರ ದೇಸಾಯಿ, ಎಲ್. ನರಸಿಂಹಯ್ಯ, ಜಂಬಣ್ಣ ಅಮರಚಿಂತ, ಡಿ.ಎಸ್. ಕರ್ಕಿ, ಆನಂದಕಂದ, ಪ್ರೊ. ಎಸ್.ಜಿ. ಸಿದ್ದರಾಮಯ್ಯ, ಗಂಗಾಧರ ಚಿತ್ತಾಲ, ಚಂಪಾ, ಸಿದ್ದೋಜ ಚನ್ನವೀರ ಕಣವಿ, ವೈದೇಹಿ, ಮೀನಾ, ಬಿ.ಟಿ.ಲಲಿತಾನಾಯ್ಕ, ಲಲಿತಾ ಸಿದ್ದಬಸವಯ್ಯ ಮತ್ತೆಲ್ಲಾ ಹಿರಿಯ ಕವಿಗಳು, ಗಾಂಧಿ ಅವರನ್ನು

ವರ್ತಮಾನದ ಕನ್ನಡಿಯಲ್ಲಿ ನೋಡಿದ್ದಾರೆ. ಮತ್ತು ಭಾರತ ಸಾಗುತ್ತಿರುವ ದಿಕ್ಕಿನ ಬಗ್ಗೆ, ಆತಂಕ, ಆಶಯ, ಹೊಸ ಚಿಂತನೆಯ ಕಡೆಗೆ ಬೆಳಕು ಹರಿಸಿದ್ದಾರೆ. ಕುವೆಂಪು ಅವರ "ಶ್ರೀ ಸಾಮಾನ್ಯರ ದೀಕ್ಷಾ ಗೀತೆ"ಯ

"ಕೊನೆಗೊಂಡಿತೋ ಓರ್ರೋರ್ವರ ಗರ್ವದ ಕಾಲ
ಇದು ಸರ್ವರ ಕಾಲ! ಸರ್ವೋದಯದ ಸರ್ವೋದಯ
ಮೇಲಿಲ್ಲವೋ, ಕೀಳಿಲ್ಲವೋ!
ಸರ್ವ ಸಮಾನದ ರಾಜ್ಯ"- ಎಂಬ ಸಾಲುಗಳು ಭಾರತದ ಸಂವಿಧಾನದ ಆಶಯವನ್ನೇ ಎತ್ತಿಹಿಡಿದಿದೆ. ಮತ್ತು ಗಾಂಧೀಜಿ ಅವರ ಸರ್ವೋದಯದ ಕನಸನ್ನು ಬಿತ್ತುತ್ತಿದೆ. ಡಿ.ಎಸ್. ಕರ್ಕಿ ಅವರ "ದಿವ್ಯಜ್ಯೋತಿ" ಕವನದಲ್ಲಿ

"ಸತ್ಯಪ್ರೇಮಗಳ ಸತ್ವವನ್ನು ಕಣ್ಣೆದುರು ಎತ್ತಿ ತೋರಿ,
ಎನಿತು ಸರಳ ನುಡಿ, ಎಷ್ಟು ಸಹಜ ನಡೆ,
ಮಾನವಮಹತಿಯೇನು ಅವನ ಎದೆಯ
ಉನ್ನತಿಯ ನಿಲುಕುವವ ಯಾವ ಗಿರಿಯ ಸಾಲು
ಇಹುದೆ ಅವನ ಕರುಣೆಯನು ಧರೆಗೆ ಕರೆವಂಥ ಕಾಮಧೇನು"

ಎಂಬ ನುಡಿಗಳು ಗಾಂಧೀಜಿ ಅವರ ತತ್ವಸಿದ್ಧಾಂತದ ಮಾನವೀಯ ನಡೆಯನ್ನೇ ಬಿಂಬಿಸುತ್ತವೆ. ಅಂತೆಯೇ ವೈದೇಹಿ ಅವರ "ಗಾಂಧಿ ತಾತ ಇನ್ನೂ ಬಾರದೆ ಎಲ್ಲಿರುವೆ" ಕವನದಲ್ಲಿನ

"ಅಜ್ಜನ ಕೋಲಿದು ನನ್ನಯ ಕುದುರೆ ಹಾಡುತ ಬರುವೆನು ಬಳಿಗೆ
ನೀ ಬಟಾಣಿಯ ಕೊಡು ನಾ ಗಡಿಯಾರವನು
ಬಾನ ದಾರಿಯಲಿ ಗುಡುಗುಡು ಗುಮ್ಮಟ ಹೇಳುತ ಸಾವಿರ ಕತೆಗಳನು
ಇಬ್ಬರೂ ಗಜ್ಜುಗ ಆಡೋಣ ಆರಿಸಿ ತಾರೆಗಳನ್ನು
ಚಂದಿರ ಬೆಂಚಲಿ ಬಟಾಣಿ ತಿನ್ನುತ ಟಿಕ್ ಟಿಕ್ ಗೆಳೆಯಾ ಹಾಡೋಣ
ಅಮ್ಮನು ಕರೆದರೆ ಓ ಎನ್ನದೆ ಮೋಡದ ಮರೆಯಲಿ ಅಡಗೋಣ
ಅಹಾ! ಭೂ ನಕ್ಷತ್ರವು ನೀನು ಇಲ್ಲಿಗೆ ಬಂದೆಯಾದಲ್ಲಿ"

ಎಂಬ ಸಾಲುಗಳು, ಪುಟಾಣಿ ಮಗು, ಗಾಂಧಿ ತಾತನನ್ನು ಮರಳಿ ಕರೆವ ಪ್ರೇಮದ ಕರೆ ಇದೆ. ಕುವೆಂಪು, ಬೇಂದ್ರೆ ಪ್ರೊ. ವಿ. ಸೀತಾರಾಮಯ್ಯ

ಇನ್ನೂ ಮುಂತಾದ ಕವಿಗಳು, ಗಾಂಧೀಜಿ ಅವರನ್ನು ಕುರಿತು ಹತ್ತಾರು ಕವನಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಪ್ರಾತಿನಿಧಿಕ ಕವನಗಳನ್ನು ಮಾತ್ರ ಇಲ್ಲಿ ತೆಗೆದುಕೊಳ್ಳಲಾಗಿದೆ. ಇಲ್ಲಿ ಪ್ರಮುಖವಾಗಿ, ಸುಬ್ಬು ಹೊಲೆಯಾರ್ ಅವರ 'ಮಹಾರ್ ಕೇರಿಯಲ್ಲಿ ಮಗುವಾದ ಮಹಾತ್ಮ' ಕವನದಲ್ಲಿ ಗಾಂಧೀಜಿ ಮತ್ತು ಅಂಬೇಡ್ಕರ್ ಅವರ ಅನುಸಂಧಾನವನ್ನು ಕಸ್ತೂರ್‌ಬಾ ಹಾಗೂ ರಮಾಬಾಯಿ ಅವರ ಭಾವನಾತ್ಮಕ ಕ್ಷಣಗಳಲ್ಲಿ ಹಿಡಿದಿಟ್ಟಿರುವುದು ಮತ್ತು ಇಂದಿಗೂ ಅವರನ್ನು ಅರ್ಥೈಸಿಕೊಳ್ಳಬೇಕಾದ ರೀತಿಯನ್ನು ನೆನಪಿಸುವುದು ಅರ್ಥಪೂರ್ಣವಾಗಿದೆ. ಹಾಗೆಯೇ ಡಾ. ಬಿ. ಟಿ. ಲಲಿತಾನಾಯಕ್, ಡಾ. ರಾಮಲಿಂಗೇಶ್ವರ, ಬಿ.ಎಂ. ಹನೀಫ, ಡಾ. ಲೋಕೇಶ್ ಅಗಸನಕಟ್ಟೆ, ಕೆ. ಷರೀಫಾ, ಡಾ. ಸತ್ಯಮಂಗಲ ಮಹಾದೇವ, ಕೆ.ಎನ್. ಶಿವತೀರ್ಥನ್ ಅವರ ಕವನಗಳು, ಕನ್ನಡ ನಾಡಿನ ಎಲ್ಲಾ ಸಮುದಾಯದವರಲ್ಲಿ ಮಹಾತ್ಮಾಜಿ ಅವರು ಹೊಕ್ಕಿದ್ದಾರೆ, ಚಿಂತನೆಗೆ ಹಚ್ಚಿದ್ದಾರೆ ಎಂಬುದನ್ನು ಬಿಂಬಿಸುತ್ತದೆ.

ಮತ್ತೊಂದು ಸುವಿಚಾರವೆಂದರೆ ಕನ್ನಡದ ಕವಿಗಳು ಗಾಂಧಿ ಅವರನ್ನು ಕಂಡ ಬಗೆಯನ್ನು ಮತ್ತು ಗಾಂಧೀಜಿ ಅವರು ಹುತಾತ್ಮರಾದಾಗ, ಕನ್ನಡ ನಾಡಿನ ಕವಿಬಳಗದವರ ಬಾಷ್ಪಾಂಜಲಿಗಳು ನಮ್ಮನ್ನು ಅಶ್ರುತರ್ಪಣದೊಳಗೆ ಮುಳುಗಿಸುತ್ತವೆ. ನಂತರದಲ್ಲಿ ಕಳೆದ ನಾಲ್ಕು ದಶಕಗಳಂದೀಚೆಗೆ ಯುವ ಮನಸ್ಸುಗಳು ಗಾಂಧೀಜಿ ಅವರನ್ನು ಅಪ್ಪಿಕೊಂಡ, ಒಪ್ಪಿಕೊಂಡ, ತರ್ಕಿಸಿದ ಕವನಗಳನ್ನೂ ಇಲ್ಲಿ ಒಗ್ಗೂಡಿಸಲಾಗಿದೆ. ನಳಿನಾ, ಜ.ನಾ. ತೇಜಶ್ರೀ, ಈಶ್ವರ ದೈತೋಟ, ಬಿಂದುಮಾಲಿನಿ ಮುಂತಾದವರ ಕವನಗಳು ಗಮನ ಸೆಳೆಯುತ್ತವೆ. "ಮತ್ತೆ ಮತ್ತೆ ಗಾಂಧಿ" ಕವನ ಸಂಕಲನವನ್ನು ಶೇಷಾದ್ರಿಪುರಂ ಕಾಲೇಜು ಕನ್ನಡ ಸಂಘ ಹೊರತಂದಿರುವುದು ಮತ್ತು ಅಲ್ಲಿನ ಪ್ರಾಧ್ಯಾಪಕ ಮಿತ್ರರು, ಗಾಂಧಿ ಕವನಗಳನ್ನು ಬರೆದಿರುವುದು ಮತ್ತು ಸಂಪಾದಕರಾದ ಹೆಚ್.ಎಂ. ಗೀತಾ ಅವರು ಅಂದವಾಗಿ ಕ್ರೋಢೀಕರಿಸಿರುವುದು ಸಹ ಶ್ಲಾಘನೀಯ ವಿಷಯವಾಗಿದೆ. ಕಾಲೇಜೊಂದು ಗಾಂಧಿ ಬಗ್ಗೆ ಇಂಥಹ ಕವನ ಸಂಕಲನವನ್ನು ಹೊರತಂದಿರುವುದು ಸಹ "ಪ್ರಥಮವಾಗಿದೆ" ಎಂದೆನಿಸುವುದರಿಂದ ಅವರಿಗೆ ಗೌರವಪೂರ್ವಕ ನಮನಗಳು.

ಗಾಂಧೀಜಿ ಅವರ ತತ್ವಗಳು ಆದರ್ಶಗಳ ಕುರಿತಾಗಿ, ಕಾಸರಗೋಡು, ವಿಶ್ವಮೈತ್ರಿ ಟ್ರಸ್ಟ್ ಅವರು ಕವನ ಸಂಕಲನ ಬಹಳ ಹಿಂದೆಯೇ ಅಂದರೆ ಐದು ದಶಕಗಳ ಹಿಂದೆಯೇ ಪ್ರಕಟಿಸಿರುವುದು ಅತ್ಯಂತ ಹೆಮ್ಮೆಯ ವಿಚಾರವಾಗಿದೆ. ಹೀಗೆ ಗಾಂಧಿ ಕವನಗಳ ಹುಡುಕಾಟದಲ್ಲಿದ್ದಾಗಲೇ ಗಾಂಧಿ ಕುರಿತಾಗಿ ತಿ.ತಾ. ಶರ್ಮ ಅವರ ವಚನಗಳು, ಗಾಂಧೀಜಿ ಆಶ್ರಮ ಭಜನಾವಳಿಗಳು ದೊರಕಿದ್ದು, ಅವುಗಳನ್ನು ಇಲ್ಲಿ ಸೇರಿಸಿಕೊಳ್ಳಲು ಅನುವಾಗಿರುವುದು ನನಗೆ ಸಂತೋಷ ತಂದಿದೆ. ಭಾರತದ ಪ್ರಸಿದ್ಧ, ಸಾಮಾಜಿಕ, ಸಾಂಸ್ಕೃತಿಕ ಚಿಂತಕ ರವೀಂದ್ರನಾಥ ಟ್ಯಾಗೂರ್ ಅವರ ಗೀತೆಗಳು, ಬಂಗಾಳಿ ಹಾಡುಗಳು ಲಭಿಸಿದ್ದೂ ಕೂಡ ಸುಕೃತವೆಂದೇ ಭಾವಿಸಿದ್ದೇನೆ. ಗಾಂಧಿ ಅವರನ್ನು ಅರಸುತ್ತಾ ಕನ್ನಡ ಕಾವ್ಯ ಪ್ರಪಂಚದ ಮೊದಲ ಪಾದಕ್ಕೆ ಹೊಕ್ಕಾಗ, ಅಂದಿನ ಪ್ರಜಾಜನರು, ಭಾರತದ ಸ್ವಾತಂತ್ರ್ಯ ಹೋರಾಟ ಮತ್ತು ಗಾಂಧಿಯನ್ನು ಕುರಿತು ಅನೇಕ ಲಾವಣಿಗಳನ್ನು, ಜನಪದ ಹಾಡುಗಳನ್ನು ಕಟ್ಟಿ, ಊರೂರು ಸುತ್ತುತ್ತಾ, ಜನರನ್ನು ಸ್ವಾಂತ್ರ್ಯ ಸಂಗ್ರಾಮಕ್ಕೆ ಸಜ್ಜುಗೊಳಿಸಿದ್ದನ್ನು, ಸ್ವಾತಂತ್ರ್ಯದ ನಿಕಟಪೂರ್ವ ಘಟ್ಟದ ಇತಿಹಾಸದ ಪದರುಗಳು ತೆರೆದುಕೊಂಡವು. ಅವು ದೊರಕಿದ್ದು ಹಾಗೂ ಅದನ್ನು ಇಲ್ಲಿ ಒಗ್ಗೂಡಿಸುವುದು ಮನಕ್ಕೆ ಮುದನೀಡಿದೆ. ಅದರಂತೆ ಗಾಂಧಿ ಅವರ ಮತ್ತು ಆ ವರ್ತಮಾನದ ಭಾರತವನ್ನು "ಗಾಂಧೀ ಶತಕ" ಎಂಬ ಸುಧೀರ್ಘ ಮಾಲೆಯನ್ನು ಶ್ರೀ ಮೈ.ಶಾ. ದಾಸಪ್ಪ ಅವರು 1948ರಲ್ಲಿ ಬರೆದಿರುವುದು ಸಹ ಅಭಿನಂದನಾರ್ಹವಾದುದಾಗಿದೆ. ಅದರಲ್ಲಿನ ಪ್ರಮುಖ ಭಾಗವನ್ನು ಇಲ್ಲಿ ಸೇರಿಸಲಾಗಿದೆ.

ಇದು ಕನ್ನಡ ಭಾಷಾ ಸಾಹಿತ್ಯದಲ್ಲಿ ಸಮಗ್ರವಾದ ಮಹಾತ್ಮರ ಕವನಗಳ ಸಂಕಲನವಾಗಲಿ ಎಂಬ ಆಶಯದಿಂದ ಮಾಡಿದ ಪ್ರಯತ್ನ – ಗಾಂಧಿ ಅನುಯಾಯಿಗಳ, ಕನ್ನಡ ಸಾಹಿತ್ಯದ ಕಾವ್ಯಪ್ರಿಯರ ಮನಮುಟ್ಟಲಿ ಎಂದು ಆಶಿಸುತ್ತೇನೆ. ಈ ಕಾವ್ಯಗುಚ್ಛವನ್ನು ಪ್ರೀತಿಯಿಂದ ಸ್ವೀಕರಿಸುವಿರಾಗಿ ಭಾವಿಸಿದ್ದೇನೆ. ನನ್ನ ತುರ್ತು ಕೋರಿಕೆಗೆ ಓಗೊಟ್ಟು ಈ ಕವನ ಸಂಕಲನಕ್ಕೆ ಅರ್ಥಪೂರ್ಣವಾದ ಮುನ್ನುಡಿಯನ್ನು ಬರೆಯುತ್ತಾ ಡಾ. ಬೈರಮಂಗಲ ರಾಮೇಗೌಡರು ಹೇಳಿದ ಮಾತುಗಳು "ಕವನಗಳಲ್ಲಿ

ಮೂಡಿದ ಗಾಂಧಿ ಸಂಕಲನದಲ್ಲಿನ ಒಂದೊಂದು ಕವಿತೆಯಲ್ಲೂ ಗಾಂಧಿ ಕುರಿತ ಪ್ರೀತಿ, ಅಭಿಮಾನ, ಗೌರವ ಉಕ್ಕಿ ಹರಿದಿದೆ. ಗಾಂಧಿಯನ್ನು ಮಾನವತೆಯ ಆದರ್ಶ ಎಂದು ಭಾವಿಸಲಾಗಿದೆ. ಗಾಂಧಿ ಚಿಂತನೆಗಳು ಇಂದಿಗೂ ಪ್ರಸ್ತುತ ಎಂದು ನಂಬಲಾಗಿದೆ. ಗಾಂಧಿಯನ್ನು ಶಿಖರ ಸೂರ್ಯನಂತೆ ಬೆಳಗಿಸುವಂತಹ ಇಂಥದೊಂದು ಅಪರೂಪದ ಪ್ರಯತ್ನದಿಂದ ಮಹಾತ್ಮ ಗಾಂಧಿಗೆ ಮಹಾ ಗೌರವ ಸಲ್ಲಿಸಿರುವುದಕ್ಕಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಅವರನ್ನು ಅಭಿನಂದಿಸುತ್ತೇನೆ ಮತ್ತು ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರನ್ನು ವಿಶೇಷವಾಗಿ ಅಭಿನಂದಿಸುತ್ತೇನೆ" ಎಂದು ಗೌರವದ ನುಡಿಗಳನ್ನಾಡಿದ್ದಕ್ಕಾಗಿ ನಾನು ಹೃತ್ಪೂರ್ವಕ ಧನ್ಯವಾದಗಳನ್ನು ತಿಳಿಸುತ್ತೇನೆ. ಈ ಕವನ ಸಂಕಲನದ ಕ್ರೋಢೀಕರಣ ಅನುಕ್ರಮಣಿಕೆ, ಕರಡು ತಿದ್ದುಪಡಿಯಲ್ಲಿ ಸಹಕರಿಸಿದ ಡಾ. ವಸುಂಧರಾ ಭೂಪತಿ, ಡಾ. ರಾಮಲಿಂಗೇಶ್ವರ, ನಳಿನ ಡಿ., ರುದ್ರಪ್ಪ ಹನಗವಾಡಿ ಈ ಮಿತ್ರ ಬಳಗದವರಿಗೆ ಗೌರವಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಮಹಾತ್ಮಾಜಿ ಅವರ ತತ್ವ, ಸಿದ್ಧಾಂತ, ಸಾಹಿತ್ಯ, ಪತ್ರಿಕೆ ಇಂಥಹ ಹಲವು ಹತ್ತು ಆಯಾಮಗಳ ಕಾರ್ಯಗಳಿಗೆ ಬೆನ್ನೆಲುಬಾಗಿ ನಿಂತು ಸದಾ ಪ್ರೋತ್ಸಾಹಿಸುತ್ತಾ, ಬಾಗಿಯಾಗುತ್ತ, ಕನ್ನಡದ ಸಾಹಿತ್ಯಕ್ಕೆ ಅಪೂರ್ವವಾದ ಈ ಕೃತಿಯನ್ನು ಸೇರ್ಪಡೆ ಮಾಡಲು ಕೈ ಜೋಡಿಸಿದ ಗಾಂಧಿ ಭವನದ ಅಧ್ಯಕ್ಷರಾದ ನಾಡೋಜ ಡಾ. ವೂಡೇ ಪಿ. ಕೃಷ್ಣ ಅವರಿಗೆ ಅಭಿನಂದನೆಗಳನ್ನು ತಿಳಿಸುತ್ತೇನೆ. ಈ ಕೃತಿಯನ್ನು ಮುದ್ರಣಗೊಳಿಸಿ ಪ್ರಕಟಿಸಲು ಸಹಕರಿಸಿದ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಎಲ್ಲಾ ಸದಸ್ಯರುಗಳಿಗೂ ಕೃತಜ್ಞತೆಗಳು ಸಲ್ಲುತ್ತವೆ. ಇದನ್ನು ಅಂದವಾಗಿ ಮುದ್ರಿಸಿದ ಕ್ರಿಯೇಟಿವ್‌ಗ್ರಿಕ್ಸ್‌ನ ಮಹೇಶ್ ಮತ್ತು ತಂಡಕ್ಕೆ ಆತ್ಮೀಯ ನಮನಗಳು.

ಇಂದಿರಾ ಕೃಷ್ಣಪ್ಪ
ಗೌ॥ ಕಾರ್ಯದರ್ಶಿ

# ಮುನ್ನುಡಿ

ಬ್ರಿಟಿಷರ ದಾಸ್ಯದಿಂದ ದೇಶಬಾಂಧವರನ್ನು ಬಿಡುಗಡೆಗೊಳಿಸುವಲ್ಲಿ ಮುಖ್ಯಪಾತ್ರ ವಹಿಸಿದ ಮಹಾತ್ಮ ಗಾಂಧಿಯನ್ನು ನಾಥುರಾಮ್ ಗೋಡ್ಸೆ ದೇಶಕ್ಕೆ ಸ್ವಾತಂತ್ರ್ಯ ಬಂದ ಕೇವಲ ಐದೂವರೆ ತಿಂಗಳಲ್ಲೇ ಹತ್ಯೆ ಮಾಡಿದ್ದು ದೇಶದ್ರೋಹಿ ಶಕ್ತಿಗಳು ಈ ದೇಶವನ್ನು ಎತ್ತ ಕೊಂಡೊಯ್ಯುತ್ತಿವೆ ಎನ್ನುವುದರ ಮುನ್ಸೂಚನೆಯಾಗಿತ್ತು. ಅವು ಸ್ವಾತಂತ್ರ್ಯದ ಅಮೃತ ಮಹೋತ್ಸವ ಆಚರಿಸುತ್ತಿರುವ ಈ ಹೊತ್ತಿಗೆ ನೂರಾಗಿ, ಸಾವಿರವಾಗಿ, ಗಾಂಧಿ ಜಯಂತಿಯ ದಿನ ಗಾಂಧಿಯನ್ನು ಅವಮಾನಿಸುವ, ಗಾಂಧಿ ಹುತಾತ್ಮರಾದ ದಿನ, ಗಾಂಧಿ ಚಿತ್ರಕ್ಕೆ ಸಾರ್ವಜನಿಕವಾಗಿ ಗುಂಡಿಕ್ಕುವ ಮೂಲಕ ವಿಕೃತ ಆನಂದವನ್ನು ಅನುಭವಿಸುತ್ತಿವೆ. ಅಂಥ ವಿಕೃತಾನಂದ ಕೇಡಿಗರನ್ನು ಪ್ರಭುತ್ವ ಶಿಕ್ಷಿಸುವ ಬದಲು ನಿರ್ಲಕ್ಷಿಸುವ ಜಾಣತನ ತೋರುತ್ತಿರುವುದು ಮಾತ್ರವಲ್ಲದೆ, ರಾಜಕೀಯ ಸ್ಥಾನಮಾನಗಳನ್ನು ದಯಪಾಲಿಸುತ್ತ ಪರೋಕ್ಷವಾಗಿ ಅಂಥ ಚಟುವಟಿಕೆಗಳನ್ನು ಮತ್ತು ಅಂಥವುಗಳನ್ನು ಎಸಗುವವರನ್ನು ಪ್ರೋತ್ಸಾಹಿಸುತ್ತಿದೆಯೋ ಎನ್ನುವ ಅನುಮಾನ ಸಹಜವಾಗಿಯೇ ಉದ್ಭವವಾಗುತ್ತದೆ. ಅಧಿನಾಯಕರು ಗಾಂಧಿಯ ಗುಣಗಾನ ಮಾಡುತ್ತ ಮೆರೆಸುವ ಹೊತ್ತಿನಲ್ಲೇ ಪುಡಿ ನಾಯಕರು ಗಾಂಧಿಯ ಬಿಂಬವನ್ನು ಭಂಜಿಸುವ ಕೆಲಸವನ್ನು ವ್ಯವಸ್ಥಿತವಾಗಿ ಮಾಡುತ್ತಿದ್ದರೂ ಅಂಥವರನ್ನು ಶಿಕ್ಷಿಸದೆ, ಬುದ್ಧಿಯನ್ನಾದರೂ ಹೇಳದೆ ಮೌನಕ್ಕೆ ಶರಣಾಗುವ ಇಬ್ಬಗೆಯ ನೀತಿಯೇ ಪ್ರಶ್ನಾರ್ಹವಾಗಿದೆ.

ಗಾಂಧಿ ಮತ್ತೆ ಮತ್ತೆ ಹೀಗೆ ಆಪತ್ತಿಗೆ ಒಳಗಾಗುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ 'ಕವನಗಳಲ್ಲಿ ಮೂಡಿದ ಗಾಂಧಿ' ಹೆಸರಿನಲ್ಲಿ, ಜಾನಪದದಲ್ಲಿ ಗಾಂಧಿ ಗಾನ, ಸ್ವಾತಂತ್ರ್ಯ ಸಂಗ್ರಾಮದ ಲಾವಣಿಗಳು, ಕವಿಗಳ ಕಣ್ಣಲ್ಲಿ ಮಹಾತ್ಮ ಗಾಂಧಿ, ಗಾಂಧಿ ಭಜನೆಗಳು, ಗಾಂಧಿ ವಚನಗಳು, ಹೀಗೆ ವಿಭಾಗವಾರು

175ಕ್ಕೂ ಮಿಕ್ಕಿ ರಚನೆಗಳನ್ನು 300 ಪುಟಗಳ ವಿಶಾಲ ವ್ಯಾಪ್ತಿಯಲ್ಲಿ ಪ್ರಕಟಿಸುತ್ತಿರುವುದು ಗಾಂಧಿಯನ್ನು ಹಲವು ಆಯಾಮಗಳಲ್ಲಿ ಅಧ್ಯಯನ ಮಾಡಲು ಮತ್ತು ಪುಟ್ಟ ಕನ್ನಡಿಗಳಲ್ಲಿ ನೂರಾರು ಗಾಂಧಿ ಬಿಂಬಗಳನ್ನು ದರ್ಶಿಸಲು ಸಾಧ್ಯವಾಗುವಂತೆ ಮಾಡಿದೆ. ಜನಪದ ಸಾಹಿತ್ಯದಲ್ಲಿಯೂ, ಲಾವಣಿಗಳಲ್ಲಿಯೂ ಸ್ಥಾನ ಪಡೆದುಕೊಳ್ಳುವುದು, ಕೀರ್ತಿಗೆ ಪಾತ್ರವಾಗುವುದು ಎಂದರೆ ಅನಕ್ಷರಸ್ಥ ಜನಸಾಮಾನ್ಯರೊಳಗೂ ಗಾಂಧಿ ಇಳಿದಿದ್ದಾರೆ ಎಂದೇ ಅರ್ಥ. ಮಾಧ್ಯಮಗಳ ಭರಾಟೆಯಾಗಲೀ, ಅಬ್ಬರವಾಗಲೀ ಇಲ್ಲದಿರುವ ಕಾಲದಲ್ಲಿಯೇ ರಚನೆಯಾಗಿರುವ ಈ ಹಾಡುಗಳು ಜನರ ನೆನಪಿನಿಂದಲೇ ಅಮರವಾಗಿ, ತಲೆಮಾರನ್ನು ದಾಟಿಕೊಂಡು ಬಂದಿವೆ ಎಂದರೆ ಗಾಂಧಿ ಹಾಡುವವರಿಗೂ, ಹಾಡು ಕೇಳಿಸಿಕೊಳ್ಳುವವರಿಗೂ ಸಮಾನವಾಗಿ ಬೇಕಾಗಿದ್ದರು; ಗಾಂಧಿಯ ಮೇಲೆ ಹಾಡು ಕಟ್ಟುವುದು, ಅದನ್ನು ಕೇಳಿಸಿಕೊಳ್ಳುವುದು ಪುಣ್ಯಕಾರ್ಯವೆಂದೇ ಅವರು ನಂಬಿದ್ದರು. ಅದರಿಂದಾಗಿಯೇ ಬ್ರಿಟಿಷರ ಸುಲಿಗೆ, ಶೋಷಣೆ, ದೌರ್ಜನ್ಯಗಳಿಂದ ಬಿಡುಗಡೆಗೊಳಿಸಿದ, ಜನರೊಂದಿಗೆ ಜನಸಾಮಾನ್ಯನಂತಿದ್ದ ಗಾಂಧಿಯನ್ನು ಅವರು ದೈವ ಸ್ವರೂಪಿಯೆಂದೇ ಕೊಂಡಾಡಿದ್ದಾರೆ. ವಿಶ್ವಕವಿ ರವೀಂದ್ರನಾಥ ಠಾಕೂರರು 'ಗಾಂಧಿ ಮಹಾರಾಜ' ಎಂದೂ, ಜಯದೇವಿತಾಯಿ ಲಿಗಾಡೆ 'ಗಾಂಧಿ ಮಹಾತ್ಮ' ಎಂದೂ, ಬೆಳಗೆರೆ ಜಾನಕಮ್ಮ 'ಕರ್ಮಯೋಗಿ' ಎಂದೂ, ಡಿ.ಎಸ್. ಕರ್ಕಿ 'ದಿವ್ಯಜ್ಯೋತಿ' ಎಂದೂ, ಸಿಂಪಿ ಲಿಂಗಣ್ಣ 'ಶಾಣ್ಯಾ ಗಾಂಧಿ' ಎಂದೂ, ಪಿ.ಎಸ್. ರಾಮಾನುಜಂ 'ಅದ್ಭುತ ಸನ್ಯಾಸಿ' ಎಂದೂ, ಸುಬ್ಬು ಹೊಲೆಯಾರ್ 'ಮಹಾರ್ ಕೇರಿಯಲ್ಲಿ ಮಗುವಾದ ಗಾಂಧಿ' ಎಂದೂ, ಮೀನಾ ಮೈಸೂರು 'ಮಾಯಾದೀಪ' ಎಂದೂ, ಕೆ.ಎಂ. ರೇವಣ್ಣ 'ದೇವರಲ್ಲದೆ ಮತ್ತೇನು' ಎಂದೂ, ಗಣಪತಿ ಚಲವಾದಿ 'ಶಾಂತಿದೂತ' ಎಂದೂ, ಇಂದಿರಾ ಕೃಷ್ಣಪ್ಪ ಅವರು 'ಅಜರಾಮರ' ಎಂದೂ, ಬಂದಗದ್ದೆ ರಾಧಾಕೃಷ್ಣ 'ಸಿಜಿದ ಮುಖಿಗಳು' ಎಂದೂ, ಎಲ್. ನರಸಿಂಹಯ್ಯ 'ಸರ್ವೋದಯದ ಕನಸಿಗ' ಎಂದೂ, ಸೋಮು ಕುದರಿಹಾಳ 'ಸರ್ವರೂಪಿ' ಎಂದೂ, ಚಂದ್ರಶೇಖರ ಪೈ 'ಬೆಳಕಿನತ್ತ

ನಡೆಸಿದ ಚಂದ್ರ' ಎಂದೂ ಕರೆದಿರುವುದನ್ನೂ, ಮತ್ತು ಸ್ಮರಿಸಿರುವುದನ್ನು ಗಮನಿಸಿದರೆ ಗಾಂಧಿಯ ಅನಂತ ಮುಖಗಳು ನಮ್ಮೆದುರು ಮೂಡಿ ನಿಲ್ಲುತ್ತವೆ. ಗಾಂಧಿ ಕುರಿತು ಕನ್ನಡದಲ್ಲಿ ಈವರೆಗೆ ಬಂದಿರುವ ಕವಿತೆಗಳೇ ನೂರೈವತ್ತಕ್ಕೂ ಹೆಚ್ಚಿನ ಸಂಖ್ಯೆಯಲ್ಲಿವೆ. ಕವಿಗಳಾಗಿಯೇ ಹೆಸರು ಮಾಡಿದ ಕುವೆಂಪು, ಬೇಂದ್ರೆ, ಮಾಸ್ತಿ, ಆನಂದಕಂದ, ಡಿ.ಎಸ್. ಕರ್ಕಿ, ದಿನಕರ ದೇಸಾಯಿ, ಎಂ.ವಿ. ಸೀತಾರಾಮಯ್ಯ, ಬಿ.ಎಂ.ಶ್ರೀ. ಗೋಪಾಲಕೃಷ್ಣ ಅಡಿಗ, ಚೆನ್ನವೀರ ಕಣವಿ, ಸಾ.ಶಿ. ಮರುಳಯ್ಯ, ಚಂದ್ರಶೇಖರ ಪಾಟೀಲ, ವೈದೇಹಿ, ಎಸ್.ಜಿ. ಸಿದ್ಧರಾಮಯ್ಯ, ರಾಮಚಂದ್ರ ಶರ್ಮ, ಬಿ.ಟಿ. ಲಲಿತಾ ನಾಯಕ್, ಲಕ್ಷ್ಮೀಪತಿ ಕೋಲಾರ, ಲಲಿತಾ ಸಿದ್ದಬಸವಯ್ಯ ಮುಂತಾದವರು ಗಾಂಧಿ ಬಗೆಗಿನ ಪ್ರೀತಿ, ಭಕ್ತಿ, ಆದರ, ಅಭಿಮಾನವನ್ನು ವ್ಯಕ್ತಪಡಿಸಿದ್ದಾರೆಂದರೆ ಇನ್ನಿತರ ಭಾರತೀಯ ಭಾಷೆಗಳಲ್ಲೂ ಇಂಗ್ಲಿಷ್‌ನಲ್ಲೂ ರಚನೆಯಾಗಿರುವ ಕವಿತೆಗಳ ಸಂಖ್ಯೆ ಎಷ್ಟು ಇರಬಹುದೆಂದು ಸುಮ್ಮನೆ ಅಂದಾಜು ಮಾಡಿದರೂ ಅದು ನಮ್ಮನ್ನು ವಿಸ್ಮಯಗೊಳಿಸದೆ ಇರಲಾರದು. ಇಷ್ಟು ಮಾತ್ರವಲ್ಲದೆ ಗಾಂಧಿ ನಿರ್ಗಮಿಸಿ ಮೂವತ್ತು, ನಲವತ್ತು ವರ್ಷಗಳ ನಂತರ ಹುಟ್ಟಿದ ಹೊಸ ತಲೆಮಾರಿನ ಕವಿಗಳಿಗೂ ಗಾಂಧಿ ಪ್ರಿಯವಾಗುತ್ತಾರೆ, ಗಾಂಧಿಯ ಜೀವನ-ತತ್ವಗಳು ಇಷ್ಟವಾಗುತ್ತವೆ, ಗಾಂಧಿಯ ಆತ್ಮಕಥನವನ್ನು ಪ್ರೀತಿಯಿಂದ ಓದುತ್ತಾರೆ, ಗಾಂಧಿ ಸ್ಮಾರಕಗಳಿಗೆ ಭೇಟಿ ಕೊಡುತ್ತಾರೆ, ಗಾಂಧಿಯ ಜೀವನ ಮತ್ತು ಸಾಧನೆಗಳ ಬಗೆಗೆ ಹೆಚ್ಚು ತಿಳಿಯಲು ಕಾತರಿಸುತ್ತಾರೆ, ಗಾಂಧಿಯ ಬಗೆಗೆ ಬಂದಿರುವ ಸಿನಿಮಾ-ನಾಟಕಗಳನ್ನು ನೋಡಲು ಕುತೂಹಲ ತೋರುತ್ತಾರೆ ಎಂದರೆ ಏನರ್ಥ? ಬೇರೆ ಬೇರೆ ಕ್ಷೇತ್ರಗಳ ಸಾಧಕರು ಮಾತ್ರವಲ್ಲದೆ, ವಿಶ್ವಸುಂದರಿ ಸ್ಪರ್ಧೆಯಲ್ಲಿ ಭಾಗವಹಿಸುವವರೂ ಗಾಂಧಿ ವಿಚಾರಗಳಿಂದ ಪಡೆದುಕೊಂಡಿರುವ ಸ್ಫೂರ್ತಿಯನ್ನು ಸಂತೋಷದಿಂದ ಹೇಳಿಕೊಂಡು ಎದುರು ಕುಳಿತವರನ್ನು ರೋಮಾಂಚನಗೊಳಿಸುವುದು ಮತ್ತು ಅವರಿಂದ ಚಪ್ಪಾಳೆ ಗಿಟ್ಟಿಸಿಕೊಳ್ಳುವುದು ಏನನ್ನು ಸೂಚಿಸುತ್ತದೆ? ಗಾಂಧಿಯನ್ನು ಹಿನ್ನೂಕಿ, ಹೊಸ ತಲೆಮಾರನ್ನು ಗಾಂಧಿ ಪ್ರಭಾವದಿಂದ ದೂರವಿಡಲು ತಲೆಕೆಳಕಾಗಿ ನಿಂತು ಪ್ರಾಣಾಯಾಮ ಮಾಡಿದರೂ

ಗಾಂಧಿ ಎಲ್ಲಿಂದಲೋ ಯಾವ ರೂಪದಲ್ಲಿಯೋ ಜಾತಿ, ಮತ, ವರ್ಗ, ವರ್ಣ, ಪಂಥಗಳನ್ನು ದಾಟಿ ಬಹುಸಂಖ್ಯಾತ ಭಾರತೀಯರ ಅಂತರಾತ್ಮದಲ್ಲಿ ನೆಲೆಗೊಂಡು ಎದೆಯ ತಂತಿಯನ್ನು ಮೀಟುತ್ತಲೇ ಇರುತ್ತಾರೆ. ಗಾಂಧಿಯನ್ನು ಮತ್ತೆ ಮತ್ತೆ ಕೊಲ್ಲುವ ಅವಿವೇಕಿಗಳಿಗೆ ಇದನ್ನು ಅರ್ಥಮಾಡಿಸಬೇಕಾಗಿದೆ.

'ಕವನಗಳಲ್ಲಿ ಮೂಡಿದ ಗಾಂಧಿ' ಸಂಕಲನದಲ್ಲಿನ ಒಂದೊಂದು ಕವಿತೆಯಲ್ಲೂ ಗಾಂಧಿ ಕುರಿತ ಪ್ರೀತಿ, ಅಭಿಮಾನ, ಗೌರವ ಉಕ್ಕಿ ಹರಿದಿದೆ. ಗಾಂಧಿಯನ್ನು ಮಾನವತೆಯ ಆದರ್ಶ ಎಂದು ಭಾವಿಸಲಾಗಿದೆ. ಗಾಂಧಿ ಚಿಂತನೆಗಳು ಇಂದಿಗೂ ಪ್ರಸ್ತುತ ಎಂದು ನಂಬಲಾಗಿದೆ. ಗಾಂಧಿ ನಡೆದ ದಾರಿಯಲ್ಲಿ ಕ್ರಮಿಸಬೇಕೆನ್ನುವ ಸಂಕಲ್ಪವಿದೆ. ಗಾಂಧಿ ಹಂತಕನ ಬಗೆಗೆ ಇರುವ ಸಿಟ್ಟನ್ನು ಹೊರಗೆ ಹಾಕಲಾಗಿದೆ. ಗಾಂಧಿ ಪ್ರೀತಿಯ ಅಸ್ತ್ರಗಳಾಗಿ ಸತ್ಯ, ಶಾಂತಿ, ತ್ಯಾಗ, ಕರುಣೆ, ಅಹಿಂಸೆಯನ್ನು ಪ್ರಯೋಗ ಮಾಡಿದ ಬಗೆಗೆ ಮೆಚ್ಚುಗೆಯನ್ನು ಸೂಚಿಸಿರುವುದಲ್ಲದೆ. ಅವುಗಳನ್ನು ತಮ್ಮದಾಗಿ ಮಾಡಿಕೊಳ್ಳಬೇಕೆನ್ನುವ ಆಸಕ್ತಿಯಿದೆ. ಸಾಹಿತ್ಯ, ಶಿಕ್ಷಣ, ಕಲೆ, ಸಿನಿಮಾ, ಹೋರಾಟ, ರಾಜಕಾರಣ, ಪರಿಸರ ಮುಂತಾದ ಕ್ಷೇತ್ರಗಳಲ್ಲೂ ಗಾಂಧಿ ಪ್ರಭಾವ ದಟ್ಟವಾಗಿರುವುದನ್ನು ಕವಿಗಳು ಗುರುತಿಸಿರುವುದಂತೂ ಹೊಸ ತಲೆಮಾರು ಸಾಗಬೇಕಾದ ದಿಕ್ಕನ್ನು ನಿರ್ದೇಶಿಸುವಂತಿದೆ. ಅಪ್ಪಟ ದೇಶಪ್ರೇಮಿಯನ್ನು ದೇಶದ್ರೋಹಿಯೆಂದು ಅನುಮಾನಿಸುವ, ಆರೋಪಿಸುವ ಮತ್ತು ದೇಶದ್ರೋಹಿಯ ಲಕ್ಷಣ ಇರುವವರನ್ನು ದೇಶಭಕ್ತರಂತೆ, ಮಹಾತ್ಮರಂತೆ ಸಾರ್ವಜನಿಕವಾಗಿ ಮೆರೆಸುವ, ಗಾಂಧಿ ಹಂತಕನಿಗೆ ಮಹಾತ್ಮನ ಬಿರುದುಕೊಟ್ಟು ಯುವಜನತೆಯ ಆದರ್ಶವೆಂದು ಬಿಂಬಿಸುವ, ಕೇವಲ ಎಪ್ಪತ್ತು ವರ್ಷಗಳ ಹಿಂದಿನ ನೈಜ ಇತಿಹಾಸವನ್ನು ತಿರುಚಿ ಸುಳ್ಳನ್ನೇ ನಿಜವೆಂದು ಸಾರುವ ವಿಲಕ್ಷಣ ವಿದ್ಯಮಾನಗಳ ಬದಲಾದ ಪರಿಸ್ಥಿತಿಯಲ್ಲಿ ಸರ್ವಾಧಿಕಾರಿ ಧೋರಣೆಯ ರಾಜಕಾರಣ ಗಾಂಧೀಜಿಯನ್ನು, ಗಾಂಧಿ ವಿಚಾರಧಾರೆಗಳನ್ನು ಹೊರದಬ್ಬಲು ಪ್ರಯತ್ನಿಸಿದಷ್ಟೂ ಜನಸಾಮಾನ್ಯರ ಭಾವನೆಗಳಲ್ಲಿ, ಕನಸುಗಳಲ್ಲಿ, ಸ್ಮರಣೆಯಲ್ಲಿ, ದೈನಂದಿನ ಬದುಕಿನ ಲಯದಲ್ಲಿ ಗಾಂಧೀಜಿ

ನೆಲಕ್ಕೆ ಬಡಿದಷ್ಟೂ ಮೇಲೆ ಮೇಲೆ ಪುಟಿಯುವ ಚೆಂಡಿನಂತೆ ಚಿಮ್ಮಿ ಬರುತ್ತಿರುವುದು ವಿಸ್ಮಯಕಾರಿಯಾಗಿದೆ. ಗಾಂಧಿ ಪ್ರತಿಮೆಯನ್ನು ಭಂಜಿಸುವ, ಗಾಂಧಿ ಚಿತ್ರಕ್ಕೆ ಮಸಿ ಬಳಿಯುವ, ಗಾಂಧಿಯನ್ನು ಅವಮಾನಿಸಿದವರನ್ನು ಸನ್ಮಾನಿಸುವ ಹೀನ ಪ್ರಯತ್ನಗಳಿಗೆ ಎದುರೇಟು ಕೊಡುವಂತಿರುವ ಈ ಕವಿತೆಗಳು ಗಾಂಧಿಯನ್ನು ಶಿಖರ ಸೂರ್ಯನಂತೆ ಬೆಳಗಿಸುತ್ತವೆ. ಇಂಥದೊಂದು ಅಪರೂಪದ ಪ್ರಯತ್ನದಿಂದ ಮಹಾತ್ಮ ಗಾಂಧಿಗೆ ಮಹಾಗೌರವವನ್ನು ಸಲ್ಲಿಸುತ್ತಿರುವುದಕ್ಕಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯನ್ನು, ಅದರ ಗೌರವ ಕಾರ್ಯದರ್ಶಿಗಳೂ ಸಂಕಲನದ ಪ್ರಧಾನ ಸಂಪಾದಕರೂ ಆದ ಇಂದಿರಾ ಕೃಷ್ಣಪ್ಪ ಅವರನ್ನು ಅಭಿನಂದಿಸುತ್ತೇನೆ. ಗಾಂಧಿ ಕುರಿತು ಎಲ್ಲೆಲ್ಲಿಯೋ ಪ್ರಕಟವಾಗಿರುವ ಕವಿತೆಗಳನ್ನು ಹುಡುಕಿ, ಅವುಗಳನ್ನೆಲ್ಲ ಒಂದೆಡೆ ತರುವುದು ನಿಜಕ್ಕೂ ಶ್ರಮದಾಯಕ ಮತ್ತು ಸಾಹಸದ ಕೆಲಸ. ಈ ಸಾಹಸದಲ್ಲಿ ಇಂದಿರಾ ಕೃಷ್ಣಪ್ಪ ಅವರು ಯಶಸ್ವಿಯಾಗಿದ್ದಾರೆ. ಕನ್ನಡದ ನೂರಾರು ಕವಿಮನಸ್ಸುಗಳಲ್ಲಿ ಮೂಡಿದ ಗಾಂಧಿ ಎಂಬ ಜೀವನದಿಗಳನ್ನು ಮಹಾತ್ಮ ಗಾಂಧಿ ಎಂಬ ಕಾವ್ಯ ಸಂಕಲನದ ಸಾಗರಕ್ಕೆ ಸೇರಿಸುವಂಥ ಕಾರ್ಯ ಇದೇ ಪ್ರಥಮವಾಗಿ ಮಾಡಿರುವುದಕ್ಕಾಗಿ ಇಂದಿರಾ ಕೃಷ್ಣಪ್ಪ ಅವರು ಶ್ಲಾಘನೀಯರಾಗಿದ್ದಾರೆ. ಅವರಿಗೆ ಸಹಕಾರ ನೀಡಿದ ಡಾ. ವಸುಂಧರಾ ಭೂಪತಿ, ನಳಿನ ಡಿ., ಡಾ. ರಾಮಲಿಂಗೇಶ್ವರ, ರುದ್ರಪ್ಪ ಹನಗವಾಡಿ ಅವರಿಗೆ ಕೃತಜ್ಞತೆಗಳು ಸಲ್ಲುತ್ತವೆ.

ಐತಿಹಾಸಿಕ ಮಹತ್ವ ಇರುವ ಇಂಥಹದೊಂದು ಕೃತಿಯನ್ನು ಹೊರತರುವ ಕನಸು ಕಂಡು, ಅದನ್ನು ಸಾಕಾರಗೊಳಿಸುತ್ತಿರುವ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ. ವೂಡೇ ಪಿ. ಕೃಷ್ಣ ಅವರನ್ನು ವಿಶೇಷವಾಗಿ ಅಭಿನಂದಿಸುತ್ತೇನೆ.

ಡಾ. ಬೈರಮಂಗಲ ರಾಮೇಗೌಡ

ಗಾಂಧಿ ಜಯಂತಿ 2021
ಬೆಂಗಳೂರು



ರಕ್ತವಿಲ್ಲದೆ ದೇಹವು ಹೇಗೆ ಬದುಕಲು ಸಾಧ್ಯವಿಲ್ಲವೋ
ಹಾಗೆಯೇ ಶ್ರದ್ಧೆ ಮತ್ತು ಪ್ರಾರ್ಥನೆಗಳಿಲ್ಲದೆ
ಆತ್ಮವೂ ಕೂಡ ಬದುಕಲು ಸಾಧ್ಯವಿಲ್ಲ !

- ಮಹಾತ್ಮ ಗಾಂಧೀಜಿ

# ಪರಿವಿಡಿ

## ಮತ್ತೆ ಮತ್ತೆ ಗಾಂಧಿ ಕವನಸಂಕಲನದಿಂದ ಆಯ್ದುಕೊಳ್ಳಲಾದ ಕವನಗಳು

# ಶರಣು ಮೋಹನದಾಸಗೆ

- ಶ್ರೀಧರ ಖಾನೋಲ್ಕರ್

ಶರಣು ಮೋಹನದಾಸಗೆ ಶರಣು
ಶರಣು ಮೋಹನದಾಸಗೆ

ಶರಣು ಕರುಣಾವ ಸುರಿವ ತರಣಿಗೆ
ಶರಣು ಭಾರತ ತನಯಗೇ

ಕಾಮವನು ಕಡಿಕಡಿದು ಕ್ರೋಧದ
ಧಾಮವನು ಸೆದೆಬಡಿದು ತಪದಿಂ
ಸೋಮರಸವನು ಕುಡಿದು ನಿಂತಿಹ
ರಾಮರಾಜ್ಯದ ವೀರಗೇ

ಧರ್ಮವೇ ತಳಹದಿಯು ಕರ್ಮಕೆ
ಕರ್ಮವೇ ತಳಹದಿಯು ಧರ್ಮಕೆ
ಧರ್ಮದಿಂದಲೇ ಪಾರತಂತ್ರ್ಯದ
ಮರ್ಮಹಿಂಗುವುದೆಂಬ ವೀರಗೆ ಶರಣು

## ನೆನದೇನ ಗುರು ಗಾಂಧೀ

– ನಾಗಾರಾಜ ನಾಯಕ ಡಿ. ಡೊಳ್ಳಿನ, ಕೊಪ್ಪಳ

ಮರೆತೆ ಯಾಕಯ್ಯಾ ನಿನ್ನ ಮಾತೃಭೂಮಿಯ
ನಿರುತ ನಿನ್ನ ಹೊರೆಯ ಹೊತ್ತ ಪೊರೆವ ತಾಯಿಯ
ಸತ್ತು ಬಿದ್ದರೆ ಹೆತ್ತ ತಾಯಿ ಅತ್ತು ದೂರ ಸರಿವಳು
ಮತ್ತೆ ನಿನ್ನ ಭೂಮಿತಾಯಿ ಎತ್ತಿಕೊಳುವಳೊ ಮನುಜಾ
ಗೇಣು ಭೂಮಿಗಾಗಿ ನಿನ್ನ ಪ್ರಾಣ ಹೋಗಲೆನ್ನುವಿ
ಕಾಣದೇನೋ ದೇಶ ಪರರಾಧೀನವಾಗಿಹುದೊ ಮನುಜಾ

ಮಳೆಬೆಳೆ ಮರೆತರು ಚಳವಳಿ ಕೇಳ್ವರು
ಚಳವಳಿಯರ್ಥವದೇನಣ್ಣಾ
ಥಳಥಳ ಹೊಳೆಯುವ ಖಾದಿಯ ಬಟ್ಟೆಯ
ಚಳವಳಿ ಮಂತ್ರದ ಬೀಜಣ್ಣಾ

ಸುಮ್ಮನೆ ಸ್ವರಾಜ್ಯ ಸ್ವರಾಜ್ಯವೆಂದರೆ
ಸ್ವರಾಜ್ಯ ದೊರೆಯುವುದೇನಣ್ಣಾ
ನಮ್ಮಯ ಬಟ್ಟೆಯ ನಾವೆ ತೊಡುವುದು
ಸ್ವರಾಜ್ಯ ಮಂತ್ರದ ಮೂಲಣ್ಣಾ

ಟೊಪ್ಪಿಗೆ ಹಾಕಿದನೊ ನಾನೊಂದು
ದಕ್ಷಿಣ ಆಫ್ರಿಕಾಕ್ಕ ಹೋದ ಟೊಪ್ಪಿಗಿ
ಭಂಗಿಯ ಕೆಲಸ ಮಾಡಿದ ಟೊಪ್ಪಿಗಿ
ಯರವಾಡಾ ಚೇಲೊಳು ಬೀಸಿದ ಟೊಪ್ಪಿಗಿ

ಸತ್ಯ ಮಾರ್ಗವ ಹಿಡಿಸುವ ಟೊಪ್ಪಿಗಿ
ಸತ್ಯಾಗ್ರಹವನ್ನು ಮಾಡಿದ ಟೊಪ್ಪಿಗಿ
ಭೃತ್ಯ ಕೆಲಸವ ಮಾಡುವ ಟೊಪ್ಪಿಗಿ
ಮಿಥ್ಯ ಅಲ್ಲ ಇದು ಮಹಾತ್ಮನ ಟೊಪ್ಪಿಗಿ

ಎಂಥಾ ಶಾಣ್ಯಾ ಮಹಾತ್ಮಾ ಗಾಂಧೀ
ಹಿಂದುಸ್ತಾನಕವನೇ ತಂದಿ
ಮದಲೀಗಿ ನೆನದೇನ ಗುರು ಗಾಂಧೀ
ಮುದಲೀಗಿ ನೆನದೇನ

ಜೋ ಜೋ ಎನ್ನ ಜ್ಯೋತಿಯ ಕಂದಾ ಜೋ ಜೋ
ಹೊಟ್ಟಿಗಿ ಇಲ್ಲದೇ ದೇಶದ ಜನರಾ
ಕಷ್ಟ ಸೋಸದು ಕಂಡ ನಿನ್ನ ಕಣ್ಣಾರ
ಗಟ್ಟ್ಯಾಗಿ ನಿಂತಿಯೋ ಆಗಿ ತಯ್ಯಾರಾ
ನಡಕಟ್ಟಿ ನೀ ಚಳವಳಿ ಮಾಡಿದೋ ಜೋರಾ

ಮುಪ್ಪಿನ ಕಾಲಕ ಬಂದಿತೋ ಹೌಸಾ
ಉಪ್ಪಿನ ಕಾಯಿದೆ ಮುರಿದಂಥಾ ಕೂಸಾ
ಛಪ್ಪನ್ನ ದೇಶಕ ಮೆರೆದಂಥಾ ಕೂಸಾ
ದೇಶ ಜೋಪಾನಕ್ಕ ನೀ ಸೋಸಿದಿ ತ್ರಾಸಾ..

ಸೌಜನ್ಯ : ಕನ್ನಡಪ್ರಭ ಪತ್ರಿಕೆಯ ದಿ.02.10.2019ರಲ್ಲಿ
ಪ್ರಕಟವಾದ ಲೇಖನದಿಂದ ಆಯ್ಕೆಮಾಡಿಕೊಳ್ಳಲಾಗಿದೆ.

# ಲಾವಣಿ

– ಬಾಲಚಂದ್ರ ಘಾಣೇಕರ

ಕರಬಂಧಿ ಸಮರದ ಅಂಕೋಲೆ ಕತೆಯನ್ನು
ವರ್ಣಿಸಿ ಹೇಳುವೆ ಕೇಳಿರಣ್ಣಾ
ವೀರ ರೈತರ ಸಾಹಸವ ನೋಡಿರಣ್ಣಾ
ಧೀರ ಮಹಿಳೆ ಜನರು ಪಟ್ಟ ಕಷ್ಟವನ್ನ
ಸಾರಿ ಹೇಳುವೆ ನಾನು ಬಾಲರು ಮುದಗೊಂಡು
ತೋರಿದ ಸಾಹಸ ಕೃತ್ಯಗಳನ್ನೆಲ್ಲ
ಮಾತರಂ, ವಂದೇ ಮಾತರಂ

ಕರಮಕರ ದತ್ತರಾಯರು ಬಂದರು
ಸರಕಾರ ಒಪ್ಪಂದ ಮುರಿದೊಡನೆ
ವರ ಗಾಂಧಿ ಮಹಾತ್ಮರ ಹಿಡಿದೊಡನೆ
ಕರುನಾಡಿನಾಜ್ಞೆ ಮುರಿದೊಡನೆ
ಸೇರಿಸಿ ಅಂಕೋಲಾ ತಾಲೂಕ ಬಂಟರೇ
ಕರಬಂಧಿ ಸಮರವ ಸಾರಿದರಣ್ಣಾ
ಮಾತರಂ, ವಂದೇ ಮಾತರಂ

ಹುರಿದುಂಬಿ ಎದ್ದರು ಹಳ್ಳಿಯ ಜನರೆಲ್ಲ
ಪರಿ ಪರಿ ಕಷ್ಟವ ಸಹಿಸಲಿಕೆ
ಗುರು ಗಾಂಧಿಯ ಮಾತನು ಸಡಿಸಲಿಕೆ
ಕ್ರೂರ ಬ್ರಿಟಿಷರ ಹೊರಗಟ್ಟಿ ದೂಡಲಿಕೆ
ತರತರದಿಂದಲಿ ಸರಕಾರ ಕಾಯ್ದೆಯ
ದರಕಾರವಿಲ್ಲದೆ ಮುರಿದಿಹರಣ್ಣಾ
ಮಾತರಂ, ವಂದೇ ಮಾತರಂ

ಶಾಲೆಗೆ ನೀರನ್ನು ಬಿಟ್ಟರು ನೂರಾರು ಬಾಲರು
ಧೈರ್ಯವ ತಾಳಿದರು, ಕಾಲನಂದದಿ ಕಾಯ್ದೆ ಮೆಟ್ಟಿದರು
ಲೀಲೆಯಿಂ ಸೆರೆಮನೆ ಸೇರಿದರು
ಖೊಳರಾಗಿಹ ಸರಕಾರ ಗರ್ವದ ಕೀಲನ್ನು ಕಳಚಿಸಿ ಬಿಟ್ಟರಣ್ಣ
ಮಾತರಂ, ವಂದೇ ಮಾತರಂ

ಜಂಗಲ ಕಾಯಿದೆ ಉಪ್ಪಿನ ಕಾಯಿದೆ ಭಂಗವ
ಮಾಡುತಲಂದಿನಿಂದ ತುರಂಗವ ಸೇರುತಲಂದಿನಿಂದ
ಜಂಗಿ ಪರಿಷತ್ತು ಸೇರಿಸಿ ಧೈರ್ಯದಿಂದ
ದಂಗು ಬಿಡಿಸಿ ಸರಕಾರದವರನ್ನೆಲ್ಲ
ಕಂಗಾಲರಂತಾಗಿ ಮಾಡಿಹರಣ್ಣ
ಮಾತರಂ, ವಂದೇ ಮಾತರಂ

ಬಲದಲಿ ಮಿಗಿಲೆಂದು ಮೆರೆಯುವ ಸರಕಾರ
ತಲೆಯನ್ನು ಬಗ್ಗಿಸಬೇಕಾಯಿತು
ಹಳ್ಳಿಯ ಜನರಿಂದ ಸೋಲುವ ಕಾಲಬಂತು
ಪೊಳ್ಳುತನವು ದೇಶದೊಳಗೆಲ್ಲ ಬಯಲಾಯ್ತು
ಬಲವೆಲ್ಲ ಹೋಯಿತು ವಾರಂಟು ಇದ್ದಂಥ
ಜನರನ್ನು ಹುಡುಕುವುದಾಗದೆ ಹೋಯ್ತು
ಮಾತರಂ, ವಂದೇ ಮಾತರಂ

ಭೀತಿಯ ಹಾಕಲು ಯುಕ್ತಿಯ ತೆಗೆದರು
ಜಪ್ತಿಯೆನ್ನುವ ಅಸ್ತ್ರವ ಹೂಡಿ
ಬಡರೈತರ ಮನೆಗಳ ಮೊಹರು ಮಾಡಿ
ಬಲು ಲೂಟಿಯ ಮಾಡುತ ಜನರನು ಕಾಡಿ
ನೀತಿನಡಾವಳಿ ಧಿಕ್ಕಾರ ಮಾಡುತ
ಕೋತಿಯಂದದಿ ಲೂಟಿ ಮಾಡಿವರಣ್ಣ
ಮಾತರಂ, ವಂದೇ ಮಾತರಂ

ಕೇಳಿರಿ ಸರಕಾರದ ಅನ್ಯಾಯದ ಕಥೆಯನ್ನು

ಹೇಳುವೆ ನಾನಿನ್ನು ಮರುಗಬೇಡಿ
ಬಡಕೋಳಿಯ ಮರಿಗಳ ಲೂಟಿಯು ಮಾಡಿ
ಮಿಡಿ ಬಿಡದಲೆ ತೆಂಗನು ನಾಶಮಾಡಿ
ಮಿಡಿ ಮಿಡಿ ಮಿಡುಕುವ ಬಡವರ ಮಾಲನ್ನು
ಕೊಳ್ಳೆಯ ಹೊಡಕೊಂಡು ಹೋಗಿಹರಣ್ಣಾ
ಮಾತರಂ, ವಂದೇ ಮಾತರಂ

ನಡೆಯಲು ಸರಕಾರದ ಅತ್ಯಾಚಾರದ ಸುದ್ದಿ
ತಡವೇಕೆ ಇನ್ನೆಂದು ಮಹಿಳೆಯರು
ಒಡೆ ಒಡೆದರು ಸರಕಾರಿ ಮನೆ ಮೊಹರು
ಲಾಠಿ ಒಡೆತಕ್ಕೆ ಪ್ರತಿಕೊಟ್ಟು ಕಾದಿದರು
ಮಾಣುದೇವಿಯಂಥ ನೂರಾರು ಸ್ತ್ರೀಯರು
ಪ್ರಾಣವ ಕೊಡಲಿಕ್ಕೆ ಸಿದ್ದರಾಗಿಹರು
ಮಾತರಂ, ವಂದೇ ಮಾತರಂ

ರೊಚ್ಚಿನಿಂದ ಸರಕಾರಿ ಪೋಲೀಸರೆದ್ದು
ನುಚ್ಚು ಮಾಡುತ ಮಾಣುದೇವಿಯನ್ನು
ಸಲೆ ಎಚ್ಚರ ತಪ್ಪುವ ಹೊಡೆತವನ್ನು
ತಮ್ಮ ಸ್ವೇಚ್ಛೆಯಿಂದಲಿ ಅತ್ಯಾಚಾರವನ್ನು
ಸಿಟ್ಟಿನಿಂದ ಗೈದರು ಕೆಚ್ಚದೆ ವೀರರ
ಬೆಚ್ಚಿಸಬೇಕೆಂದು ಹೊಂಚು ಹಾಕಿದರು
ಮಾತರಂ, ವಂದೇ ಮಾತರಂ

ನಿರ್ದೋಷಿ ಜನರನ್ನು ಸೆರೆಮನೆ ಸೇರಿಸಿ
ಕ್ರೂರಾಟ ನಡೆಸಿ ಹಿಚಕಡದಿ
ಸಣ್ಣಪೋರಗಳಿಗೆ ಯಮನಂತೆ ಕಾಡಿ
ಏನೂ ಕಾರಣವಿಲ್ಲದೆ ಕೈದು ಮಾಡಿ
ಪರದೇಶಿ ಪಟೇಲರ ಮೈತುಂಬಾ
ಬೆತ್ತದ ಸುರಿಮಳೆ ಗೆರೆಯುತ್ತಾ

ಕಾಡಿದರಯ್ಯೋ
ಮಾತರಂ, ವಂದೇ ಮಾತರಂ

ಎಷ್ಟೇ ದಬ್ಬಾಳಿಕೆ ನಡೆಸಿದರೇನಾಯ್ತು
ದುಷ್ಟ ಆಳರಸರಿಗಿದು ಸಹಿಸದಾಯ್ತು
ಸತ್ಯದ ಸಮರವು ತಡೆಯದಾಯ್ತು
ತಮಗಿಷ್ಟ ಬಂದಂತೆಯೇ ನಡೆಯದಾಯ್ತು
ಶ್ರೇಷ್ಟ ಒಕ್ಕಲಿಗರ ಭತ್ತವ ಕೊಯ್ಯುವ
ಬಲುಕೆಟ್ಟ ಬೆದರಿಕೆ ಹಾಕಿದರಯ್ಯೋ
ಮಾತರಂ, ವಂದೇ ಮಾತರಂ

ತಳಮಳಗೊಂಡರು ಬಡರೈತರೆಲ್ಲರೂ
ಬಿಳಿಜನರಿಗೆ ಬೆಳೆ ಪೋಪದೆಂದು ನಮ್ಮ ಉಳುವರೆ
ರೈತರು ಮುಂದೆ ಬಂದು ಸಲೆ/ಕೋಲು
ಗುದುಗೆಗಳನ್ನು ತಿಳಿದುಕೊಂಡು
ಬಳ ಬಳ ಕಾಳನ್ನು ಉದುರಿಸಿ
ಭೂದೇವಿಗುದುರಿಸಿ ಬೈ ಹಾಕಿದರಯ್ಯೋ
ಮಾತರಂ, ವಂದೇ ಮಾತರಂ

ಚಂಡಾಳಿ ಚಾಕರಿ ಅಧಿಕಾರಿ
ತಮ್ಮ ಭಂಡತನ ಮರೆಮಾಡಲೆಂದು
ಪುಂಡರಾಜ ನಿಷ್ಠುರ ಸಭೆಗಳ ಕರೆದು
ಕಂಡ ಕಂಡಲ್ಲಿ ಅವಮಾನವನ್ನು ಪಡೆದು
ದಂಡಿನ ಬಲವಿದ್ದ ಗವರ್ನರ ಸಹಿತವಾಗಿ
ದಂಗಾಗಿ ಹೊರಟರು ಕರಿಬಾವುಟ ನೋಡಿ
ಮಾತರಂ, ವಂದೇ ಮಾತರಂ

ಪರಮ ಪಾವನವಾದ ಕಾಂಗ್ರೆಸ್ಸಿನಾಜ್ಞೆಯು
ಸರಿಯೆಂದು ತ್ವರೆ ಮಾಡಿ ಕೆಲಜನರು
ಪರದಾಸತ್ವ ತಮಗಿಂದು ಬೇಡೆಂದರು

ಭರಭರದಿಂದಲಿ ಸೆರೆಮನೆ ಸೇರಿದರು
ಶರಣೆಂದು ಪಟೇಲರು ಕೆಲಸವ ತೊರೆಯುತ
ಸ್ವಾತಂತ್ರ್ಯ ಸಮರದಿ ಧುಮುಕಿದರಣ್ಣಾ
ಮಾತರಂ, ವಂದೇ ಮಾತರಂ

ಐನೂರಿಗಿಂತಲೂ ಮಿಗಿಲಾಗಿ
ಸೆರೆಮನೆಯನ್ನು ಸೇರಿದರೈಯ್ಯಾ ನಮ್ಮವರು
ಸೇಂದಿ ಕೊನೆಗಳ ಧ್ವಂಸವ ಮಾಡಿದರು
ಬಲುಮನ್ನಣೆ ಪಡೆದರು ನಾಡವರು
ಮನೆಮಾರು ಹೆಂಡತಿ ಮಕ್ಕಳ ತೊರೆಯುತ
ಅಂಕೋಲಾ ನಾಡಿನ ಮಾನವ ಕಾಯ್ದರು
ಮಾತರಂ, ವಂದೇ ಮಾತರಂ

ಶೇಟಗೇರಿ ಸೂರುವೆ ಹಿಚಕಡ ಬಾಸ್ಗೋಡ
ಉಳುವರೆ ದಿಟವಾದ ಹಳ್ಳಿಯ ಜನರೆಲ್ಲರು
ಗಟ್ಟಿ ವಾಸರೆ ಕುದ್ರಿಗೆ ಬಾಂಧವರು
ಕಣಗೀಲ ಮೊದಲಾದ ಊರವರು
ಶ್ರೇಷ್ಠ ಅಂಕೋಲಾ ತಾಲ್ಲೂಕು ಜನರೆಲ್ಲ
ಸೃಷ್ಟಿಯೊಳಗೆಲ್ಲ ಹೆಸರು ಪಡೆದಿಹರು
ಮಾತರಂ, ವಂದೇ ಮಾತರಂ

ವರ್ಣಿಸಿ ಹೇಳುವ ಹವಣಿಕೆ ಮಾಡಿದೆ
ವರ್ಣನೆ ಮಾಡಲು ಅಸಾಧ್ಯವಯ್ಯಾ
ವೀರ ರೈತರ ಸಾಹಸ ಬಹಳವಯ್ಯಾ
ಕ್ರೂರ ಸರಕಾರ ದುಷ್ಕೃತ್ಯ ತೀರದಯ್ಯಾ
ಸಾರಿದೆ ನಿಮಗೆಲ್ಲ ಕಣ್ಣಾರೆ ಕಂಡಿದ್ದು
ಬಾಲಚಂದ್ರನ ಮಾತು ಪುಸಿಯಲ್ಲವಯ್ಯಾ
ಮಾತರಂ, ವಂದೇ ಮಾತರಂ

## ಲಾವಣಿ

– ಶ್ರೀಧರ ಖಾನೋಳ್ಕರ (ಕಾವ್ಯನಾಮ : ಸೀತಾ ತನಯ)

ತಕ್ಕಡಿ, ಹಿಡಕೊಂಡೂ ಬೇಸಾಯ ಮಾಡುತ ಬಿರುಪಾದ ಪರಕೀಯ
ಜನರೆಲ್ಲ ಬಂದು ಕರ್ಕಶ ಪಡುತಲಿ ಕೂಡಿದರು ನಮ್ಮ ಉಕ್ಕುವ
ನಾಡನ ಕೆಡಿಸಿದರು ಏಳಿರಿ ಬಿಸಿ ಬಿಸಿ ರಕ್ತದ ತರುಣರೆ
ಇಳಿಯಿರಿ ಸ್ವಾತಂತ್ರ್ಯರಣದೊಳಗೆ ನಮ್ಮ ಹೊಳೆಯುವ
ಸಹನೆ ಸುಖ ನಮಗೆ ಬೆಳೆಯುವ ಆತ್ಮವೇ ಬಲ ನಮಗೆ
ವ್ಯಾಪಾರ ಮುಳುಗಿತು ಬೇಸಾಯ ಬಾಡಿತು
ಬರಗಾಲ ಬಿದ್ದಿತು ನಾಡೊಳು, ಶೀಪುತ್ತ ಹುಲ್ಲನು ಕುಡಿಯುತ್ತ
ನೀರನ್ನು ಸತ್ತವರಲ್ಲವೇ ನೂರು ಸಾವಿರ ಜನರು
ಭತ್ತದ ಗಿರಣಿಯ ಹಳ್ಳಿಯ ಜನಗಳ ಹೆಂಡರ ಹೊಟ್ಟೆಗೆ
ಬರೆಗೊಟ್ಟಿತು ಗಿರಣಿಯ ಅರಿವೆಯ ಬಂದ ಕಾಲಕ್ಕೆ
ನಮ್ಮ ಜಾಡರ ಹೊಟ್ಟೆಯ ಹೋಳಾಯಿತು, ಬಡಿಗದ ಸರಸದ
ನೇಯಿಗೆ ಹಾಳಾಯ್ತು ಹರಿತದ ಬಾಚಿಯ ಮೊನೆಯಿಂದ
ಎಳೆಯನು ಸಮನಾಗಿ ಕರಿಯುವಂತೆ
ಬೇಟೆ ಬಡುಕನು ಮೊಲವನ್ನು ಸುರಿಯುವಂತೆ
ಬಡವರ ಒಡಲಿನ ಕರುಳನು ಕೊರೆದೀತು
ಪರದೇಶಿ ಸರಕಿನ ಹರಿತಾದ ಚೂರಿ

# ಹುತಾತ್ಮ ಮೈಲಾರ ಮಹಾದೇವಪ್ಪ

– ಫಕೀರ ಸಾಹೇಬ

ಮಹಾದೇವಪ್ಪ ಮೈಲಾರೆಂಬ
ಮಹಾತ್ಮ ನಮ್ಮ ಊರಿಗೆ ಬರತಾನಾ
ಗಾಂಧೀ ತತ್ವ ಸಾರಿ ಹೇಳುತಾನ ದಿನಾದಿನಾ
ಸತ್ಯವಂತರು ಸಾವರಗಟ್ಟಲೆ
ನಿತ್ಯ ಬಂದು ಕೇಳತಾರ
ಸುತ್ತಮುತ್ತಲ ಜನ ಕಿತ್ತಿ ಬರತಾರ
ಚಿಕ್ಕವಯಸ್ಸಿದ್ದರೂ ಒಳ್ಳೇ ಚೊಕ್ಕ ಮಾತನಾಡತಾನಾ
ಹಕ್ಕಿ ತನ್ನ ಮರಿಗೆ ಮುದ್ದು ಕೊಟ್ಟಾಂಗ
ನಕ್ಕರೊಂದು ಚಂದ ಅವನು
ನುಡಿದರೊಂದು ಚಂದ ನಮಗ
ಸಿಕ್ಕೋದಿಲ್ಲೋ ಇಂಥಾ ಚೊಕ್ಕ ಬಂಗಾರದಂಥವಾ

ಸೌಜನ್ಯ : ಮೈಲಾರ ಮಹಾದೇವ ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ

# ಲಾವಣಿ

– ಓ.ಎ. ಮೂಲಿಮನಿ

ಕಣ್ಣು ತೆರೆದು ನೋಡಿರಣ್ಣ ಚಿನ್ನದಂಥಾ ಹಿಂದುಸ್ಥಾನ
ಮಣ್ಣುಗೂಡಿ ಆಗಿಹೋಯಿತಪ್ಪಾ ಮಸಣ
ಋಣ ಒಂಬತ್ನೂರ ಕೋಟಿ ರೂಪಾಯಿಯಿಂದ ಜೀರ್ಣ
ಬಣ್ಣವಿದು ಬಯಲಾಗಿ, ಸಂಪನ್ನನಾಗುವಂಥ ಯೋಚನಾ
ಅದಕ್ಕೆ ಹುಟ್ಟಿಬಂದಿದಾನ ಮಹಾತ್ಮಾಗಾಂಧಿ ಮೋಹನಾ

# ನೆಲದಾಗಿನ ನಕ್ಷತ್ರ

ಬಿ.ಆರ್. ಪೋಲೀಸ್‌ಪಾಟೀಲ

ಗಾಂಧೀ ಅಜ್ಜಾ, ನಮ್ಮ ಅಜ್ಜಾ ಹೆಂತಾ ಸರದಾರಾ
ಯುಗಕೊಮ್ಮೆ ಹುಟ್ಟಿ ಬರತಾರಿಂತಾ ಮಾತ್ಮರಾ

ಇಸ್ವೀ ಸನ್ ಹದಿನೆಂಟ್ನೂರಾ ಅರವತ್ತೊಂಬತ್ತ
ಅಕ್ಟೋಬರ ತಿಂಗಳದಾಗ ಎರಡನೇ ತಾರೀಕ
ನೆಲದಾಗಿನ ನಕ್ಷತ್ರೊಂದು ಎದ್ದು ಬಂದಿತ್ತ
ಹಿಂದುಸ್ತಾನತ್ತುಂಬ ಬೆಳ್ಳಂಬೆಳಕ ಆಗಿತ್ತ.

ತಾಯಿ ಪುತಳೀಬಾಯಿ ತಂದಿ ಕರಮಚಂದರ
ಮುದ್ದು ಮೋಹನದಾಸಂತ ಹೆಸರ ಇಟ್ಟಾರ,
ಕೂಸಿನಿಂದ ದೇಶಾತ ಜಗಜ್ಜಾಹೀರಾ
ಯುಗಕೊಮ್ಮೆ ಹುಟ್ಟಿ ಬರತಾರಿಂತಾ ಮಾತ್ಮರಾ.

ಸಂಗದೋಷದಿಂದ ಕೆಟ್ಟು ಚುಟ್ಟಾ ಸೇದ್ಯಾರ
ಕಳೂಮಾಡಿ ಅಪ್ಪನ ಮುಂದ ಸುಳ್ಳ ಹೇಳ್ತಾರ,
ಹರಿಶ್ಚಂದ್ರ, ಶ್ರವಣಕುಮಾರ ಹಾದೀ ತೋರ್‍ಯಾರ
ಅಪ್ಪನ ಮುಂದ ಹಿಡಿಯಾಗಿ ಕೈಯ ಮುಗದಾರ.

ಬ್ಯಾರಿಷ್ಟರ ಪಾಸ ಮಾಡಿ ಬರತೀನೆಂದಾರ
ಇಂಗ್ಲೆಂಡ್ ದೇಶಕ ಹಡಗಾ ಹತ್ತಿ ಹೊಂಟ ನಿಂತಾರ,
ಅವ್ವನ ಕೈಮ್ಯಾಗ ಕೈಯ ಹಾಕಿ ಕಣ್ಣೀರೊರಿಸ್ಯಾರ
ಮದ್ಯ-ಮಾಂಸ ಮುಟ್ಟಂಗಿಲ್ಲ ಇದ ನಿರ್ಧಾರ.

ದಕ್ಷಿಣಾಫ್ರಿಕ ದೇಶಕ್ಹೋಗಿ ಸಡ್ಡ ಹೊಡದಾರ
ಪರಂಗೇರ ಮೂಗ ಹಿಡದು ಹಕ್ಕ ಬೇಡ್ಯಾರ,
ಕುಟಿಲ ಕಾರಸ್ಥಾನಕ ಚಳ್ಳ ಹಣ್ಣ ತಿನಿಸ್ಯಾರ
ಹಿಂದುಸ್ತಾನದೊಳಗ ಚಳವಳಿ ಮುಂದವರಿಸ್ಯಾರ.

ವಕೀಲಿಕೆಂಬು ಬಂಗಾರ ಕೋಳಿ ಹಂಗ ಬಿಟ್ಟಾರ
ಆಸೆಂಬು ಗಯ್ಯಾಳಿ ದೂರ ಇಟ್ಟಾರ,
'ನಾ' ನಂಬೂ ಮೃಗಾ ಬೆಂಕಿ ಇಲ್ದ ಸುಟ್ಟಾರ
ಸಾಧೂ ಸಂತರು ಮೊದಲ ಮಾಡಿ "ಸಲಾಂ" ಅಂದಾರ.

ಸ್ವದೇಶಿ ಎಂಬ ಮಂತ್ರಾ ಗಟ್ಯಾಗ್ಹಿಡದಾರ
ದಿಕ್ಕಿಲ್ಲದವರಿಗಾದರಿವರಃ ದೇವರ,
ಹೊಲೇರಲ್ಲ ಹರಿಜನರಂತ ಸೇವಾ ಮಾಡ್ಯಾರ
ತಾಯಿ ಕಸ್ತೂರಿಬಾಯಿ ಹೆಜ್ಯಾಗ್ಹೆಜ್ಜಿ ಇಟ್ಟಾರ.

ಬರಿ ಮೈ ಫಕೀರನ ತಿಂತಣೆ ಹೊಂಟತಿ
ಬ್ರಿಟಿಶರ ಎದಿ ಒಡದು ನೀರಾಗೇತಿ,
"ನಮ್ಮನ್ನಾಳೂ ಹಕ್ಕ ನಿಮಗ ಹ್ಯಾಂಗ ಬರತತೀ?
ದೇಶ ಬಿಟ್ಟು ತೊಲಗದಿದ್ದರ ನಕ್ಕಿ ಫಜೀತಿ

ಎಲುಬಿನ ಹಂದರ ಗುಡುಗಿದರ ಭೂಮಿ ನಡುಗತಿ
ಅಹಿಂಸಂಬೊ ಮಂತರ ಕರಾಮತ್ತ ಮಾಡೇತಿ,
ಉಕ್ಕಿನ ಛಾತೀ ಬ್ರಿಟೀಶರಿಗೆ ದಿಗಲಾಗೇತಿ
ಹಿಂದುಸ್ತಾನ ಸರ್ವತಂತ್ರ ಸ್ವತಂತ್ರಾಗೇತಿ

ಇಸ್ವೀ ಸನ್ ನಾಲವತ್ತೇಳು ಆಗಸ್ಟ್ ಪಂದರಾ
ಜಂಡಾ ಹಾರಿಸಿ ಜೈಕಾರ ಹಾಕ್ಯಾರ ನೆಹರೂ ಸರಕಾರಾ,
ಕೋಟಿ ಕತ್ತಲ ಗೂಡಿನ್ಯಾಗ ಬೆಳಕ ಹಚ್ಯಾರ
ನಮ್ಮ ಅಜ್ಜ ಗಾಂಧೀ ಆಜ್ಞಾ ಬಂಟ ಭಾದ್ದರಾ.

ಗೋಡಸೆ ಅನ್ನೊ ಬಂದೂಕ ಗುರಿ ಇಟ್ಟಾರ
ಪ್ರಾರ್ಥನಾ ಮಾಡೋ ವ್ಯಾಳೇದಾಗ ಗುಂಡ ಬಿಟ್ಟಾರ,
ರಾಮರಾಜ್ಯ ಕಟ್ಟೊ ಕನಸಾತ ಚೂರ್ ಚೂರಾ
'ರಾಮ ರಾಮ ರಾಮ'ಂತ ನಡದು ಬಿಟ್ಟಾರ.

ಕೂಸ ಕುನ್ನಿ ಮೊದಲ ಮಾಡಿ ಸಾಲೀಕಲಿಬೇಕ
ಇಲ್ಲದಿರಕ ಬ್ಯಾರಿಲ್ಲ ಇದ ಇರಕ,
ಓನಾಮ ಅಕೋಂತ ಮಾಡರಿ ಕಾಯಕ
ಅಜ್ಜ ಹೇಳಿದಂಗ ಮಾಡಿದರೆಲ್ಲಿ ದುಃಖ!

ಸಾವ ಮೀರಿ ನಿಂತ ಮಹಾಂತರಾಂಗ ಸಾಯ್ತಾರ?
ಸಾವಿಗೆ ಜೀವ ತುಂಬಿ ನಕ್ಕನಗತಾರ
ಭಕ್ತಿಲಿಂದ ಪದಾ ಮಾಡ್ಯಾರ ಬಾಪೂಗೌಡರಾ
ಯುಗಕೊಮ್ಮೆ ಹುಟ್ಟಿ ಬರತಾರಂತ ಮಾತ್ಮರ

# ಕವಿಗಳ ಕಣ್ಣಲ್ಲಿ ಮಹಾತ್ಮ ಗಾಂಧಿ

ಭಾರತದ ಹಣೆಯಲ್ಲಿ ಬರೆದ ದುರ್ಲಿಖಿತವನು
ತೊಡೆದು ಹಾಕಿದ ಧೀರ ವೀರ ಸಂತ
ಸಂಸಾರ ಸನ್ಯಾಸ ಎರಡಕ್ಕೂ ಅವನಿಂದ
ಬೆಲೆ ಬಂತು ಅವನೆಂಥ ಪುಣ್ಯವಂತ

– ಶಾಂತರಸ

ನಿನ್ನ ಪ್ರತಿಮೆಯ ನಿಲ್ಲಿಸಿ ನಾವು ಮೆರೆಯುವುದು ವ್ಯರ್ಥ
ನಮ್ಮ ಹೃದಯದೊಳಿರಲಿ ನಿನ್ನ ಮರಣದ ಅರ್ಥ
ನಿನ್ನ ಭಸ್ಮಕೆ ಕಾಶಿ ಗೋಕರ್ಣ ಬೇಕಿಲ್ಲ
ನಿನ್ನ ಬೂದಿಯ ತ್ರಾಣ ಪುಣ್ಯಕ್ಷೇತ್ರಕ್ಕಿಲ್ಲ

– ದಿನಕರ ದೇಸಾಯಿ

ಯಾರೋ ಒಬ್ಬರು ಬಂದು ನನ್ನನ್ನು ಕೇಳಿದರು
ಗಾಂಧೀ ಜಯಂತಿಯಂದು ಮಾಂಸ ತಿನ್ನಬಹುದೇ ಸಾರ್?
ಅದಕ್ಕೆ ನಾನಂದೆ, ಅಯ್ಯೋ ಈ ದೇಶದಲ್ಲಿ
ಗಾಂಧಿಯನ್ನೇ ತಿಂದು ಮುಕ್ಕಿದ್ದೀರಿ
ಅವರ ತತ್ವ ಚಿಂತನೆಗಳನ್ನು ಬೀದಿಯಲ್ಲಿ ಹರಾಜಿಗೆ ಹಾಕಿದ್ದೀರಿ
ಇನ್ನ ಮಾಂಸ ತಿನ್ನಲೇನು, ತಿಂದು ಹಾಳಾಗಿ ಹೋಗಿ ಎಂದು

– ಓರೇಮುಗಳೂರು ಕಣ್ಣನ್

ಕೈತೊಳೆದರೆ ಕರಗಿ ಹೋಗುವ ಹಾಗೆ ಸೋಪು
ನಮ್ಮಿಂದ ಮರೆಯಾಗುತ್ತಿದ್ದಾರೆ ಬಾಪು

– ದುಂಡಿರಾಜ್

ಇವನೊಬ್ಬ ಮಾಯಾವಿ
ಗುಟ್ಟರಿತ ಗಾರುಡಿಗ
ಇವನ ನೆಲೆ ಸಾಬರಮತಿ
ಇವನೋ ಶೃಂಗಾರಗೊಂಡ ಯತಿ

– ಸಾ.ಶಿ. ಮರುಳಯ್ಯ

ಇವನೇನು ಪೈಲ್ವಾನನಲ್ಲ ಗಾಂಧೀಜಿ
ಆದರೆಂತಹ ಪೇಚು ಹಾಕಿ ತೋರಿಸಿದ
ಬಡಕಲಾಗಿಹ ದೇಹದಲಿ ಕೂಡ
ಜಗವ ನಡುಗಿಪ ಶಕ್ತಿ ಇರುವದೆಂದ
ಸತ್ಯದಲಿ ದೇವನನು ಇವನು ಕಂಡ
ನುಡಿದಂತೆ ನಡೆದ, ನಡೆದಂತೆ ನುಡಿದ

– ಜೀವಿ ಕುಲಕರ್ಣಿ

ಸೌಜನ್ಯ : ಕನ್ನಡಪ್ರಭ ಪತ್ರಿಕೆಯ ದಿ.02.10.2019ರಲ್ಲಿ
ಗಂ. ದಯಾನಂದಕುಮಾರ ಅವರ ಲೇಖನದಿಂದ ಆಯ್ಕೆಮಾಡಿಕೊಳ್ಳಲಾಗಿದೆ.

# ಗಾಂಧೀ ಮಹಾರಾಜ

– ರವೀಂದ್ರನಾಥ ಠಾಗೂರ್

ಗಾಂಧೀ ಮಹಾರಾಜ ನಮ್ಮ ನಾಯಕನಹುದು
ಅವನಡೆದ ಹಾದಿಯಲೆ ನಾವು ನಡೆವವರು
ದೀನ ದಲಿತರ ಅನ್ನ ನಾವು ದೋಚುವುದಿಲ್ಲ
ಮಂಡಿಯೂರುವುದಿಲ್ಲ ಧನಿಕ ಜನರೆದುರು

ನಮ್ಮ ದನಿಯಡಗಿಸಲು ಬೆದರಿಸುತ ಅವರೆಲ್ಲ
ಕೈಯೆತ್ತಿ ಲಾಠಿ ಬೀಸುತ ಆಕ್ರಮಿಸಲು
ನಾವೆನ್ನುವೆವು ನಗುತ, ನಿಮ್ಮ ರೋಷಾವೇಶ
ಮಲಗಿರುವ ಮಕ್ಕಳನು ಬೆಚ್ಚಿಸಲುಬಹುದು
ನಿಮ್ಮ ಕೆಂಗಣ್ಣ ಕಂಡೆಮಗೆ ಭಯವಿನಿತಿಲ್ಲ
ಪಣವತೊಟ್ಟಿಹೆವಿಂದು ಭಯವನೇ ಗೆಲಲು

ನಮ್ಮ ಮಾತುಗಳೆಲ್ಲ ಬಲು ಸರಳವಾಗಿಹವು
ಅರ್ಥ ತಿರುಚಲು ಬರದ ನೇರ ನುಡಿಗಳಿವು
ಅಪರಾಧ ಸಂಹಿತೆಯ ಅವು ಬದಿಗೊತ್ತುವರು
ಸೆರೆಯೆಂಬ ಪುಣ್ಯಕ್ಷೇತ್ರಕೆ ಎಳೆಯುತಿಹರು

ಸೆರೆಮನೆಯ ಹೆಬ್ಬಾಗಿಲೆದುರು ಜನಸಾಗರವು
ಸೇರಿ ಸ್ವಾತಂತ್ರ್ಯ ಜಯಘೋಷ ಮೊಳಗಿಸಲು
ಜನರ ಅವಮಾನಕರ ಕೊಳೆಯ ಕಲೆಯೇ ಅಳಿದು
ತಲೆಯೆತ್ತಿ ನಿಲ್ಲುವರು ಗೌರವವ ಪಡೆದು
ಶತಮಾನಗಳ ಶೃಂಖಲೆಗಳೆಲ್ಲ ಮುರಿಯುವವು

ಜನರ ನೊಸಲಿನ ಮೇಲೆ ಹರಕೆ ಮುದ್ರೆಯನಿರಿಸಿ
ಸಂತನಾದನು ಗಾಂಧಿ ಭೇದವನ್ನಳಿಸಿ

ಸೌಜನ್ಯ : ಸರ್ವೋದಯ ಸಾಧಕ (ಶಂಕರ ಉತ್ತಾರ ಅವರ ಸಹಸ್ರಚಂದ್ರ ದರ್ಶನ ಸಂದರ್ಭ ಗ್ರಂಥ, ಸಂ. ಡಾ. ಗೀತಾ ಭಾರತ (ಪುಟ ಸಂ.37–39, 42–43)

# ಗಾಂಧಿ

– ಗೋವಿಂದ ಪೈ

ಇನ್ನಿನಿಸು ನೀ ಮಹಾತ್ಮ ಬದುಕಬೇಕಿತ್ತು
ಈಗ ಭಾರತಗಗತ್ಯವಿದೆ

ಹಿಮನಗವೊ ನಿನ್ನ ಛಲ
ವಿಮಲ ಭಗವತ್ ಭಕ್ತಿ
ಜಗವನಪ್ಪುವ ವಾರ್ದಿಯನೆ
ಜಗತ್ ಪ್ರೀತಿ

ನಿನ್ನ ಸೂರ್ಯ ತಪಕದಿಂದ
ಆತ್ಮಿಕ ಶಕ್ತಿ
ಸ್ವಾರ್ಥಪರರಾಗಿಹೆವು
ದೇವರಿಲ್ಲ ನಮಗಿಂದು
ಬದುಕ ಬೇಕಿತ್ತು ಮಹಾತ್ಮ

ಸೋದರತೆ ಈಗಿಲ್ಲಮೆಗೆ
ಮುಂದಿನದಿಲ್ಲ ಗೊಡವೆ
ಧರ್ಮ ಬಾಹಿರರೆಮ್ಮ
ಎತ್ತಲಿನ್ನರಾಂದು
ತೋಚದೆ ಮಹಾತ್ಮ ನೀನಗಿತ್ತು ಮೊರೆಯಿಡುವೆ
ಗಾಳಿ ಕಾಣದ ಬೀಸಿ ಉಸುರುಗೊಳಿಪಂತೆ
ತಾರ ನವಜೀವನವ ನಮ್ಮನುಳಿಪಂತೆ

ಬದುಕ ಬೇಕಿತ್ತು ಮಹಾತ್ಮ
ಬದುಕ ಬೇಕಿತ್ತು ಮಹಾತ್ಮ

# ಗಾಂಧಿ ಮಹಾತ್ಮ

– ಜಯದೇವಿ ತಾಯಿ ಲಿಗಾಡೆ

ನಿನ್ನ ಹುಟ್ಟು ಹಬ್ಬದಂದು
ಅಟ್ಟಹಾಸದಿಂದ ಸಂದು
ಒಟ್ಟುಗೂಡಿ ನಿಂದಿಹೆವು
ಜಯ ಬಾಪು ಎಂದು

ನಿನ್ನ ಒಡಲು ಹಾಲುಗಡಲು
ಲೋಕಕೆಲ್ಲ ಉಣಲು ಬಡಿಸಿ
ಸೀಂಟಿದೆಮ್ಮ ಮಡಿಲು ಕಲ್ಮಷ
ನಾಡ ನಾಯಕ
ಸನಾತನಿ ಸಂತನಲ್ಲ
ಸಂಪ್ರದಾಯ ಶರಣನಲ್ಲ
ಸತ್ಯಸಂಧ ಪ್ರೇಮ ತಪಸಿ
ನಮ್ಮ ಪಾಲಕ
ದೀನ ದಲಿತ ಹೀನ
ಅಬಲ ವೃದ್ಧರೆಲ್ಲರ ರಕ್ಷಕತನು
ಬಾಪು ಲೋಕ ನಾಯಕ

ನಿನ್ನ ಮರಣ ನನ್ನ ಹರಣಕದುಪೆ ಕಿರಣವಾಗಲಿ
ನಿನ್ನ ಬಾಳು ಬಯಕೆಯೆನಗೆ ಹರಕೆಯಾಗಲಿ
ದೀನರೆಲ್ಲ ನನ್ನ ಬಳಗವಾಗಲಿ
ಪಾಪಿಯೆನ್ನ ದೇವರಾಗಲಿ
ನಿನ್ನ ಅಮರಜ್ಯೋತಿ ಎನಗೆ ದಾರಿತೋರಲಿ

ಅಮರ ಜ್ಯೋತಿ ಬಾಪೂಜಿ
ನಮ್ಮ ಜ್ಯೋತಿ ಬಾಪೂಜಿ

# ಕನಸು

– ಬೆಳಗೆರೆ ಜಾನಕಮ್ಮ

ಶಾಂತಿಯೊಳು ಸಹನೆಯೊಳು ಗಣ್ಯನೆನಿಸಿ
ಕರುಣಾಳುದಾತನೆನಿಸಿ
ಸದ್ಗುಣದ ಕಣಿಯು ಬಹು ಪೂಜ್ಯನೆನಿಸಿ
ನೀನಿಲ್ಲದಾದೆ ಮಾನ್ಯ

ಕನ್ನಡದ ಹೊಸಹುಟ್ಟು ಮಂಟಪಕ್ಕೆ
ನಿನ್ನದೈ ಕೀರ್ತಿ ಶಿಖರ
ಥಳಥಳನೆ ಬೆಳಗಿ ಈ ತುಳುಕಿನೊಳನೆ
ನೀನಿಲ್ಲದಾದೆ ಮಾನ್ಯ

ಕನ್ನಡದ ತೋಟದುನ್ನಿತಯು ಸಡಿಲೆ
ನೀನುದಿಸಿ ಬಂದೆ ಧೀರ
ಸೊರಗಿರ್ದ ಸಸಿಗಳನು ಎರೆದು ಬೆಳೆಸಿ
ನೀನಿಲ್ಲದಾದೆ ಮಾನ್ಯ

ಕನ್ನಡದ ಸಸಿಗಳಿಗೆ ಕಸಿಯ ಕಟ್ಟಿ
ತೋಟವನು ಬೆಳಸಿ ನಿಲಿಸಿ
ಜಡಮನದ ಜನಕೆ ಚೇತನವ ತರಿಸಿ
ನೀನಿಲ್ಲದಾದೆ ಮಾನ್ಯ

ಹಗಲಿರುಳು ನೀ ಗೈದ ಗೈಮೆ ತಪಸು
ಫಲಗಳನು ಬಿಡುತಲಿಹವು
ನೋಡಿ ನಲಿಯುವ ಧನ್ಯ ತೋಟಗಾರ
ನೀನಿಲ್ಲದಾದೆ ಮಾನ್ಯ

ಪಚ್ಚೆಪಯಿರೆಲೆ ತೋಟದೊಳಗೆ ಇಂದು
ಫಲವೆದ್ದು ಕಾಣುತಿಹುದು
ಇಚ್ಛೆ ಫಲಿಸುವಾ ಸಮಯದೊಳಗೆ
ನೀನಿಲ್ಲದಾದೆ ಮಾನ್ಯ

ಲತೆಯೊಡೆದು ಹೂವರಳಿ ತೂಗಿ ಬಾಗಿ
ಸುಮಗಂಧ ಬೀರುತಿಹುದು
ಸುಳಿಸುಳಿದು ಮಧುರಸವ ಸವಿವ ಭೃಂಗ
ನೀನಿಲ್ಲದಾದೆ ಮಾನ್ಯ

ಕಳಿತ ಫಲಗಳ ಭುಜಿಪ ಭಾಗ್ಯವನ್ನು
ನಮಗುಳಿಸಿ ಪೊದೆಯತ್ತ
ನುಡಿತಾಯಿ ನೀನಿಲ್ಲವೆಂದು ಕುಂದಿ
ಕಂಬನಿಯ ಕರೆವಳಿತ್ತ

ನಿನ್ನ ನೆನಪಿನ ಸೊಡರನಿರಿಸಿ ನಾವು
ಬಡಬಕುತಿ ತೈಲವೆರೆದು
ನಿನ್ನ ಈ ತೋಟ ಚಿರವಾಗಲೆಂದು
ಹಾರೈಸುತಿರುವೆವಿಂದು

ಧನ್ಯ ನೀ ಧನ್ಯ ನೀ ಧನ್ಯನಾದೆ
ಓ ಕನ್ನಡಿಗರ ಬಂಧು
ಸಣ್ಣ ಕೃತಿಯರ್ಪಿಸುವೆ ಜನಕಜೆಯು
ತುಂಬುಕಂಬನಿಯ ಮಿಡಿದು

ಸೌಜನ್ಯ : ಸಿಹಿಗಾಳಿ ಮಾಸಪತ್ರಿಕೆ – ಅಕ್ಟೋಬರ್ 2013

# ಕರ್ಮಯೋಗಿ ಗಾಂಧೀಜಿ

– ಬೆಳೆಗೆರೆ ಜಾನಕಮ್ಮ

ಚಿದ್ರೂಪನಂತೆ ತೋಳ ತೊಳಗಿ ಬೆಳಗುತಿಹ ದಿವ್ಯಜ್ಞಾನಿ ತಾತ
ಸದ್ಗುಣದ ಕಣಿಯು ಬಹುಪೂಜ್ಯನೆಂದು ಮನಗಂಡನೆಂದೂ ಪೂತ
ನಿಜತತ್ವವರಿತು ಗುರು ಪೀಠವೇರಿ ಮೆರೆದಿರುವ ಕರ್ಮಯೋಗಿ
ವಿಜಯವನುಗೈದೆ ಅದ್ವೈತದೊಳಗೆ ಬಿಡು ನೀನೆ ಪರಮ ತ್ಯಾಗಿ
ಇಂದ್ರಿಯವ ಜಯಿಸಿ ಬಂಧನ ಹಾಯ್ದು ಆನಂದಮಯನು ನೀನು
ಬಂಧನದಿ ಬೆಂದ ಜಡಮತಿಯು ನಾನು ಏನೆಂದು ಬಣ್ಣಿಸುವೆನು
ಪರಮಾತ್ಮ ತನ್ನ ಮಡಿಲೊಳಗೆ ನಿನ್ನ ಲಾಲಿಸುತ ತೂಗುತಿಹನೊ
ಪರವಸ್ತುವಿಲ್ಲ ಪರಮಾತ್ಮ ತಾನೆ ತಾನೆನುತ ಸುಮ್ಮನಿಹೆಯೊ
ಸೌಂದರ್ಯ ಸುಗುಣ ನಿರ್ಗುಣನು ಸಕಲ ಚೈತನ್ಯ ತಪಸಿಯವನು
ಆನಂದಮಯನು ಸರ್ವಾತ್ಮನಾಗಿ ತಾ ನಿಲ್ಲಿ ನಲಿಯುತಿಹನು
ಘನ ಶಾಂತಿಯೊಂದು ನಿನ್ನೊಳಗೆ ತುಂಬಿ ಕಿರು ನಗೆಯ ಸೂಸುತಿಹುದು
ಜನಕಜೆಯ ಮನವು ಗಾಂಧೀಜಿ ನಿಮ್ಮ ಬಳಿ ಬಳಿಯೆ ಸುತ್ತುತಿಹುದು

ಸೌಜನ್ಯ : ಸಪ್ನ ಬುಕ್ ಹೌಸ್‌ನ ಅನನ್ಯ ಮಹಿಳಾ ಚೇತನ ಮಾಲಿಕೆಯ
"ಬೆಳೆಗೆರೆ ಜಾನಕಮ್ಮ" ಪುಸ್ತಕದಿಂದ ಆರಿಸಿಕೊಳ್ಳಲಾಗಿದೆ.
ಲೇಖಕರು : ಡಾ. ಜಯಮ್ಮ ಕರಿಯಣ್ಣ
ಪ್ರಧಾನ ಸಂಪಾದಕರು : ಇಂದಿರಾ ಶಿವಣ್ಣ

---

ಹುಟ್ಟು ರಾಷ್ಟ್ರದಿ – ಗಾಂಧಿ ಮಾರ್ಗದ ಮೊಟ್ಟ ಮೊದಲಿನ ರೈತ ಚಳುವಳಿ
ನೀಲಿ ತೋಟದ ಬಿಳಿಯ ದುಪಟಳ ಮೆಟ್ಟಿತೆಂಬುದೆ ಮುಖ್ಯವು !

ಹೌದು ! ಚಂಪಾರಣ್ಯ ರೈತ ಚಳುವಳಿ
ಗಾಂಧೀ ಅವರಿಗೆ ಮತ್ತು ಅವರ ಮಾರ್ಗಕ್ಕೆ ಪ್ರಯೋಗಾರ್ಹ ಪ್ರಪ್ರಥಮ
ವೇದಿಕೆಯಾಯಿತು. ಯಶಸ್ಸನ್ನೂ ಕಂಡ ಕಾರಣ, ಬರುವ ದಿನ ಮಾನಗಳಿಗೆ
ಅರುಣೋದಯವೇ ಆಯಿತು!

# ಗಾಂಧೀಜಿ ಕುರಿತು

– ಕುವೆಂಪು

ಹೇ ಅಹಿಂಸಾ ಶೀಲನೇ
ಖಾದಿ ಚರಖಾದ ಲೋಲನೆ
ನಿನ್ನ ಸೇವೆಯ ಅಮಲ ಗಂಗೆಯು
ಜಗವ ಪಾವನ ಗೈಯಲಿ
ಮುಕ್ತಿಗೆಮ್ಮನು ಒಯ್ಯಲಿ
ನೀನು ಪರಮ ಪವಿತ್ರನು
ನೀನಮರ ಚಾರಿತ್ರ್ಯನು
ಗತಿ ವಿಹೀನರನಾಥ ಬಂಧುವು
ನೀನು ದಯೆಯ ವಿಶಾಲ ಸಿಂಧುವು
ಮಂಗಳದ ಮಳೆ ಕರೆಯಲಿ
ರಂಗ ನಿನ್ನನು ಪೊರೆಯಲಿ
ಭರತ ಖಂಡದ ಜ್ಯೋತಿಯೇ
ಹೇ ಅಪಾರ ಪ್ರೀತಿಯೇ ನಿನ್ನ ತಾಳ್ಮೆಯ
ಶಾಂತಿ ಶಕ್ತಿಗಳಿಳೆಯ ಕಂಗಳ ಹಿಡಿದಿದೆ
ಎಲ್ಲರೊಲುಮೆಯ ಪಡೆದಿವೆ
ನೀನೆ ಪರಮಾದರ್ಶವು
ಧನ್ಯ ಭಾರತ ವರ್ಷವು
ನಿನ್ನ ಹೊಯಿಲಿನೊಳೆಲ್ಲ ಹರಿಯಲಿ
ಜಾತ ವೈರವನೆಲ್ಲ ಮರೆಯಲಿ
ಮಂಗಳದ ಮಳೆ ಕರೆಯಲಿ
ರಂಗ ನಿನ್ನನು ಪೊರೆಯಲಿ

ಸೌಜನ್ಯ : ಸರ್ವೋದಯ ಸಾಧಕ ಶಂಕರ ಉತ್ತಾರ ಅವರ ಸಹಸ್ರಚಂದ್ರ ದರ್ಶನ
ಸಂದರ್ಭ ಗ್ರಂಥ, ಸಂ. ಡಾ. ಗೀತಾ ಭಾರತ, ಪುಟ ಸಂ. 37–39, 42–43

# ಶ್ರೀ ಸಾಮಾನ್ಯರ ದೀಕ್ಷಾಗೀತೆ

– ಕುವೆಂಪು

ಕೊನೆಗೊಂಡಿತೊ ಓರೋರ್ವರ ಗರ್ವದ ಕಾಲ
ಇದು ಸರ್ವರ ಕಾಲ ಸರ್ವೋದಯ! ಸರ್ವೋದಯ
ಸರ್ವೋದಯ ಯುಗ ಮಂತ್ರ !
ಸರ್ವೋದಯವೆ ಸ್ವಾತಂತ್ರ್ಯದ ಶ್ರೀತಂತ್ರ
ಮೇಲಿಲ್ಲವೋ ಕೀಳಿಲ್ಲವೋ !
ಸರ್ವಸಮಾನದ ರಾಜ್ಯ
ಅಧ್ಯಕ್ಷನೋ ಸೇನಾನಿಯೋ
ಕಮ್ಮಾರನೋ ಚಮ್ಮಾರನೋ
ಕಾಯಕವೆಲ್ಲವು ಪೂಜ್ಯ
ಕೈಗಾರನೊ ಕಲೆಗಾರನೊ
ಇಬ್ಬರಿಗೂ ಸಮಭೋಜ್ಯ
ಇನಿಲ್ಲವೂ ಅಹಮಹಮಿಕೆ
ತರತಮಗಳ ವ್ಯಾಜ್ಯ !
ಉಣಿಸಿಗೆ ಮೇಣ್ ಉಡುಪಿಗೆ ಮೇಣ್
ಆರಾಗಲಿ ಆರಡಿಯಿನ್
ಹಿಡಿಯುವುದಿನ್ ತ್ಯಾಜ್ಯ !
ಲೌಕಿಕದೊಳ್ ಲೌಕಿಕರಿಗೆ
ಆರಾಗಲಿ ಆರಡಿಯೊಳ್
ಹೊರಲವುದಿನ್ ತ್ಯಾಜ್ಯ
ಇದು ಲೌಕಿಕ ರಾಜ್ಯ

ಸೌಜನ್ಯ : ಕುವೆಂಪು ಅವರ ಕವನ ಸಂಕಲನದಿಂದ

# ಗಾಂಧಿ

– ಕುವೆಂಪು

ಮರೆವುದೆಂತೋ ನಮ್ಮ ಸ್ವಾತಂತ್ರ್ಯ ಶಿಲ್ಪಿಯ
ದಿವ್ಯ ದಿನದಿ ಶುಭ ಮುಹೂರ್ತದಲ್ಲಿ
ಮರೆವುದೆಂತೈ ಭುವನ ಗೌರವಾ ಮಹಾತ್ಮನ
ಸ್ವಾತಂತ್ರದಿ ಸುಪ್ರಭಾತದಲ್ಲಿ

ಹೆಜ್ಜೆಹೆಜ್ಜೆಯಾನಿರಿಸಿ ಕೈಹಿಡಿದು ನಡೆಗಲಿಸಿ
ಬಿಡುಗಡೆಗೆ ತಂದ ಆ ತಂದೆ ಇಲ್ಲಿ
ಎಲ್ಲಿ ಓ ಅವನೆಲ್ಲಿ ನಿಚ್ಚವೂ
ನಮ್ಮೆದೆಯ ನಂಜೀಂಟುವ
ನೀಲಕಂಠನಿಲ್ಲಿ ನೀಲಕಂಠನಿಲ್ಲಿ

ಕ್ರಿಸ್ತ ಬುದ್ಧರ ಮೈತ್ರಿಯಂ ಸಾರಿ ಸಾಧಿಸುತೆ
ವಿಶ್ವಸೇವಕರ ಪಂಕ್ತಿಯಲಿ ನಿಂದೆ
ವಾದಿಸುತೆ ಬೋಧಿಸುತೆ
ಕರುಣೆಯಂ ಸಾಧಿಸುತೆ
ಭಕ್ತಿಯಿಂ ದೇವರಂ ಪ್ರಾರ್ಥಿಸುತೆ

ಸೃಷ್ಟಿಕರ್ತಂ ಸೃಷ್ಟಿತಾನಾಗಿ ಸೃಷ್ಟಿಯೊಳು
ದುಡಿಯುತಿರ್ಪುದ ತಾನ ದಿವ್ಯಶಕ್ತಿಯಾಗಿ
ಗಾಂಧಿಯೆಂಬ ಪೆಸರಿನ ನಾಂದಿಯಾಗಲಿ
ನಮ್ಮ ಸ್ವಾತಂತ್ರ ಸಂಭ್ರಮಕೆ ಹಾಡು ಪಕ್ಷಿ
ಜೈ ಗಾಂಧಿಗೆ ಜೈ ಗಾಂಧಿಗೆ ಜೈ ಗಾಂಧಿಗೆ

ಸ್ವಾತಂತ್ರವ ಸಾಧಿಸಿದ ವೀರ ಶ್ರೀ ಭುಜಕೆ
ಸತ್ಯ ಅಹಿಂಸಾ ತ್ಯಾಗ ಸಮರ್ಪಣದ ಋತ
ಚಿನ್ಮಯ ನಿಜಕ ಚಿನ್ಮಯ ನಿಜಕ

# ಗಾಂಧಿಯ ದರ್ಶನ

– ಮಾಸ್ತಿ ವೆಂಕಟೇಶ ಅಯ್ಯಂಗಾರ್

ಇಂದು ನಮ್ಮ ಮಹಾತ್ಮ
ಗಾಂಧಿಯನು ನೋಡಲಿಕೆ
ಬಂದೆವಿಲ್ಲಿಗೆ ಲೋಕ
ಬಾಂಧವನ ದರುಶನಕೆ

ಜನರ ಸೇವೆಯಲಿ ಮೇಯ್
ಸೋತವನೆಂದರು
ಅನುಮಾನ ಬರಿದು ಇದು
ಭೀತಿ ಬಹುಬರಿದು

ಸೋತವನ ಮೇಯ್ಯೇ ಇದು
ಅಲಸಿದನೆ ಇವರು?
ಈತ ಸೋತನೆನಲು
ಗೆಲಿದವರು ಎಲ್ಲಿ?

ಎಳೆಯ ಮಗುವಿನ ಮೊಗದ
ನಗೆಯಿಹುದು ಮೊಗದಿ
ಇಳೆಯರಸರಿಗೆ ಬರದ
ಬಗೆಯ ಗಾಂಭೀರ್ಯ

ಅನುಜರೊಡನಾಡುತಿಹ
ಹಿರಿಯನುರುಸರಸ
ಮನುಜರಾಟವ ನೋಡಿ
ಕರಗಿರುವ ಕರುಣೆ

ತಾಪಸ ವೃತ್ತಿಯಲಿ
ಘನಿಸಿರಲು ತೇಜ
ದೀನವೋ ದೇಹವೋ
ಎನಿಸುತಿಹ ಒಡಲು

ಸೋಲೆಂಬ ಮಾತುಂಟೆ
ಕರುಮವೀರನಿಗೆ?
ಮೇಲ ಮೇಲ್ಮೆಲಲ್ಲೇ
ಹರಿಯ ದಾಸರಿಗೆ

ಹರಿಯ ಹಿರಿಯಾಳಿವನು
ಗಾಂಧಿ ಮಹಾತ್ಮ
ಕರುಣಿಪನು ಹರಿ ತನ್ನ
ಭಾಂಧವಗೆ ಶುಭವ

ಸಾಕು ಸದ್ಯಕೆ ಸೇವೆ
ಎಂದು ಹರಿ ಇವನ
ಬೇಕೆಂದೇ ಕುಳ್ಳಿರಿಸಿ
ನಿಂದಿಹನು ಕೆಲದೆ

ಬಿಡುವ ಕೇಡಂದೆನುವ
ಮರುಳುತನ ಒಂದು
ಕಡೆಗಿರಲಿ: ಬಂದಲ್ಲ
ಎರಗಿ ಹಿರಿಯನಿಗೆ

ಭರತಮಾತೆಯ ಹರಿಯ
ಕುವರನಿಗೆ, ಹರಿಯ
ಹಿರಿಯ ದಾಸಗೆ ಬಂದು
ಇವನಿಂದೆರಗಿ

ಇವನ ಧರಿಸಿದ ಭೂಮಿ
ಪುಣ್ಯ ಭೂಮಿ ಇದು
ಇವರ ನೋಡಿದ ನಾವು
ಧನ್ಯರಾವಿಂದು

# ಪೂತಾತ್ಮ – ಹೂತಾತ್ಮ
# ಹುತಾತ್ಮ – ಮಹಾತ್ಮ

– ದ.ರಾ. ಬೇಂದ್ರೆ

ಓ ಮಹಾತ್ಮ; ಶತಸಾಂವತ್ಸರಿಕಕ್ಕೆ ಸತ್ಯ ವರದಿ ಮಾಡೋಣ
ನೀನು ಹೋದ ಮೇಲೆ, ನಾವು ತಿನ್ನುವ ಭಿಕ್ಷೆ ಅನ್ನ, ಪರದೇಶಿ
ಬಳಸುವ ಕಳ್ಳ ಹೊನ್ನು, ಪರದೇಶಿ ಬಳಸುವ ಮಳ್ಳ ಹೆಣ್ಣು,
ಪರದೇಶಿ ಕಲಿಸುವ ಮಂತ್ರ, ಯಂತ್ರ, ತಂತ್ರ, ವಿದ್ಯೆ ಪರದೇಶಿ

ಅಹಿಂಸಾ ಯಜ್ಞದಂತೆ, ಪರ್ಜನ್ಯ ಮಳೆ
ಮಳೆಯಂತೆ ಬೆಳೆ, ಅನ್ನದಂತೆ ಪ್ರಜೆ, ಪ್ರಜೆಯಂತೆ ರಾಜ್ಯ

ಪಶುಯಜ್ಞ ಅಡಗಿ, ನರಯಜ್ಞ ದಿನದ ಪಾಕವಾಗಿದೆ
ನೀನು ಅಮರ ನಿಜ! ನಿನಗೆ ಗೊತ್ತಿಲ್ಲದೇನು?
ನಿನ್ನ ಕಣ್ಣಿಗೆ ಇದೆಲ್ಲಾ ಬಿದ್ದಿಲ್ಲಾ – ಎಂದೆಲ್ಲಾ
ಉದೋ ಶಂಖ ಊದಬೇಕು

ಭಾರತದ ಅಪೂರ್ವ ಪುಣ್ಯಪುಂಜ
ಎಂದಿನಿಂದಲೋ ಹುದುಗಿತ್ತು, ಎಲ್ಲೋ ಹೋಳಿ ಹೋಗಿ
ಮೋಹನದಾಸ ಹೂತನು, ಪರಮ ಪೂತನು
ಬೆಂಕಿ ಬೇರೆ! ಬೆಳಕು ಬೇರೆ! ಬಣ್ಣ ಬೇರೆ!
ಬಿಡಿಬಿಡಿಸಿ ಹೇಳಿದ ಮಹಾತ್ಮ

ಹಸಿವು ಕಸಿವಿಸಿ, ಕಿಚ್ಚು ಒಂದರಿಂದೊಂದು ದೂರ ಇಲ್ಲ
ಒಂದನ್ನು ಹೊತ್ತಿಸಿ, ಇನ್ನೊಂದನ್ನು ನಂದಿಸುವುದು ತೂಕದ ಕೆಲಸ

ಯಜ್ಞವೇ ಹಿಂಸೆ ಆಗುತ್ತದೆ ಹಿಂಸೆ ನುಂಗಿವರೆ
ಅಹಿಂಸೆ ಹುಟ್ಟುವುದಿಲ್ಲ ಮಾನವರು ದಾಯಾದಿಗಳು, ದೈತ್ಯರು

ಪಾಲಿನ ನ್ಯಾಯ ಇನ್ನೂ ತೀರಿಯೇ ಇಲ್ಲ
ಅಹಿಂಸೆಯು ಸತ್ಯದ ತಪಸ್ಸು!
ಹಿಂಸೆ ಅನಿವಾರ್ಯ ಶಾಪ
ಹೊತ್ತಿದ ಬೆಂಕಿ ಹೊತ್ತಿಸದವನನ್ನೂ ನೆಕ್ಕುವುದು
ಹೊತ್ತಿಸಿದವರನ್ನೂ ಮುಕ್ಕುವುದು
ಯಾರು ಹುಟ್ಟಿಸಿದರೋ ಈ ಅವಳಿ – ಜವಳಿ ಮಾತು
ಹಿಂಸೆ? ಅಹಿಂಸೆ

ಈ ಅದಲು ಬದಲು ತೊದಲು ಮಾತು
ಪಂಜು ಹೊತ್ತಿಸಿ ಹಿಲ್ಲಾಲು ಹಿಡಿದವರೆಲ್ಲಾ
ಶಾಂತಿ ಶಾಂತಿ! ಅಹಿಂಸೆಗೆ ಜಯ ಜಯಕಾರ
ಕೂಗಿದ್ದೇ ಕೂಗಿದ್ದು, ಕೊನೆಗೆ ಊರೆಲ್ಲಾಬೂದಿ
ಹೇಳಿದ್ದು – ಅಹಿಂಸಾ – ಪುರಾಣ
ತಿಂದದ್ದು ಹಿಂಸೆಯ ಯಮ – ಬದನೆಕಾಯಿ
ಅಹಿಂಸೆ ಹುಸಿ ಹೋಗುತ್ತದೆ
ಹಿಂಸೆ ಹೇಸಿಗೆಗೆ ಹೇಸುವುದಿಲ್ಲ
'ದಯಾ ಧರ್ಮಕಾ ಮೂಲ ಹೈ'
ಎಂದು ಡಂಗುರ ಸಾರಿಸುವುದು
ಮತ್ತೆ ಏನೂ ಮಾಡದವರಂತೆ, ಗಪ್ಪು ಗಡದ್ದು
ಹೊಸ ಲೆಕ್ಕ ಹೊಸ ಲೆಕ್ಚರು

'ಹಿಂಸೆ' ಮಹಾತ್ಮರ ಮುಂಚೆಯೇ ಹುಟ್ಟಿತ್ತು
ಅಹಿಂಸೆ ಅವರ ಮುಂಚೆಯೇ ಅರೆ ಸತ್ತಿತ್ತು
ಅವರು ಊದಿದ ಮಂತ್ರದಿಂದ
ಅಹಿಂಸೆಗೆ ಬಹಳಷ್ಟು ತ್ರಾಣ ಬರಲಿಲ್ಲ
ಹಿಂಸೆಗಂತೂ ಲಂಗೂ ಲಗಾಮು ಇರಲೇ ಇಲ್ಲ
ದಯೆಯಿಲ್ಲದ ನಿರ್ದಯರೂ
ಇನ್ನೊಬ್ಬರಿಂದ ದಯೆ ಅಪೇಕ್ಷಿಸುತ್ತಾರೆ

ಬುದ್ಧಿಗೇಡಿಗೂ ಆಗ್ರಹ ಗೊತ್ತಿದೆ
ಎಂಥ ಬುದ್ಧಿವಂತನಿಗೂ ಸತ್ಯ ಸರಿಯಾಗಿ ತಿಳಿದಿಲ್ಲ
ಸತ್ಯಾಗ್ರಹದಲ್ಲಿ ಸತ್ಯ ಕಡಿಮೆಯಾಗಿ
ಆಗ್ರಹ ಹೆಚ್ಚಾಗುತ್ತಲೆ,
ಅಹಿಂಸೆಯ ಹಚ್ಚಿದ ಬಣ್ಣ ಉದರಿ
ಹಿಂಸೆಯ ಉಗ್ರರೂಪ ಉರಿದೇಳುತ್ತದೆ

ತಗಲು, ತಂಟೆ, ಉಪವಾಸ! ಮೋಸಂಬಿ ರಸ!
ಮೋಸ, ದೋಷ, ಉಪದೇಶ!
ದೇಶದ ತುಂಬೆಲ್ಲಾ ಸುದ್ದಿ
ಯಾವುದು ನಿಜವೋ?
ಯಾವುದು ಸುಳ್ಳೋ?
ವರ್ತಮಾನ ಪತ್ರಕ್ಕೆ ಹೊಟ್ಟೆತುಂಬ ಸುದ್ದಿ!
ನಮಗೆ ಬೇಕಾಗಿದ್ದುದು ಶುದ್ಧಿ
ಓಹೋ ಹೂತಾತ್ಮ! ಹಾಹಾ ಹುತಾತ್ಮ!

ಹೂವಿಗೆ ಜೇಗೆ ಹಚ್ಚಿದರು
ಅದರ ಸೌಂದರ್ಯ ಮೆಚ್ಚಿದರು
ಸಂಸ್ಕೃತಿಯ ಜಂಭ ಕೊಚ್ಚಿದರು
ಕೊನೆಗೆ ಸುಟ್ಟವನ ಬೂದಿ
ಹಣೆಗೆ ಹಚ್ಚಿಕೊಂಡರು
ಮತ್ತೆ ಹಣೆಬರಹದ ಹಣೆ, ಬರಿದೋ ಬರಿದು
ಮಾರ್ಟಿನ್ ಲೂಥರ್ ಕಿಂಗ್!
ಅದೇ ಹಾದಿ ಹಿಡಿಸಿದರು ಹಿಂಸಾ ಭಕ್ತರು
ಅಹಿಂಸೆ ಎಂಬುದು ಗೋಡೆ
ಹಿಂಸೆ ಎಂಬುದು ಚಿತ್ರ
ಮತ್ತೆ ಮತ್ತೆ ಜನ ಓದುವುದು – ಅದೇ ವಿಚಿತ್ರ

# ಗಾಂಧಿ

– ದ.ರಾ. ಬೇಂದ್ರೆ

ಜಯಜಯ ಗಾಂಧಿ ಮೋಹನ
ರಾಷ್ಟ್ರದೋಹನ
ಸತ್ಯ ಶರಣ
ಸ್ವಾತಂತ್ರ ಧೂತ ಜಯ ಜಯ
ಜಾತಾ ನಿರ್ಭಯ

ರಾಷ್ಟ್ರಹವನ ರಾಷ್ಟ್ರಹವನ
ಕರ್ನಾಟದೀಶದಾಜನ
ಕನ್ನಡಿಸಿತು ಮನ
ಹಾಡಿತು ಕವಿಗಣ

ನೆನೆಸೇವು ನಿಮ್ಮ ಆ ನಗೆ
ಒಳಿಗೆ ಇಲ್ಲ ಧಗೆ
ಬರೀ ಬೆಳಕು ಬರೀ ಬೆಳಕು
ಛಲ ಬಲ ಇದ್ದ ಧೀರ
ಎಂತಾ ಶೂರ ಎಂತಾ ಶೂರ

ಸ್ವಾತಂತ್ರ್ಯಜೇತ ಜಯ ಜಯ
ಹುಟ್ಟಾ ನಿರ್ಭಯ
ದೇವ ಹವನ ದೇವ ಹವನ
ಕವಿ ಹೃದಯ ದೀಪ್ತ ಭಾವನ
ಕರುಣಾ ಕವನಾ ಸ್ಮರಣಾ ಕವನಾ

ಜಯಜಯ ಗಾಂಧಿ ಮೋಹನ
ರಾಷ್ಟ್ರದೋಹನ

# ಗಾಂಧಿ

– ಡಿ.ಎಸ್.ಕರ್ಕಿ

ನಮ್ಮ ಅಂತರಂಗದಿ
ನಿಂತಿರುವರು ಗಾಂಧೀಜಿ
ನಿಂತಿರುವರು ಗಾಂಧೀಜಿ

ಸತ್ಯದೊಂದು ದೀಪವಾಗಿ
ಕರುಣೆಯೊಂದು ರೂಪವಾಗಿ
ಶ್ರದ್ಧೆಯೊಂದು ಗೀತವಾಗಿ
ವಿಶ್ವದಂತರಂಗದಿ
ನಿಂತಿರುವರು ಗಾಂಧೀಜಿ

ನವರಾಷ್ಟ್ರದ ಮಾನವಾಗಿ
ಜಗದೈಕ್ಯದ ಗಾನವಾಗಿ
ತನನ ತನನ ತಾನವಾಗಿ
ಕವಿಗಳಂತರಂಗದಿ
ನಿಂತಿರುವರು ಗಾಂಧೀಜಿ

ದಿಟವನೆಂದು ಮರೆಯದಂತೆ ದಯವನೆಂದು ತೊರೆಯದಂತೆ
ತನಕೆ ಮನವ ತೆರೆಯುವಂತೆ ನಮ್ಮ ಅಂತರಂಗದಿ
ನಿಂತಿರುವರು ಗಾಂಧೀಜಿ, ನಿಂತಿರುವರು ಗಾಂಧೀಜಿ

---

ನೀನು ಎದೆಗುಂದಬಾರದು ಇದನ್ನು ನೀ ನೆನಪಿಡು
ಆನಂದದ ವನದಲ್ಲಿ ಅರಳುವ ಹೂವಾಗಿರು
ಸೌದತ್‌ನ ಈ ಬಿನ್ನಹ ಮರೆಯದಿರಲು
ಹೇಗಾದರೂ ಸರಿ ಹೋಂ ರೂಲ್ ಗಳಿಸಿಬಿಡು

– ಸೌದತ್ ಬಾನು ಕಿಚಲು

ಸುಬಾಯಿ ಕಾಂಗ್ರೆಸ್‌ನ ಅಧ್ಯಕ್ಷರಾದ ಲಾಲ ದುನಿ ಚಂದ್ ಅವರು
ಭೇಟಿಯಾಗಲು ಬಂದಿದ್ದಾಗ ಅವರಿಗೆ ಈ ಚಿಕ್ಕ ಕವಿತೆ ಬರೆದು ಕೊಟ್ಟರು

# ದಿವ್ಯಜ್ಯೋತಿ

– ಡಿ.ಎಸ್. ಕರ್ಕಿ

ತಿಳಿ ನೀಲದಲ್ಲಿ ತಾ ನೀಲವಾಗಿ ಅವ ಹೋದ ದೂರ ದೂರ
ಬೆಳಗಿಹುದು ಇಲ್ಲಿ ಅವ ಬಿಟ್ಟ ಬೆಳಕು ಇನ್ನೊಮ್ಮೆ ಏಕೆ ಬಾರ?
ಆಚೆ ಈಚೆ ಮೊಮ್ಮಕ್ಕಳಿಬ್ಬರಲಿ ಮೈಯ ಬಾರ ಚೆಲ್ಲಿ
ಜಗದ ಕರುಣೆ ನಡುವಂತೆ ನಡೆದು ಮಂದಿರದ ಪೀಠವೇರಿ
ನಿಂದಲ್ಲೊ – ಜಡವುಳಿದು ಜೀವವೊಂದಾಯ್ತು ದೇವನಲ್ಲಿ
ಎಸೆದ ಗುಂಡಿಗಾ ಕುಸಿದ ದೇಹದಲಿ ವಿಮಲ ರಕ್ತ ಚೆಲ್ಲಿ
ಮುಗಿದ ಕೈಯು ಮುಗಿದಂತೆ ಇತ್ತು : ನೆಲಸಿತ್ತು ಕ್ಷಮೆಯ ಮೊಗದಿ
ಎದೆಯೊಳೆಂಥ ತಿಳಿ ಭಾವವಿತ್ತು ! ಅದನಾವ ಬಲ್ಲ ಜಗದಿ?
ಹೋದ ಹೋದನವ ತ್ಯಾಗ ಜೀವನದ ತುತ್ತ ತುದಿಯನೇರಿ
ಏರಿ ಏರಿದೊಲು ಅಂತರಂಗದೈಸಿರಿಯ ಜಗಕೆ ತೂರಿ
ಸತ್ಯ–ಪ್ರೇಮಗಳ ಸತ್ವವನ್ನೆ ಕಣ್ಣೆದುರು ಎತ್ತಿ ತೋರಿ
ಬೇರೆ ಲೋಕದನುಭಾವ ಬೀರಿ ಅವ ಹೋದನಾವ ದಾರಿ?
ಎನಿತು ಸರಳ ನುಡಿ, ಎಷ್ಟು ಸಹಜ ನಡೆ, ಮನದ ಮಹತಿಯೇನು
ಅವನ ಎದೆಯ ಉನ್ನತಿಯ ನಿಲುಕುವದು ಯಾವ ಗಿರಿಯ ಸಾನು?
ಇಹುದೆ ಅವನ ಕರುಣೆಯನು ಧರೆಗೆ ಕರೆವಂಥ ಕಾಮಧೇನು?
ಅವನು ಗೈದ ಲೀಲೆಯಲಿ ಲಯಸಿತೆಂಥವರ "ನಾನು–ನಾನು"
ತಿಳಿದಿಹುದು ಚಿತ್ತ : ಹರಿದಿಹುದು ನೋಟ ಮೇಲಕ್ಕೆ ಬಾನಿನೆಡಗೆ
ಆ ಜಾಡ ಹಿಡಿದು ಇಳಿದಂತೆ ಇಹುದು ಬೆಳಕೊಂದು ಕೆಳಗೆ ಇಳೆಗೆ
"ಎನೆಷ್ಟು ಭ್ರಾಂತಿ ಕಾಣದೆಯ ಜ್ಯೋತಿ?"
ಎಂಬರುಹು ಮೂಡಲೊಡನೆ
ಆಬೆಳಕ ನಂಬಿ ನಿಂದಿಹನು ಧೀರ ಎದೆ ತೆರೆದು ನಾಡ ಕರೆಗೆ

ಸೌಜನ್ಯ : ಅಮರ ಬಾಪು ಚಿಂತನ ಮಾಸಿಕ – ಜೂನ್ 2014

# ಚರಿತ್ರೆಯಲ್ಲಿ ಮರೆತವರ ಕಥೆ

– ದಿನಕರ ದೇಸಾಯಿ

ನಾಡವರೆ ನಿಜನಾಡಿಗರು
ನೋಡು ಕಾಳಗವ ಹೂಡಿಹರು
ಸ್ವಾತಂತ್ರ್ಯದ ಸುಖದೂಟವನುಂಡು
ವಿಜಯ ನಗರದಲಿ ಕಾದಿದೆ ದಂಡು
ನಾಡವರಂದಿನ ದಾಸ್ಯವ ಕಂಡು
ಉಪ್ಪು ಮಾಡುವರು ಮುಂದಕ್ಕೆ ಬಂದು
ನಾಡವರೆ ನಿಜನಾಡಿಗರು

ಹಿಂದಿನ ಹುರುಪೇ ಇಂದಿಗೆ ಮೂಡಿ
ನಾಡವರೆಲ್ಲರೂ ಒಂದೆಡೆಗೂಡಿ
ಗಾಂಧಿ ಮಹಾತ್ಮರ ಕೊಂಬನು ಕೇಳಿ
ನೆಗೆದು ಕಾದುವರು ಧೈರ್ಯವ ತಾಳಿ
ನಾಡವರೇ ನಿಜನಾಡಿಗರು
ನೋಡು ಕಾಳಗವ ಹೂಡಿಹರು

ಕಲ್ಲಿನ ದೇಹವ ಆರಡಿ ಉದ್ದ
ಸೋಲದು ಇವರಿದ್ದರೆ ಈ ಯುದ್ದಧ
ಕನ್ನಡ ನಾಡಿನ ಶಿಲ್ಪರು ಇವರು
ದೇಶಗೋಸುಗ ಕಾದುತಲಿಹರು
ನಾಡವರೇ ನಿಜನಾಡಿಗರು
ನೋಡು ಕಾಳಗವ ಹೂಡಿಹರು

ಶಾಂತತೆಯಿಂದಲಿ ಕಾದಲುಬೇಕು
ಖಡ್ಗ ತುಪಾಕಿಗಳಿಂದಿಗೆ ಸಾಕು
ಅಂದರೆ ಮುಗಿವುದು ವೈರಿಯಸೊಕ್ಕು
ಸಿಗುವುದು ನಮಗೆ ಸ್ವರಾಜ್ಯದ ಹಕ್ಕು
ನಾಡವರೇ ನಿಜನಾಡಿಗರು
ನೋಡು ಕಾಳಗವ ಹೂಡಿಹರು

ನಾಡಿನ ಧೀರರು ಸೆರೆಮನೆಯಲ್ಲಿ
ಸ್ವಾತಂತ್ರ್ಯದ ಸುಖತೊಟ್ಟಿಲಿನಲ್ಲಿ
ನಾಡವರಲಿ ಮೂಡಿರುವುದು ಸ್ವರಾಜ್ಯ
ಇದುವೇ ಭಾರತ ಭೂಮಿಯ ಭಾಗ್ಯ
ನಾಡವರೆ ನಿಜನಾಡಿಗರು
ನೋಡು ಕಾಳಗವ ಹೂಡಿಹರು

---

ಬಲಹೀನರಾದವರು ಇತರರನ್ನು ಕ್ಷಮಿಸಲಾರರು. ಕ್ಷಮಿಸುವುದು ಎನ್ನುವುದು ಶಕ್ತಿಶಾಲಿಗಳಾದವರ ಗುಣ

– **ಮಹಾತ್ಮ ಗಾಂಧಿ**

# ಮಾಡಿ ಮಡಿದವರು

- ದಿನಕರ ದೇಸಾಯಿ

ಎಲ್ಲಿ ಘೋರ್ಗರೆವ ಪಡುಗಡಲ
ಗಾಢಗಂಭೀರತೆಯು ನೆಲಸಿಹುದೊ
ಎಲ್ಲಿ ಸನಿಹದಲಿ ಹಾವಿನೊಲು
ಗಂಗಾವಳಿ ಹೊಳೆ ಹೊಳೆದು ಹರಿದಹುದೊ
ಎಲ್ಲೆ ಘನಮನೋಹರ ಸಹ್ಯಾದ್ರಿ ಸ್ವಾತಂತ್ರ್ಯ ಯೋಧರ
ಪಾದ ಧೂಳಿಯ ಹೊತ್ತು ನಿಂದಿಹುದೊ
ಎಲ್ಲಿ ಕಣ್ಮನಂಗಳ ಕುಣಿಸಿ ತಣಿಸುವ
ಗುಮಟೆ ಪಾಂಗವು ಸುಗ್ಗಿ ಕುಣಿತವು ರಂಜಿಸುವುದೊ
ಎಲ್ಲಿ ಯಕ್ಷಗಾನ ತಾಳ ಮದ್ದಲೆ
ಪಂಚವಾದ್ಯಗಳು ಮೊಳಗಿಹುದೊ

ಅಲ್ಲೆ ಆ ಕಡೆ ನೋಡಲಾ
ಅಲ್ಲೆ ನಾಡವರ ಬೀಡಲಾ
ಅದುವೆ ಮಾಡಿಮಡಿದವರ ತಾಯ್ನಾಡಲಾ

ಇಲ್ಲಿ ಮೊಳಗಿತು ಮೊದಲು ಸ್ವಾತಂತ್ರ್ಯ ರಣಭೇರಿ
ಪೆಸರಾದ ಕನ್ನಡದ ಬಾರ್ಡೋಲಿಯಲ್ಲಿ
ಇಲ್ಲಿಯೇ ಕೇಳಿತು ಮೊದಲು
ಬಾಪು ಬಾರಿಸಿದ ಸ್ವಾತಂತ್ರ್ಯ ಡಂಗುರ
ಹೂಡಿವರು ಕಾಳಗವ ನೋಡು ನಾಡವರು
ಎಂದು ಎದೆದುಂಬಿ ಕವಿ ದಿನಕರನು ಹಾಡಿದ ನೆಲವಿದು

ಗಾಂಧಿ ಸಂದೇಶವನ್ನು ಹೊತ್ತು
ಬಂದಿಳಿದರಿಲ್ಲಿ ಕರಮರಕರ ದಿವಾಕರ
ಬಾಲಚಂದರ ಜೋಶಿ ನಾಯಕರು ಹಲವರು
ಬಿಸಿನೆತ್ತರದ ನಾಡವರ ಹುರಿದುಂಬಿಸುತ್ತ
ದೇಶಭಕ್ತಿಯ ಜ್ಯೋತಿಯನು ಉರಿಯಿಸುತ್ತ
ಹಾಲಕ್ಕಿ ಗೌಡರು ಭಟ್ಟರು ಶೆಟ್ಟರು
ಕೊಂಕಣಿಗರನು ಬಾ ಎಂದು ಕರೆಯುತ್ತ
ಒಮ್ಮತವು ಒಗ್ಗಟ್ಟು ಒಂದೇ ಮನವು
ಇದುವೆ ಭಾವೈಕ್ಯವು ಎಂದು ಸಾರುತ್ತ
ಕೂಡಿ ಕಾಳಗವ ಹೂಡಿದ ನೆಲವಿದು
ಕರನಿರಾಕರಣೆಯ ವೀರಕರ್ಮಭೂಮಿಯಿದು
ಮಾಡಿಮಡಿದವರ ನೆಲವಿದು

ಸೌಜನ್ಯ : ಈ ಕವನ "ಕಾಡ ಹೆಣ್ಣು"
ಕವನ ಸಂಗ್ರಹದಿಂದ ಆಯ್ದುಕೊಳ್ಳಲಾಗಿದೆ.

---

ಮನಸ್ಸಿನ ಕಿಟಕಿಗಳನ್ನು ಯಾವಾಗಲೂ ತೆರೆದಿಡಬೇಕು. ಅದೇ ಸಮಯದಲ್ಲಿ ಗಾಳಿಯಲ್ಲಿ ನಮ್ಮ ಕಾಲುಗಳು ಹಾರಿಕೊಂಡು ಹೋಗಿಬಿಡಬಾರದು

– **ಮಹಾತ್ಮ ಗಾಂಧಿ**

# ಭಿನ್ನಮತಗಳ ಗೊಡವೆಯೇತಕೆ

– ಸಿದ್ಧವನಹಳ್ಳಿ ಕೃಷ್ಣಶರ್ಮ

ಭಿನ್ನಮತಗಳ ಗೊಡವೆಯೇತಕೆ
ಚೆನ್ನ ನೀನೊಬ್ಬನಿರಲು
ತೋಡಿಯಾದರೂ ಮೇಣುಮಾ
ಕಾಂಭೋದಿಯಾದರೂ ನಾಟಿಯಾದರು
ಭೇದವಿಲ್ಲದೆ ನಿನ್ನ ನಾಮವ
ಪಾಡಲಿಲ್ಲವೇ ಎಲ್ಲವು

ಕಾವಿಯುಟ್ಟರು ಸೀರೆ ಉಟ್ಟರು
ಶೀವಿಯುಡುಪನು ತೊಟ್ಟುನಲಿದರು
ಯಾವ ವೇಷದಿ ಬಂದು ನಿಂತರು
ತಾಯಿ ಕಂದನ ತಿಳಿಯಳೆ

ಕಲ್ಲು ಸಕ್ಕರೆ ತರುವಳೊಬ್ಬಳು
ಬೆಲ್ಲಬಾಳೆಯ ಹಣ್ಣನೊಬ್ಬಳು
ಇಲ್ಲದವಳು ತಾ ಕೈಯ ಮುಗಿವಳು
ಎಲ್ಲ ನಿನ್ನಡಿಗಾಗಿರೆ

ಸೌಜನ್ಯ : ಗಾಂಧಿ ಸಾಹಿತ್ಯ ಮಾಲೆ – 11.
ಭಜನಾವಳಿಯಿಂದ ಅಕ್ಟೋಬರ್ 2010–11

# ಗಾಂಧಿ

– ಆನಂದ ಕಂದ

ನಮನವಿದು ನಮನವಿದು ನಮನ ಸಹಜ ಯೋಗಿ
ಸಮತೆಗಾಗಿ ಬಾಳ್ವೆಯನು ಬೇಳ್ದ ನವವಿರಾಗಿ

ಕತ್ತಲಲಿ ಗುರಿಯ ದಾರಿ ಕಾಂಬ ಕಣ್ಣು ನಿನ್ನದು
ತತ್ವ ಮಾತೆಯಾಶ್ರುತ ರವಕೇಳ್ವ ಕಿವಿಯ ನಿನ್ನದು
ಮಿಗಡರಜದೊಳಿತ್ತು ಸೊಗಡು ತಗಲದ ಮನವು ನಿನ್ನದು
ಜಗದ ಸೌಖ್ಯಕೆಂದು ಬೆರಳೆನೆನಿಪ ಬುದ್ದಿ ನಿನ್ನದು

ಮೈತ್ರಿಯಿಂದೇ ಶತ್ರುಗಳನು ಸೋಲಿಸಿದ ವೀರ
ಮೃತ್ಯುವನ್ನು ಮಿತ್ರರಂತೆ ಸ್ವಾಗತಿಸಿದೆ ಧೀರ
ನಿನ್ನ ನೌಕೆ ನಂಬಿದರನು ತಲ್ಪಿಸಿತ್ತೈ ತೀರ
ನೀನು ನಡೆದ ದಾರಿಯದೆ ಸತ್ಯ ಧರ್ಮ ಸಾರ

ಬಲುಮೆ ಮೋಸಗಳನು ಹಣಿಯೆ ಕಲಹಗೈದೆ ರಾಜ
ಕಲಿಸಿದೆ ಜೀವನವ ಚೆಲ್ವ ಕಲೆಯ ಗೊಳಿಪ ಕಲೆಯಸೋಜ
ನೆಲೆಸಿದ ನಾಡಿಗರ ಹೃದಯದೊಳಗೆ ದಿವ್ಯ ತೇಜ
ಸಲಿಪುದೆಂತೊ ಶ್ರದ್ಧಾಂಜಲಿ ಎಲ್ಲರಾಂತೆ ಸಾಜ

ನಮನವಿದು ನಮನವಿದು ನಮನ ಸಹಜ ಯೋಗಿ
ಸಮತೆಗಾಗಿ ಬಾಳ್ವೆಯನು ಬೇಳ್ದ ನವವಿರಾಗಿ

# ಬಾಪೂಜಿಗೆ ಬಾಷ್ಪಾಂಜಲಿ

– ಪ್ರೊ. ಎಂ.ಪಿ. ಸೀತಾರಾಮಯ್ಯ

"ವಾಣಿಯ ವಾಣಿ"

ಬಾರಮ್ಮ ಭಾರತಿ
ಬಾರಮ್ಮ ನುಡಿತಾಯಿ
ನುಡಿಸಮ್ಮ ನುಡಿ ತಾಯಿ
ಏಕಿಂತು ಸುಮ್ಮನಿಹೆ?
ಏಕಿಂತು ಬಿಮ್ಮನಿಹೆ?

ಪುತ್ರರತ್ನವ ಕಳೆದುಕೊಂಡು ದುಃಖದೊಳಿರುವೆ
ಭಾರತಾಂಬೆಗೆ ನಿನ್ನ ಸಾಂತ್ವವಚನವ ಪೇಳ
ಪ್ರೇಮಮಯಿ ತಾಯಿ ಕಸ್ತೂರಿ ಕಣ್ಮುಚ್ಚಿದಳು
ಬುದ್ಧಿ ಹೇಳುವ ತಂದೆ ಕಳೆದನಿಂದು
ಭಾರತೀಯರು ನಾವು ತಬ್ಬಲಿಗಳಾಗಿಹೆವು
ಮುಂದುಗಾಣದೆ ಮನವು ಮುಗ್ಗರಿಸುತಿಹುದಮ್ಮ

ನಿನ್ನ ನುಡಿ ಸುಧೆಗರೆದು
ಕಣ್ಣು ಕಾಣದ ನಮಗೆ
ದಾರಿ ತೋರಮ್ಮ
ಶುಭವ ಕೋರಮ್ಮ
ಓ ಭಾರತಿ ! ಓ ತಾಯಿ

ನಿನ್ನ ಮಣಿಗಣ ವಿಭೂಷಿತ ಮಕುಟವೆಲ್ಲಮ್ಮ?
ನಿತ್ಯ ನುಡಿಯುವ ನಿನ್ನ ದಿವ್ಯವೀಣೆಯದೆಲ್ಲಿ?
ವಿಣಾ ವಿತಾನಕ್ಕೆ ಸರಿಜೋಡಿ ನರ್ತಿಸುವ

ನಿನ್ನವನಿಲೆಲ್ಲಿ?
ಕರದ ಪುಸ್ಕವೆಲ್ಲಿ?
ಜಪಮಾಲೆಯೆಲ್ಲಿ?

ಕೂರಲು ಕಟ್ಟಿಪುದೇಕೆ, ಪೇಳಮ್ಮ ತಾಯಿ?
ನಿನ್ನ ಕೊರಲೇ ಕಟ್ಟಿ ನಮಗುಂಟೆ ಬಾಯಿ?

ತಡೆ ಕಂದ, ತಡೆ ಕಂದ

ಮೌನವೆ ಮಹಾಗೀತೆ ನಾಡಿನಲ್ಲಿಂದು
ಮೌನಮುದ್ರಿತವಾಗಿ ತಲೆಬಾಗಿಸಿದೆ ನಾಡು
ತಗದು ತಗದೆನಗಿಂದು ಎಂದಿನಾ ನಲಿವು. ಹಾಡು
ಭಾರತಾಂಬೆಯ ಮಕುಟ ಕಳಚಿ ಬಿದ್ದಿರಲಿಂದು
ನನಗೆಲ್ಲಿ ಮಕುಟ?
ಭಾರತದ ವಾಣಿ ತಾ ನುಡಿಯ ನಿಲ್ಲಿಸಿತಿಂದು
ನನ್ನ ವೀಣಾವಾಣಿ ನುಡಿವುದೆಂತು?
ಸ್ವಾತಂತ್ರ್ಯ ವರ್ಷದಾಗಮನಮುತ್ಸಾಹದಲಿ
ಕುಣಿದ ನಲಿವಿನ ನವಿಲು ನಡೆಗೆಟ್ಟು ನಿಂತಿರಲು
ನನ್ನ ನವಿಲಿಗೆ ಕುಣಿವ ಹಿಗ್ಗದಿನ್ನೆಲ್ಲಿ?
ದೇವತೆಗಳೇ ನನ್ನ ಕಳುಹಿದರು, ಓ ಕಂದ
ಲೋಕದ ಮಹಾತ್ಮನನು ಹೊಗಳಿ ಬಾರೆಂದು
ಶೋಕಗೀತೆಗೆ ಶ್ರುತಿಯೆ, ಬೆಡಗು ಬಿನ್ನಣವೇ?
ನುಡಿಯಲೊಲ್ಲದ ವೀಣೆ, ಕುಣಿಯಲೊಲ್ಲದ ನವಿಲು

ಇವನು ಹಿಂದೆಯೇ ಬಿಟ್ಟು, ಮುಕುಟವನ್ನು ತೆಗೆದಿರಿಸಿ
ಧವಳ ಚಾರಿತ್ರನಿಗೆ ಮುದಮಪ್ಪುದೆಂದೆನ್ನ
ಧವಳವಸ್ತ್ರವನೊಂದ ಮರೆಯದೆಯೆ ತೆಗೆದುಟ್ಟು
ಕಂಬನಿಯ ವರ್ಷವನು ಸುರಿಸುತ್ತ ಕಾಲ್ಗೆಟ್ಟ
ಕಾಲಮೇಘವನೇರಿ, ಮುಗಿಲ ಬಟ್ಟೆಯಲೆಲ್ಲ
ಮಂದೈಸಿ ನಿಂತಿರುವ ದೇವತೆಗಳೊಗ್ಗಿನಲಿ
ನಡೆಯಲಾರದೆ ನಡೆದು ಪವನ ಮುಂಗಡೆ ಬರಲು
ದಾರಿಯನು ಬಿಡಿಸುತ್ತ, ಬಾಂಬಟ್ಟೆಯಂಬಿಡಿದು
ಚರಿಸಿ ಬಂದೆನು, ಕಂದ : ಲೋಕಕ್ಕೆ ಲೋಕವೇ
ಮರುಗುತಿದೆ, ಕೊರಗುತಿದೆ, ಮುಳಗಿರ್ಪುದಳಲಿನಲಿ
ಅಳಲಿನುಲಿ ಚಿಮ್ಮುತಲೆಯಲೆಯಾಗಿ ಹೊಮ್ಮುತ್ತ
ಬಾನ್‌ಬಯಲನೆಲ್ಲ ತುಂಬಿದೆ ಅಳಲುವಾಡಾಗಿ
ವಿಶ್ವವಾಣಿಯ ಮುಂದೆ ನಾನೆ, ಬಡ ವಾಣಿ?
ಆಲಿಸಾಲಿಸು, ಕಂದ ವಿಶ್ವವಾಣಿಯ ಕೇಳು
ಶೋಕಧಾರವನಿಳುಹು, ಧೃತಿಯ ತಾಳು

ಸೌಜನ್ಯ : ಪ್ರೊ. ಎಂ.ವಿ. ಸೀತಾರಾಮಯ್ಯ ಸಮಗ್ರ ಸಾಹಿತ್ಯ
ಸಂಪುಟ-1ರ ಆಯ್ದ ಕವನ

---

ಉಳಿದವರನ್ನು ಕೆಟ್ಟವರೆಂದು ಹೇಳುವ ಮೂಲಕ ನಾವು
ಒಳ್ಳೆಯವರಾಗಿ ಬಿಡುವುದಿಲ್ಲ

**– ಮಹಾತ್ಮ ಗಾಂಧಿ**

# ಮಹಾತ್ಮರ ಕರುಣೆ

– ಪ್ರೊ. ಎಂ.ವಿ. ಸೀತಾರಾಮಯ್ಯ

ಸಂಚರಿಸುತಿರಲು ದಕ್ಷಿಣದ ದೇಶದಲಿ ಒಮ್ಮೆ ಮಹಾತ್ಮನಿಗೆ
ಸಿಕ್ಕಿತೊಂದು ಕುಗ್ರಾಮ, ಅಲ್ಲಿ ಜನರಿಲ್ಲ, ಇಲ್ಲ ನೀರು

ಕಂಡನವನು ನಿರ್ಜನದ ನಾಡಿನಲ್ಲಿ ಅಂತ್ಯಜಾತಿಯೊಬ್ಬಳನು
ಬಟ್ಟೆ ಹರುಕು, ಮೈಕೊಳಕು, ದೀನೆ ಬಡಬಡಕಲವಳ ದೇಹ

ಕಂಡು ದುರ್ದೈವಿಯವಳ ಪರಿಯನುದ್ವಿಗ್ನಚಿತ್ತನಾಗಿ
ಏಕೆ ಮಗಳೆ ನೀನಿಷ್ಟು ಕೊಳಕೆಂದು ಕೇಳೆ ಪ್ರೀತಿಯಿಂದ

ಅರೆಬತ್ತವಳು ಮುಖತಗ್ಗಿಸುತ ನಾಚಿ ನುಡಿದಳಿಂತು ಮುನಿಗೆ
ದೀನಜನರ ಪಾಡೆಂತು ತಿಳಿಯುವುದು ಧನಿಕ ಜನಕೆ, ತಂದೆ?

ಹತ್ತು ವರ್ಷ ಹಗಲಿರುಳು ನಾನು ಈ ಬಟ್ಟೆಯನುಟ್ಟಿರುವೆ
ನೀರುದೊರೆಯದದರಿಂದ ಬಟ್ಟೆಯನು ನಿತ್ಯ ಒಗೆಯಲಾರೆ

ನೀನು ದೊರೆತಾಗ ಅರ್ಧಬಟ್ಟೆಯನು ಒಗೆದುಕೊಳುವೆ ನಾನು
ಒಣಗಿದರ್ಧವನು ಸುತ್ತಿಕೊಂಡು ಉಳಿದರ್ಧವನ್ನು ಒಗೆವೆ

ನೀರು ದೊರೆಯದದರಿಂದ ತಿರುತಿರುಗಿ ಒಗೆಯಲಾಗದಿಹುದು
ಒಂದೆ ಬಟ್ಟೆಯವಳೆಂತು ಶುಭ್ರಳಾಗಿರಲಿ, ಹೇಳು, ತಂದೆ?

ನನ್ನ ಹಾಗೆ ಅರೆಮುಚ್ಚಿ ಮೈಯ ಜನರಿಹರು ಕೋಟಿ ಕೋಟಿ
ಊಟವೊಪ್ಪತ್ತು, ಬಹಳ ಬವಣೆಯಲಿ ಒಡಲ ಹೊರೆಯುತಿಹರು

ಕೇಳಿ ಅಂತ್ಯಜೆಯ ಕರುಣೆಯುಕ್ಕಿಸುವ ಮಾತ, ಮರುಕದಿಂದ
ಮೇಲುಹೊದಿಕೆಯನು ತೆಗೆದು ಹೆಲಿಂದ ಕೊಟ್ಟನಾಕೆಗೆ ಮುನಿ

ಬೆರಗುಗೊಂಡ ಆ ಹೆಣ್ಣಿಗಿಂತು ನುಡಿದನು ಕೃಪಾಳು ಗಾಂಧಿ
ಮಗಳೆ, ನೂಲು ತೆಗೆಯಮ್ಮ ಸರ್ವದಾ, ಒಳಿತು ನಿನಗೆ ಅದರಿಂದ

ದೀನ ದಲಿತರ ಪದಶೆಯ ನೆನೆನೆನೆದು ದುಃಖಿಗೊಂಡನಾತ
ಅವರ ಏಳಿಗೆಯ ಚಿಂತೆಯಲೆ ನಿದ್ರೆಯಿಲ್ಲದಿರುಳ ಕಳೆದು
ಎಲ್ಲ ಬಾಂಧವರಿಗುಡಲು ತಕ್ಕಷ್ಟು ಬಟ್ಟೆಯಿಲ್ಲದಿಹ ತನಕ
ಸ್ವಲ್ಪ ಬಟ್ಟೆಯೇ ಸಾಕು ನನಗೆಂದು ತಳೆದನಂದು ವ್ರತವ

ಅಂದಿನಿಂದ ಮೈಯೆಲ್ಲ ಬರಿದು ಮೊಳಕಾಲವರೆಗೆ ಪಂಚೆ
ತೊರೆದು ಭೋಗಗಳ ಗೆದ್ದನಿಂದ್ರಿಯವ-ಜನರ ನಗೆಯ ಲೆಕ್ಕಿಸದೆ

ಬಿಸಿಲು ಚಳಿಯೆನೆದೆ ಅದೇ ಬಟ್ಟೆಯಲಿ ಊರು ಊರು ಸುತ್ತಿ
ಗ್ರಾಮಜನರ ದುರ್ದೈವವನ್ನು ತಿಳಿಸಿದನು ಪೌರಜನಕೆ

ಧರ್ಮಹೀನರೆಮ್ಮಂದಲವರು ಅಸ್ಪೃಶ್ಯರೆಂದು ದೂಷಿತರು
ಹೆದರಿ ನಡುಗುತಿರುವವರನೂರಿಂದ ಹೊರಗೆ ಹಾಕಿರುವೆವು

ಆಫ್ರಿಕಾದಲ್ಲಿ ನಮ್ಮನೂ ಕೂಡ ಬೋಯರ್ ಆದಿ ಜನರು
ಅಂತ್ಯಜಾತಿಯವರಂತೆ ಗಣಿಸಲಾಶ್ಚರ್ಯವುಂಟೆ ಮತ್ತೆ?

ದೈದಾಣತಿಯೆ ನಮ್ಮ ಧರ್ಮಕ್ಕೆ ಕೊಟ್ಟ ಫಲವಿದಹುದು
ಅದರ ದೆಸೆಯಿಂದ ನಾವು ಧಿಕ್ಕೃತರು ಕೀಳುನಾಡಿನವರೆಂದು

ಮಾನುಷಾತ್ಮರವರಿಂಥ ದುರ್ದಶೆಯಲಿಹುದ ಬಯಸ ಸಲ್ಲ
ಅಂತ್ಯಜರ ಬಹಿಷ್ಕಾರ ನಿಜದಿ ಭಾರತದ ದುಷ್ಕಳಂಕ

ಶೂದ್ರ ವೈಶ್ಯ ಕ್ಷತ್ರಿಯರು ಬ್ರಾಹ್ಮಣರು ದೇವದೃಷ್ಟಿಯಲ್ಲಿ
ಸರ್ವಸಮರಿಂದು ಎಣಿಕೆಗೊಂಡಿಹರು, ವಿಕೃತಿ ನರನ ಕೃತ್ಯ

ಭೇದವೆಲ್ಲ ಮಾನವನು ಮಾಡಿದ್ದು, ಸಮದರ್ಶಿ ಬ್ರಹ್ಮನಲ್ಲ
ಜಾತಿ ಜೀವಿಕೆಗಳಲ್ಲ ಚಿಹ್ನೆ ಸಜ್ಜನಕೆ, ಶೀಲ ಚಿಹ್ನೆ

ಅಂತ್ಯಜರನು ಕಡೆಗಣಿಸಲಿಂತು ಅಧಿಕಾರವಾರಿಗೂ ಇಲ್ಲ
ಹೊಸುಗೆಲಸಕಿವರರ್ಹರೆನ್ನುವುದು ನಮಗೆ ಪಾಪಕೃತ್ಯ

ಅವರನುದ್ಧರಿಪ ಕಾರ್ಯವೇ ನಮ್ಮ ಪರಮ ಧರ್ಮವಿಂದು
ದೇಶದುದ್ಧಾರಸಿದ್ಧಿಗೂ ಶ್ರೇಷ್ಠ ಸಾಧನವಿದೊಂದೆ ಒಂದು

ನಮ್ಮ ಮೂರ್ಖತನ ತೊರೆದು ನಿರ್ಧಾರ ಮಾಡಿ ಹಗಲು ಇರುಳು
ಹೀನರಿವರ ಹಿತಸಾಧನೆಯ ಸಿದ್ಧಿಗೆಂದು ಯತ್ನಿಸೋಣ

ಪಾಠಶಾಲೆ ದೇಗುಲಕೆ ಸೇರಿಸದೆ ಇಟ್ಟಿವಿವರ ಹೊರಗೆ
ಇನ್ನು ಮುಂದೆ ನಿಶ್ಯಂಕೆಯಿಂದ ನಾವಿವರನೊಳಗೆ ಕರೆವ

ಇಂತು ನುಡಿದು ಮತ್ತೊರೆದು ತೊಡಗಿದನು ಕೃಷಿಕರವನತಿಯ
ಗತಿಯ ಎಲ್ಲೈ ಪೌರರೇ ನಿಮಗೆ ತಿಳಿಯದು ಕೃಷಿಕ ಪಡುವ ಪಾಡು

ಅವರ ಬಡತನವ ಕಳೆಯ ಸಾಧನ ನೂಲುತೆಗವೊಂದೆ
ಅದರಿಂದ ನೀವು ಆ ನೂಲುಕಾಯಕಕೆ ನೆವು ನೀಡಲೊಳಿತು

ಸಿರಿವಂತ ಬಡವರಿವರಿಬ್ಬರೆರಡು ಕೈಕೊಡಿ ಬದುಕಬೇಕು
ಅದರಿಂದ ಸ್ವಾರ್ಥವನು ತೊರೆದು ನಡೆಯಿರೈ ಧರ್ಮ ಮಾರ್ಗದಲಿ

ಸೌಜನ್ಯ : ಪಂಡಿತೆ ಕ್ಷಮಾ ರಾವ್ ಅವರಿಂದ ರಚಿತವಾದ 'ಸತ್ಯಾಗ್ರಹ ಗೀತಾ'
ಎಂಬ ಸಂಸ್ಕೃತ ಕೃತಿಯಿಂದ ಆಯ್ದ ಶ್ಲೋಕಗಳ ಕನ್ನಡಾನುವಾದ – 1969
ಪ್ರೊ. ಎಂ.ವಿ. ಸೀತಾರಾಮಯ್ಯ ಸಮಗ್ರ ಸಾಹಿತ್ಯ ಸಂಪುಟ–1ರ ಆಯ್ದ ಕವನ

## ಗಾಂಧಿ ಮಹಾತ್ಮ

– ಪ್ರೊ. ಎಂ.ವಿ. ಸೀತಾರಾಮಯ್ಯ

ಎಲ್ಲವನು ಬಲ್ಲವನು ಎಲ್ಲರಿಗೂ ಒಲಿವವನು
ಎಲ್ಲವನು ಗೆಲುವವನು ನೀನು ಕಾಣ
ಎಲ್ಲ ಸೊಬಗನು ಸವಿದು ಬಲ್ಲವನು ನೀ ಕಾಣ
ಎಲ್ಲರೂ ಸವಿವನಕ ತಣಿಯದವನು

ಎಲ್ಲ ಕಾಲದ ಜನರ ಎಲ್ಲ ದೇಶದ ಜನರ
ಎದೆಗಳಲಿ ಹರಿದಿರುವ ಒಲುಮೆ ಒಂದೆಂದು
ಎಲ್ಲ ಜನಗಳ ಮನದಿ ಮಲೆತಿರುವ ಭಾವಗಳು
ವೇದನೆಯ ರೀತಿಗಳು ಒಂದೆ ಎಂದು

ದೀನರನು ಆರ್ಥರನು ನಿರ್ಬಲರ ಬಳಗವನು
ಸೋದರಿಯರೆಂದುಂದು ಕಾಯುವವರು
ಎದೆಕರಗಿ ಮನಮರುಗಿ ಕರುಣೆಯಲಿ ಕರೆಯುತ್ತೆ
ಅವರೆದೆಯ ಬೇಗೆಗಳ ನಿಲಿಸುವವನು

ಜಗದ ಸೌಖ್ಯದ ಸಿರಿಯ ಸವಿಗನಸು ಕಾಣುತ್ತ
ಮಹಿಮನಿಸಿ ನಡೆಯಲಿ ನೇಯುವವರು
ಬದುಕಿ ಬಾಳುವ ಆಸೆ ಬಾಳ ಬೆಳಗುವ ಆಸೆ
ಮಹಿಮೆಯಲಿ ನಿಲುವಾಸೆ ಕಲಿಸುವವನು

ಎಲ್ಲವನು ಬಲ್ಲವನು ಎಲ್ಲರಿಗೂ ಒಲಿವವನು
ಎಲ್ಲವನು ಗೆಲುವವನು ನೀನು ಕಾಣ

# ಕರುಣಾಳು ಬಾ ಬೆಳಕೆ

ಇಂಗ್ಲೇಷ್ ಮೂಲ : ಕಾರ್ಡಿನಲ್ ನ್ಯೂಮನ್
ಕನ್ನಡಾನುವಾದ : ಬಿ.ಎಂ.ಶ್ರೀಕಂಠಯ್ಯ

ಕರುಣಾಳು ಬಾ ಬೆಳಕೆ ಮುಸುಕಿದೀ ಮಬ್ಬಿನಲಿ
ಕೈ ಹಿಡಿದು ನಡೆಸೆನ್ನನು
ಇರುಳು ಕತ್ತಲೆಯ ಗವಿ ಮನೆ ದೂರ ಕನಿಕರಿಸಿ
ಕೈ ಹಿಡಿದು ನಡೆಸೆನ್ನನು
ಹೇಳಿ ನನ್ನಡಿ ಇಡಿಸು ಬಲು ದೂರ ನೋಟವನು
ಕೇಳಿದೊಡನೆಯ ಸಾಕು ನನಗೊಂದು ಹೆಜ್ಜೆ
ಮುನ್ನ ಇಂತಿರದಾದೆ ನಿನ್ನ ಬೇಡದೆ ಹೋದೆ
ಕೈ ಹಿಡಿದು ನಡೆಸೆನ್ನನು
ನನ್ನ ದಾರಿಯ ನಾನೆ ನೋಡಿ ಹಿಡಿದೆನೋ ಇನ್ನು
ಕೈ ಹಿಡಿದು ನಡೆಸೆನ್ನನು
ಮಿರುಗು ಬಣ್ಣಕೆ ಬೆರೆತು ಭಯ ಮರೆತು ಕೊಬ್ಬಿದೆನು
ಮರೆದಾಯ್ತು ನೆನೆಯದಿರು ಹಿಂದಿನದೆಲ್ಲ
ಇಷ್ಟು ದಿನ ಸಲಹಿರುವೆ ಮೂರ್ಖನನು ಮುಂದೆಯೂ
ಕೈ ಹಿಡಿದು ನಡಸದಿಹೆಯಾ
ಕಷ್ಟದಡವಿಯ ಕಳೆದು ಬೆಟ್ಟ ಹೊಳೆಗಳ ಹಾಯ್ದು
ಇರುಳನ್ನು ನೂಕದಿಹೆಯಾ
ಬೆಳಗಾಗ ಹೊಳೆಯದೆ ಹಿಂದೊಮ್ಮೆ ನಾನೊಲಿದು
ಈ ನಡುವೆ ಕಳಕೊಂಡ ದಿವ್ಯಮುಖ ನಗುತ
ನನ್ನ ದಾರಿಯ ನಾನೆ ನೋಡಿ ಕೊಳದಿಹೆನು ಇನ್ನು
ಕೈ ಹಿಡಿದು ನಡೆಸೆನ್ನನು

ಸೌಜನ್ಯ : ಗಾಂಧಿ ಅವರು ನಿತ್ಯ ಮಾಡುತ್ತಲಿದ್ದ "ಆಶ್ರಮಪ್ರಾರ್ಥನೆ" ಪುಸ್ತಕದಿಂದ ತೆಗೆದುಕೊಳ್ಳಲಾಗಿದೆ. ಸಂಗ್ರಹಕಾರರು : ನರಸಿಂಹ ದಾಬಡೆ ಅವರು

# ಗಾಂಧಿ

– ಡಾ. ಎಂ. ಗೋಪಾಲ ಕೃಷ್ಣ ಅಡಿಗ

ನಿನ್ನನರಿತು ನೋಡಲು
ನಿನ್ನ ಕುರಿತು ಹಾಡಲು
ಕೋಟಿ ಕೋಟಿ ಜನದ ಮನದ
ವ್ಯಥೆಯನೆಲ್ಲ ತೋಡಲು
ಬಹು ವಿಶಾಲ ಆಲದ ಒಲು
ಮೇಲೆ ಬಿಸಿಲು ಬೇಗೆಗೆ

ಒಡ್ಡಿ ನಿನ್ನ ಮೈಯ ನಿನ್ನ
ದಟ್ಟ ತಂಪು ನೆಳಲಿಗೆ
ಕರೆದೆಯೆಲ್ಲ ಮನುಕುಲವನು
ಕುಲಕುಲಗಳ ಮೇಳಕೆ

ತಂದೆ ನೀನು ತಂದೆಯೊಂದು
ಶೃತಿಯ ಶುದ್ಧಿಯ ಸೊಬಗನು
ಸತ್ತ ಜನವ ಎತ್ತಿದಂತ
ಸಂಜೀವನ ಶಕ್ತಿ ನೀನು

ಉತ್ತು ಮನವನಲ್ಲಿ ಒಲವ
ಭಿತ್ತಿದಮರ ದೀಪ್ತಿ ನೀನು
ಕಗ್ಗತ್ತಲ ಪಾಳಿ ಎದುರು
ಬೆಳಕಿನಾ ಬಾವುಟವನು
ಏರಿಸಿ ಹಾರಿಸಿದ ವೀರ
ಧೀರ ದೇವ ದೀಪನು

ಏಳುವವರೆ ಏಳಿ ಎದ್ದು
ಇಡಿಯಿರವನ ಪಥವನು
ಬಾಳುವವರೆ ಇದ್ದು ಬಾಳಿ
ಅವನ ವೀರ ವೃತವನು

ಮುಟ್ಟುವವರೆ ಮುಟ್ಟಿ ಅವನು
ತೋರಿದಂತೆ ಗುರಿಯನು
ಪಡೆಯುವವರೆ ಪಡೆಯಿರವನ
ಆತ್ಮದಮರ ಸಿರಿಯನು

ಸೌಜನ್ಯ : ಡಾ.ಎಂ. ಗೋಪಾಲಕೃಷ್ಣ ಅಡಿಗರ
ಕವನ ಸಂಕಲದಿಂದ ತೆಗೆದುಕೊಳ್ಳಲಾಗಿದೆ

---

ಎಲ್ಲರ ಮನಸು ಗೆದ್ದಿರುವೆ ಗಾಂಧಿ
ಎಲ್ಲರೂ ನಿನ್ನ ಹೆಸರನ್ನೇ ಜಪ್ಪರಿಸುತ್ತಿದ್ದಾರೆ ಗಾಂಧಿ
ನಾಲ್ಕೂ ಕಡೆ ನಿನ್ನ ನಂಬಿಕೆಯ ಹೂಗಳು ಅರಳಿವೆ
ಈ ಹೂಗಳು ಎಂದೂ ಬಾಡುವುದಿಲ್ಲ ಗಾಂಧಿ

ರಾಜ್ಯ ಅಮೃತ್‌ಸರಕ್ಕೆ ಗಂಡಾಂತರ ಬಂದಿದೆ
ಅದರ ಮೇಲೆ ನಿಮಗೆ ಅನುಕಂಪವಿದೆ ಗಾಂಧಿ
ಅದರ ವೈಭವ ಮರಳುತ್ತದೆ ಎಂದು ನಂಬಿದ್ದಾರೆ
ಅವರಿಗೆ ನೀವು ಅವರ ನಾಯಕರಾದರೆ ಗಾಂಧಿ
ನಿಮ್ಮ ಕೃಪೆಯಿಂದ ವಿಶೇಷ ಮಾತಾಗಲಿ
ಬಂಧಿಯಾಗಿರುವವರೆಲ್ಲ ಬಿಡುಗಡೆಯಾಗಲಿ ಗಾಂಧಿ

– ಸೌದತ್ ಬಾನು ಕಿಚಲು

(ಗಾಂಧೀಜಿ ಪಂಜಾಬಿಗೆ ಬಂದಿದ್ದಾಗ ಸೌದತ್ ಬಾನು ಕಿಚಲು ಅವರನ್ನು ಭೇಟಿ ಮಾಡಿದ್ದರು. ಆಗ ಅವರಿಗೆ ಈ ಕವಿತೆ ಬರೆದುಕೊಟ್ಟರು – ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಮುಸ್ಲಿಂ ಮಹಿಳೆಯರ ಕೊಡುಗೆ ಪುಸ್ತಕದಿಂದ – ಪುಟ 112)

# ಗೆದ್ದೆ ಗೆಲ್ಲುವೆವು

– ಎನ್. ಕೃಷ್ಣಸ್ವಾಮಿ

ಗೆದ್ದೇ ಗೆಲ್ಲುವೆವು ನಾವು । ಗೆದ್ದೇ ಗೆಲ್ಲುವೆವು ನಾವು
ಗೆದ್ದೆ ಗೆಲ್ಲುವೆವು ಎಂದೋ ಒಂದು ದಿನ
ನನ್ನ ಹೃದಯದ ಆಳದಲಿ ದೃಢದಲಿ ನಂಬಿಹೆನು

ಒಟ್ಟಿಗೆ ನಲಿಯುವೆವು ನಾವು । ಒಟ್ಟಿಗೆ ನಲಿಯುವೆವು ನಾವು
ಒಟ್ಟಿಗೆ ನಲಿಯುವೆವು ಎಂದೋ ಒಂದು ದಿನ

ಶಾಂತಿಯಲಿರುವೆವು ನಾವು । ಶಾಂತಿಯಲಿರುವೆವು ನಾವು
ಶಾಂತಿಯಲಿರುವೆವು ನಾವು ಎಂದೋ ಒಂದು ದಿನ

ಸತ್ಯದಿ ನಡೆಯುವೆವು । ಸತ್ಯದಿ ನಡೆಯುವೆವು
ಸತ್ಯವು ಬಿಡುಗಡೆ ಮಾಡುವುದು ಎಂದೋ ಒಂದು ದಿನ

ಭಯವೇ ಇಲ್ಲೆಮಗೆ ಇಂದು । ಭಯವೇ ಇಲ್ಲೆಮಗೆ ಇಂದು
ಭಯವೇ ಇಲ್ಲೆಮಗೆ ಇಂದೇ ಈ ದಿನವೇ

ಸೌಜನ್ಯ : ಸರ್ವೋದಯ ಪದ್ಯಾವಳಿಯಿಂದ ಮತ್ತು ಭಜನಾವಳಿ (ಗಾಂಧಿ ಭವನದ ಪ್ರಕಟಣೆ) ಆಯ್ದ ಕವನ : ವಿ ಶೆಲ್ ಓವರ್ ಕಂ ಎಂಬ ಆಂಗ್ಲ ಭಾಷೆಯ ಕವನ ನೀಗ್ರೋ ಸ್ಪಿರಿಚುಯಲ್ ಗೀತೆಯ ಕನ್ನಡ ಅನುವಾದ

---

ಸತ್ಯ ಸುಳ್ಳನ್ನು ಕೊಲ್ಲುತ್ತದೆ. ಪ್ರೀತಿ ಕೋಪವನ್ನು ಗೆಲ್ಲುತ್ತದೆ.
ತನ್ನನ್ನೇ ಕಷ್ಟಕ್ಕೆ ಈಡುಮಾಡಿಕೊಳ್ಳುವುದು ಕೆಡುಕನ್ನು
ದೂರಮಾಡುತ್ತದೆ.

– **ಮಹಾತ್ಮ ಗಾಂಧಿ**

# ಇದು ಗಾಂಧೀ

– ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ

ನೀನೊಬ್ಬ ವಿಚಿತ್ರ ಮನುಷ್ಯ,
ಎಲ್ಲವನ್ನೂ ಅಂಗಡಿ ತೆರೆದು
ಬೆಲೆ ಕಟ್ಟ ಬರದ ಈ ಮಂದಿಯ
ಮುಂದೆ ಹರಾಜಿಗಿಟ್ಟೆ

ಸಂಜೆ ಪಾರ್ಕಿನಲ್ಲಿ ನಿನ್ನ ವಿಗ್ರಹದ ಮೇಲೆ
ಹಕ್ಕಿಗಳು ಗಲೀಜು ಮಾಡಿರುವಲ್ಲಿ
ಜನ ಬರುತ್ತಾರೆ, ಹೋಗುತ್ತಾರೆ
ನಿನಗೆ ಪ್ರಿಯವಾದ ಕಡಲೇಕಾಯಿ ತಿಂದು
ಸಿಪ್ಪೆಯನ್ನಲ್ಲೇ ನಿನ್ನ ಪಾದಕ್ಕೆ
ಸುರಿದು ನಡೆಯುತ್ತಾರೆ
ವಾಕಿಂಗ್ ಬಂದ ತರುಣ ದಂಪತಿಗಳು
'ಪಾಪ ಯಾರದೋ ಮುದುಕನದು ಈ ಪ್ರತಿಮೆ'
ಎಂದುಕೊಳ್ಳುತ್ತಾರೆ.

ಅಜ್ಜ ಹೇಳುತ್ತಾರೆ ಮೊಮ್ಮಗನಿಗೆ 'ಇದು ಗಾಂಧೀ'
'ಗಾಂಧೀ ಹಾಗಂದರೇನಜ್ಜ' ಅನ್ನುತ್ತದೆ ಮಗು
ಅಜ್ಜ ಹೇಳುತ್ತಾನೆ, 'ಅವನೊಬ್ಬ ಹುಚ್ಚ....
ಬ್ರಿಟಿಷರಿದ್ದಾಗಲೇ ಚೆನ್ನಾಗಿತ್ತು ಎಂದು ಗೊಣಗುತ್ತ
ತನ್ನ ಕಳೆದ ಕಾಲದ ಸಾಹೇಬಗಿರಿಯ
ನೆನಪು ಕುಟ್ಟುತ್ತಾ ಮುಂದೆ ಹೋಗುತ್ತಾನೆ

# ಗಾಂಧಿ ಶರದ್ಗೀತ

– ನಾಡೋಜ ಚನ್ನವೀರ ಕಣವಿ

ಮಣ್ಣ ಹಣತೆಯಲಿ ಬೆಳಕಿನ ಕುಡಿಗಳೂ
ಮಿಡಿದಿವೆ ಬಾನಿಗೆ ಕೈ ಮುಗಿದು
ಲಕ್ಷ ಕೋಟಿ ನಕ್ಷತ್ರದ ಗುಡಿಯಲಿ
ಗಾಂಧಿ ಚಿತ್ತವಿದೆ ಕಣ್ತೆರೆದು
ತಿಳಿ ಬೆಳದಿಂಗಳ ಶಾಲನು ಹೊದಿಸಿದೆ
ಗಾಂಧೀ ಹುಣ್ಣಿಮೆ ಜನಪದಕೆ
ಸೀಗೆ–ಗೌರಿ, ಸೇವಂತಿಗೆ ದಂಡೆಯು
ಆರತಿ ಬೆಳಗಿವೆ ಪ್ರತಿಪದಕೆ

---

ಲಂಡನ್ ಮಿಶನರಿ ಸೊಸೈಟಿಯ ರೆವರೆಂಡ್ ಎಸ್.ಜೆ. ಹಿಲ್, ಬಂಗಾಳಿಯಲ್ಲಿ ವ್ಯಾಪಕವಾಗಿ ಹಾಡಲಾಗುತ್ತಿದ್ದ ನಾಡ ಪದ.

ಜಮೀನೇರ್ ಶತ್ರು ನೀಲ್
ಕೊರ್ಮೆರ್ ಶತ್ರು ಧೀಲ್
ತೊಮೆನಿ ಜಾತೆರ್ ತ್ರು ಪಾದ್ರೆ ಹಿಲ್

(ಕನ್ನಡಾನುವಾದ : ಜಮೀನಿನ ಶತ್ರು ನೀಲಿ ಸಸ್ಯ
ಕಾರ್ಮಿಕರ ಶತ್ರು ಸೋಮಾರಿತನ;
ಜಾತಿಯ ಶತ್ರು ಪಾದ್ರಿ ಹಿಲ್)

– ಡಿ.ಜಿ. ತೆಂಡುಲ್ಕರ್ ಅವರ 'ಚಂಪಾರಣ್‌ದಲ್ಲಿ ಗಾಂಧಿ' ಪುಸ್ತಕದಿಂದ

# ಗಾಂಧಿ

– ನಾಡೋಜ ಚನ್ನವೀರ ಕಣವಿ

ನುಡಿಗೆ ನುಡಿಗೆ ಅಡಿಗಡಿಗೆ
ಗಾಂಧಿ ಹೆಸರೆದ್ದು ನಿಲ್ಲುತಿಹುದು
ವಿಶ್ವಬಂಧು ವಿಶ್ವಾತ್ಮನೆಂದು
ಜನ ಕೋಟಿ ನಮಿಸುತಿಹುದು
ಲೋಕದೀಚೆ ಮುಗಿಲಂಚಿನಾಚೆ
ಅವನಾತ್ಮ ತುಳುಕುತಿಹುದು
ನೇಸರುದಿಸಿ ಹೂಗಾಳಿ ಸೂಸಿ
ಸಂದೇಶ ಬೀರುತಿಹವು

ಜಾತಿ ಕುಲಕೆ ದುರ್ನೀತಿ ಬಲಕೆ ನೆಲೆಯಿಲ್ಲವೆಂದು ಸಾರಿ
ದೇವಸುತನು ನಮ್ಮಾತ್ಮಕವನು ತನ್ನಂತರಂಗ ತೋರಿ

ದೀನ ದಲಿತರುದ್ಧರಣ ಹರಣ ಮುಡಿಪಿಟ್ಟು ದೇಹ ಕರಗಿ
ಯೋಗಿ ತ್ಯಾಗಿ ಮನಬುದ್ಧಿ ಮಾಗಿ ಪದಯುಗ್ಮಕೆರಗಿ ಬಾಗಿ

ಕಣ್ಣೀರ ಕಣವನೊಡೆದೊಡೆದು ನೋಡು
ಅಲ್ಲಲ್ಲಿ ಅವನ ನಿಲುವು
ನಿಟ್ಟುಸಿರ ತೆರೆಯ ಮರೆಯಲ್ಲಿ ನಿಂತ
ಆ ಮೊಗದ ಬಲವೆ ಬಲವು
ಜಡದ ತಿರೆಯ ಹರ್ಷಾಂತ ಝರಿಯ
ನಾದದಲಿ ಅವನ ಗೆಲುವು
ನಮ್ಮ ಪಾಡು ಬಿಡುಗಡೆಯ ಹಾಡು
ಅವನಾತ್ಮ ತಳೆದ ಚೆಲುವು

# ಸ್ವಾತಂತ್ರ್ಯದ ಹಿಗ್ಗು – ಕುಗ್ಗು

– ಜೋಳದ ರಾಶಿ ದೊಡ್ಡನಗೌಡ

ಸ್ವಾತಂತ್ರ್ಯ ಸ್ವಾತಂತ್ರ್ಯ ಭರತವು ಸ್ವಾತಂತ್ರ್ಯ
ಸ್ವರ್ಣಾಕ್ಷರವಿ ಮೆರವಹಿಂಸೆಯಾ ಸ್ವತಂತ್ರ್ಯ
ಎಣೆಯಿಲ್ಲ ದತ್ಯುಗ್ರ ಸಾಮ್ರಾಜ್ಯ ಸ್ವಾರ್ಥಿಗಳ
ಅಣುಬಾಂಬಿನಾ ಯುಗವನಾಚಿಸುವ ಸ್ವಾತಂತ್ರ್ಯ
ದೇಶಗಳು ದ್ವೀಪಗಳು ನಾಡುಗಳು ಬೀಡುಗಳು
ಧೀಯುತರು ಧಾರ್ಮಿಕರು ಹಿಂಸಕರು ತಾಂತ್ರಿಕರು
"ಓಹೋ ಭಾರತ ಸೌಮ್ಯ ಸ್ವಾತಂತ್ರ್ಯ ವೀರರೇ ಬಾಪು" ಎಂದು
ತಲೆದೂಗಿ ಮೆಚ್ಚಿಸಿದ ಸ್ವಾತಂತ್ರ್ಯ
ಒಂದು ಕಡೆ ದ್ವೇಷಗಳು ಕುತ್ಸಿತಕುತಂತ್ರಗಳು
ಒಂದು ಕಡೆ ಪರರಾಜ್ಯ ನುಂಗುವಾ ನೀತಿಗಳು
ಮತ್ತೊಂದು ಕಡೆ ಕ್ರೂರ ಬಾಂಬಿಡುವ ಯುದ್ಧಗಳು
ಮಗದೊಂದುಕಡೆ ಶಾಂತ ಶಾಂತೆಂಬ ಕೂಗುಗಳು
ಈ ತಂತ್ರವೀ ನೀತಿ ಈ ಯುದ್ಧ ಮಧ್ಯದಲ್ಲಿ
ನೂರಾರು ವರ್ಷಗಳ ದಾಸ್ಯಮಂ ಕಿತ್ತೊಗೆದು
ಇಂದಾವ ಧರ್ಮದಲ್ಲಿ ಸತ್ಯದಲ್ಲಿ ಶಾಂತಿಯಲಿ
'ಶಸ್ತ್ರಮಂ ಹಿರಿಯದಲೆ ಸ್ವರಾಜ್ಯ ಗಳಿಸಿದೆವು
ಇದು ಭಾಗ್ಯ ಸೌಭಾಗ್ಯವಿದು ಪುಣ್ಯ ಜನಮಾನ್ಯವಿದು
ನಮ್ಮ ಭರತದ ವರಕೀರ್ತಿ ಮುಕುಟ...
ಆದರೇನಾದರೇನೆಲೆ ಭಾರತೀಯರೆ!
ಆ ಭಾಗ್ಯವಾ ಪುಣ್ಯವಾ ಕೀರ್ತಿಕುಸುಮಗಳು

ಒಂದೇ ದಿನ.. ಅಲ್ಲಲ್ಲ ಒಂದೇ ಕ್ಷಣದಲ್ಲಿ ಬಾಡಿ ಬತ್ತಿದವು
ಬಾಪುವಿನ ಕಗ್ಗೊಲೆಯ ಬಿಸಿಗೆ ಭಾರತದ ಬನಸಿರಿಯ
ಸತ್ಯಸುಂದರ ಲತೆಯೊಳೊಯೊಂದರಳಿತ್ತ ಹಿಂಸೆಯಾ ಕುಸುಮ
ಅದರ ಗುಣವರಿಯದಾ ಜಾತಿಯ ಕೋತಿಗಳು
ನಿರ್ದಯದಿ ನಿಷ್ಠುರದಿ ಕಿತ್ತೆಸೆದವಾಹ
ಪ್ರಕೃತಿ ಜ್ವಾಲಾಮಯ ಕೃತಿಯ ತಾಳಲುಬಹುದೆ
ಸತ್ಯಾತ್ಮ ಹಿಂಸಾತ್ಮ ಧರ್ಮಾತ್ಮ ಸಮಹಾತ್ಮ
ಗಾಂಧಿ ಜನಿಸಿದ ಭಾರತವು ಎಂದು ಹಿಗ್ಗುವುದೆ?
ಪುಣ್ಯಭಾರತ ಭುವಿಯ ಪುಣ್ಯವಂ ಕಂಗೆಡಿಸಿ ಕೊಲೆಗೈದು
ಗಳಿಸುವಾ ಕೈಲಾಸವದು ಬೇಡ
ಕಲ್ಗಳಂ ಕರಗಿಸುವ ಈ ಘಟನೆಯಿಂದಲಿ
ಕಲಿತುದೇನೆಲೆ ನಾವು? ಮತ್ತೆ ಜಾತೀಯತೆಯೆ? ಅಯ್ಯೋ?
ನೋಡಲೇ ನೋಡ ಕಳ್ಳಪೇಟೆಯನೊಡ್ಡಿ
ಬಡವರೊಡಲಲಿ ಲಾಸ್ಯ ನೃತ್ಯಮಂ ಗೈಯುತಿದೆ
ಆತ್ಮ ಪ್ರಶಂಸೆಯಲಿ ಡಿಳ್ಳಿಯಂ ಟೀಕಿಸುವ
ಮತ್ಸರದ ಮೋಹಿನಿಯ ಅಲೆದಾಟವದು ನೋಡ
ದಾರಿದ್ರ ಸಂತಾಪ ದುಃಖಬರಗಾಲಗಳು
ದೇಶಶಕ್ತಿಯನಳಿಪ ದಾರುಣ ವಿಷಾಹಿಗಳು
ಸ್ವಾತಂತ್ರದಮೃತದಲ್ಲಿ ಸಿಡಿದೆದ್ದ ಘನವಿಷವ
ಸೇವಿಸುವ ಮಹದೇವ ಗಾಂಧಿತಾತನಿಂದಿಲ್ಲ
ಬನ್ನಿರೈ ಭಾರತದ ಮಾದೇವಿ ಮಕ್ಕಳೆ
ಒಬ್ಬೊಬ್ಬರೊಂದಿಷ್ಟು ನಾವೆಲ್ಲರುಂಬುವ
ಸ್ವಾತಂತ್ರ್ಯ ದಿನವಿಂದು ಶಾಂತಿಯಿಂದಾಚರಿಸಿ
ಮೋದವೋ? ಖೇದವೋ? ರಾಮೇಶತಾಬಲ್ಲ

ಸೌಜನ್ಯ : ಅಮರ ಬಾಪು ಚಿಂತನ ಮಾಸಿಕ – ಆಗಸ್ಟ್ – ಸೆಪ್ಟಂಬರ್ 2014

# ನಾಡಿನಜ್ಜಯ

– ಸಿಂ.ಪಿ. ಲಿಂಗಣ್ಣ

ನೋಡಿರಿವನು ನಾಡಿನಜ್ಜನು ನೀವೆಲ್ಲರಿಲ್ಲಿ
ನೋಡಿರಿವನು ನಾಡಿನಜ್ಜನು

ಹಣ್ಣು ಹಣ್ಣು ಮುದುಕನಿವನು
ಹಣ್ಣಿನಂತೆ ಸವಿನುಡಿವನು
ಹೊನ್ನಿನಂತೆ ಹೊಳೆಯುತಿಹನು
ಚಿಣ್ಣರನ್ನು ನಲಿಸುತಿಹನು ನೋಡಿರಿವನು

ಕೋಲು ಕೈಯಲೊಂದು ಹಿಡಿವನು ಈ ನಾಡಿಗಾಗಿ
ಬಾಲವೀರನಂತೆ ನಿಲುವನು
ಕನ್ನಡಕವ ಕಣ್ಣಿಗಿರಿಸಿ
ತನ್ನ ಜನರು ಯಾರು–ಅರಸಿ
ಮುನ್ನ ಅವರ ಬಳಿಗೆ ಕರೆಸಿ
ಧನ್ಯರಾಗಿ ಮಾಡುವವನು ನೋಡಿರಿವನು

ಕೊರಳಲಿ ಗಡಿಯಾರ ಧರಿಸುತ ಆಯುಷ್ಯವನ್ನು
ಮರಳಿ ನೂರು ವರುಷ ಪಡೆಯುತ
ತಲೆಯ ನುಣುಪು ಹೊಳೆಯುತಿಹುದು
ಬೆಳಕುತಂದು ಸುರಿಯುತಿಹುದು
ಎಳೆಯ ಕೂಸಿನಂತೆ ಬಾಯಿ
ಸುಳುಹು ನಗೆಯ ಸೂಸುತಿರುವದು ನೋಡಿರಿವನು

## ಶಾಣ್ಯ ಗಾಂಧಿ

– ಸಿಂ.ಪಿ. ಲಿಂಗಣ್ಣ

ಎಂಥಾ ಶಾಣ್ಯಾ ಮಹಾತ್ಮ ಗಾಂಧಿ
ಹಿಂದುಸ್ತಾನಕವನೆ ತಂದಿ
ಮಾಡಂತೇಹೇಳ್ಯಾನ ಕರಬಂಧಿ
ಖಾದಿ ತೊಡೆಂದ ಕಾಯ್ದೆ ಭಂಗ ಮಾಡೆಂದ

ಹಿಂದುಸ್ತಾನ ಸ್ವಾತಂತ್ರ್ಯಕೆ ಗಾಂಧಿ ಹೇಳ್ಯಾನ
ಒಂದೇ ಮಂತ್ರ ನೂಲಂತ ಹೇಳ್ಯಾನ ನಮ್ಮ ಜಂತ್ರ

ರಾಟಿಯ ನೂಲಿಂದ ರಾಷ್ಟ್ರವ ಉಳಿಸಂದಾ
ಸೋದರ ಕಾಟವ ಸಾಕೆಂದಾ
ಕೂಡಿಸ್ಯಾನ ವಾನರದಂಡ ಹಿಡಿಸ್ಯಾನ ಕೈಲೇಝುಂಡಾ
ಗದಗಮಿಸಿ ಬಿಟ್ಟಾನ ಇಂಗ್ಲಂಡಾ

ಸಿಂದಿಸೆರಿ ಕುಡಿಬೇಡಿ, ಗಾಂಜಿ ಅಫು ಸೇದಬೇಡಿ
ಕುಡಿಬೇಡೆಂದು ಹೇಳ್ಯಾನ ಚಹಾಕಾಫಿ

ಉಲುವು ರಕ್ತ ಕೂಡಿದಂಥ ಕುಲಗೇಡಿ ಸಕ್ಕರಿ
ತಿನಬ್ಯಾಡಂದಾನ ಮಹಾತ್ಮ ಗಾಂಧಿ
ಸರ್ಕಾರ ಚಾಕರ ನೌಕರಿ ಬೇಡ
ತಿರಕೊಂಡು ತಿನ್ನೊದು ಬೇಕೆಂದ

ಹಿಂದು ಮುಸಲ್ಮಾನರು ಕೂಡಿ ವಂದೇಮಾತರಂ ಎಂದು
ಮಹಾತ್ಮ ಗಾಂಧಿ ಮಹಾರಾಜಕಿ ಜಯ ಜಯ ಎಂದು

ಎಂಥಾ ಶಾಣ್ಯಾ ಮಹಾತ್ಮ ಗಾಂಧಿ
ಹಿಂದುಸ್ತಾನಕವನೆ ತಂದಿ

# ಓ ಅದ್ಭುತ ಸನ್ಯಾಸಿ !

– ಡಾ. ಪಿ.ಎಸ್. ರಾಮಾನುಜಂ

ಓ ಅದ್ಭುತ ಸನ್ಯಾಸಿ ! ಸತ್ಯಾಗ್ರಹ ಸಮರ ವಿನ್ಯಾಸಿ !
ದೇಹದ ಅರಿಗಳನೋಡಿಸಿದುದಲ್ಲದೆ
ದೇಶದ ಅರಿಗಳನೂ ಹೊರಗಟ್ಟಿದ
ಓ ಯುಗಪುರುಷ ಮಹಾತ್ಮ ! ನೀನೇ ಭಾರತದ ಆತ್ಮ.

ನೀನು ಜನಮನೋಮಂಥನದ ನವನೀತ
ದಾಸ್ಯದೊಳಗಿದ್ದ ಜನಜಲಧಿಯಿಂದೆದ್ದ
ಇತಿಹಾಸದೊಂದಪೂರ್ವ ದಿವ್ಯಾಮೃತ

ನೀನು ಸೃಷ್ಟಿಸಿದೆ ಚರಿತ್ರೆಯನು, ಅಪೂರ್ವ ರೀತಿಯಲ್ಲಿ
ಸತ್ಯಾಸತ್ಯದ ಸಮರ ನೀತಿಯಲ್ಲಿ
ಉಪ್ಪೇ ನಿನ್ನ ಶಸ್ತ್ರಾಸ್ತ್ರ, ವೈರಿಗಳ ಗುಂಡಿಗೆ ಪ್ರತ್ಯಸ್ತ್ರ
ಕರಾಳ ಶಾಸನಕೆ ಸತ್ಯ ನಿಷ್ಠೆಯೇ ನಿನ್ನ ಪ್ರತಿಬಲ
ರಾಷ್ಟ್ರಪ್ರೇಮಿ ಹೃದಯಗಳ ಮಹಾಪೂರವೇ
ನಿನ್ನ ಚತುರಂಗಬಲ.

ನಿನ್ನ ಸೇವಾಜೀರ್ಣ ದೇಹದೊಳಗಿನ ಅಸ್ಥಿಗಳು
ದಧೀಚಿಯ ಎಲುಬುಗಳಂತೆ, ಜನಶಕ್ತಿಯ
ಇಂದ್ರನ ಕೈಯೊಳಗೆ ವಜ್ರಾಯುಧವಾದುದೊಂದು
ಈ ಯುಗದ ಮಹಾಶ್ಚರ್ಯ.
ನಿನ್ನ ಕೈಯೊಳಗಿನ ಊರುಗೋಲು,
ಸತ್ಯ ಧರ್ಮ ನಿಷ್ಕಾಮಕರ್ಮಗಳ ಕಾಲು
ಸುಟ್ಟುಹಾಕಲಿಲ್ಲ ನೀನು ವೈರಿಗಳ

ಆದರೆ ಭಸ್ಮಮಾಡಿದೆಯಲ್ಲ. ಅವರನೆಲ್ಲ!
ನೀನವರನಟ್ಟಿಸಿಕೊಂಡು ಹೋಗಲಿಲ್ಲ.
ಆದರೆ ಅಟ್ಟಿದೆ ನಾಡಗಡಿಯ ಹೊರಗೆ ಅವರನೆಲ್ಲ
ಅಣುವಾಗಿ ನಿನ್ನೆಣಿಸಿಕೊಂಡವನು, ವಿಶ್ವವನೆ ವ್ಯಾಪಿಸಿದೆ
ಮಹತ್ತಾಗಿ ಮಹಾತ್ಮನಾದೆ
ಮತ್ತೆ ತ್ರಿವಿಕ್ರಮ ವಾಮನನಾದೆ, ಆದರೆ ಬಲಿಯಾದೆ
ನಿರ್ದಯಿಯೊಬ್ಬನ ಗುಂಡಿಗೆ.

ಹಿಂಸೆಗೆದುರು ಅಹಿಂಸೆಯನಿಟ್ಟೆ
ಜಗವ ಜಯಿಸಿದೆ ನಿಶ್ಶಸ್ತ್ರನಾಗಿ
ಎತ್ತಿ ನಿಲ್ಲಿಸಿದೆ ನಾಡ ಒಂದೇ ವ್ಯಕ್ತಿಯಂತೆ ಸಮಷ್ಟಿಯ ಶಕ್ತಿಯಂತೆ

ಕೋಟಿಕೋಟಿ ಜನರ ವಿಮುಕ್ತಿಗೊಳಿಸಿಯೆ
ನೀ ಮುಕ್ತಿ ಪಡೆದೆ

ಓ ಅದ್ಭುತ ಸನ್ಯಾಸಿ ! ಸತ್ಯಾಗ್ರಹ ಸಮರ ವಿನ್ಯಾಸಿ !
ದೇಹದ ಅರಿಗಳನೋಡಿಸಿದುದಲ್ಲದೆ
ದೇಶದ ಅರಿಗಳಿಗೂ ಹೊರಗಟ್ಟಿದ
ಓ ಯುಗಪುರುಷ ಮಹಾತ್ಮ ! ನೀನೇ ಭಾರತದ ಆತ್ಮ.

---

ಮಹಮ್ಮದ್ ಅಲಿಯ ತಾಯಿ ಹೇಳಿದಳು, ಮಗ ಕೊಡು ನಿನ್ನ ಪ್ರಾಣ
ಖಿಲಾಫತ್‌ಗಾಗಿ ಎರಡೆರಡು ವರ್ಷಕ್ಕೆ ಹೊರಟುಹೋಗುವೆ ನೀನು. ಈ ವೃದ್ಧೆ
ತಾಯಿಯ ನೆನೆದು ದುಃಖಿಸಬೇಡ, ಸ್ತುತಿ ಮಾಡುತ ಕುಣಿಕೆ ಹಾಕಿ ಗಲ್ಲಿಗೇರಿಬಿಡು
ಮಗು! ಕೊಡು ನಿನ್ನ ಪ್ರಾಣ ಖಿಲಾಫತ್‌ಗಾಗಿ

– ಲತೀಫ್ ಹುಸೇನ್, ಅದೀಬ್, ಆವಾಜ್ ದೆಹಲಿ

ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಮುಸ್ಲಿಂ ಮಹಿಳೆಯರ ಕೊಡುಗೆ
ಪುಸ್ತಕದಿಂದ – ಪುಟ 72)

# ಗಾಂಧಿ ತಾತ ಇನ್ನೂ ಬಾರದೆ ಎಲ್ಲಿರುವೆ

– ವೈದೇಹಿ

ತಾತಾ ತಾತ ಆಗಸದಲ್ಲೇ ಏಕೆ ನೀನು ನಿಂತೆ?
ಬರುತೇನೆಂದು ಹೋದೆಯಂತೆ! ಬರಲಿಲ್ಲಾ ಮತ್ತೆ?
ಇಂದಾದರೂ ಬಾ ಬಂದರೆ ನಿನಗೆ ಕೊಡುವೆನು ಹೊಸ ಗಂಟೆ
ಕುಳಿತಿಹೆ ಚುಪು ಚುಪ್ ನಿನ್ನನೆ ಕಾಯುತ ಮಾಡದೆ ಏನೂ ತಂಟೆ
ಬರೋಣವೆನಿಸಿದೆ, ಬರೋದು ಹೇಗೆ ಗೊತ್ತೇ, ಆಗಸ ದೂರ
ಬಸ್ಸೂ ರೈಲೂ ಕಾರುಗಳಿಲ್ಲ ವಿಮಾನ ತಲುಪೋದಿಲ್ಲ
ಬರುತೇನೆಂದರೆ ಬರುವುದು ಹೇಗೆ ಹೇಳೇ ಪುಟ್ಟಿ ಪುಟಾಣೀ
ನನಗೂ ತರಲಿದೆ ನಿನೆಗಾಗೆಂದೇ ಇಲ್ಲಿ ಬೆಳೆವ ಬಟಾಣಿ
ತಾತಾ ತಾತಾ ಒಂದು ಉಪಾಯ ಮುಗಿಲ ಬಾಗಿಲಾ ತೆರೆದು
ಕರೆ ನನ್ನನ್ನು ಬಂದೇ ಎನ್ನು ಬರುವೆನು ನಾನೂ ಹೊರಗೆ
ಆಗಸದಿಂದ ನಮ್ಮಂಗಳಕ್ಕೆ ಕೋಲನ್ನೂರಿ ಹೈ ಹೈ ಹೈ
ಅಜ್ಜನ ಕೋಲಿದು ನನ್ನಯ ಕುದುರೆ ಹಾಡುತ ಬರುವೆನು ಬಳಿಗೆ
ನೀ ಬಟಾಣಿಯ ಕೊಡು ನಾ ಗಡಿಯಾರವನು
ಬಾನ ದಾರಿಯಲಿ ಗುಡುಗುಡು ಗುಮ್ಮಟ ಹೇಳುತ ಸಾವಿರ ಕತೆಗಳನು
ಇಬ್ಬರೂ ಗಜ್ಜುಗ ಆಡೋಣ ಆರಿಸಿ ತಾರೆಗಳನ್ನು
ಚಂದಿರ ಬೆಂಚಲಿ ಬಟಾಣಿ ತಿನ್ನುತ ಟಿಕ್ ಟಿಕ್ ಗೆಳೆಯಾ ಹಾಡೋಣ
ಅಮ್ಮನು ಕರೆದರೆ ಓ ಎನ್ನದೆ ಮೋಡದ ಮರೆಯಲಿ ಅಡಗೋಣ
ಅಹಾ! ಭೂ ನಕ್ಷತ್ರವು ನೀನು ಇಲ್ಲಿಗೆ ಬಂದೆಯಾದಲ್ಲಿ
ಬರಿದಾಗುವುದು ಲೋಕದ ಮಡಿಲು, ಒಣಗುವುದಲ್ಲಿನ ಕಡಲೂ
ಬಂದಾಯಿತು ನಾ, ಇದ್ದಾಯಿತು ಅಲ್ಲಿ ಮುಗಿಸಿದೆ ಜನುಮದ ಆಟ
ಮುಗಿಸಿದೆ ಮೇಲೆ ಮುಗಿಯಿತು ತಾನೆ ಜನನದಾಟದ ವೃತ್ತ?
ಆಡುವೆನೆಂದರೆ ನಿಯಮವೂ ಇಲ್ಲ ಕರಕೊಂಬವರೂ ಇಲ್ಲ
ಹಂಬಲವಿರಲಿ ಹಂಬಲವಾಗಿಯೆ ನಿಜವಾದರೆ ಅದು ವ್ಯರ್ಥ
ಎಲ್ಲೆಲ್ಲಿರುವೆವೊ ಅಲ್ಲಲ್ಲಿಂದಲೇ ಆಡುತಲಿರೋಣ ಮಗುವೇ
ನೀನಲ್ಲೆ ಇರು ಪುಟಾಣಿ ಪುಟ್ಟಾ ನಾನಿಲ್ಲೇ ಇರುವೆ

ಅಮರ ಬಾಪು ಚಿಂತನ – ನವೆಂಬರ್ – ಡಿಸೆಂಬರ್ 2018

# ಗಾಂಧಿ ಶುಭಕೆ ನಾಂದಿ

– ಸಾ.ಶಿ. ಮರುಳಯ್ಯ

ಇವನೊಬ್ಬ ಬೈರಾಗಿ
ತುಂಬು ಹರೆಯದ ಮಾಗಿ ಇವನ ದೇಹ

ಥೇಟು ತಟ್ಟಿಗೆ–ಅಲ್ಲ–ಉಣ್ಣೆಗೊರೆವನ ಗೂಡು
ತಲೆ ಬೋಳು ಬಾಯ್ ಬಚ್ಚು
ಹರುಕು ಗಡ್ಡದ ಮೇಲೆ ಮುರುಕು ಮೀಸೆ ಕಣ್ಣೆರೆಡು ಮೂಸೆ
ಸಣ್ಣ ಸೋರೆಯ ಬುರುಡೆಗಂಟಿಸಿದ ರೆಕ್ಕೆಗಿವಿ
ಇವನ ಮೈ ಬಳಿದವಗೆ
ಸಿಗಬಹುದು ಮಾಂಸ ಒಂದೇ ಒಂದು ಕೆ.ಜಿ.
ಹೀರಿದರೆ ಬರಬಹುದು ಕಾಲು ಲೀಟರು ರಕ್ತ
ಆದರೂ ಈತ ಬಹು ಶಕ್ತ
ಈ ಬಡಜೋಗಿ ತೂಗವೊಡೆ
ಶೆಟ್ಟಿಯಂಗಡಿಯಲ್ಲಿ ಕಲ್ಲುಗಳೇ ಇಲ್ಲ
ಕೊಳ್ಳುವೊಡೆ ಬ್ಯಾಂಕಿನಲಿ ಹಣವಿಲ್ಲ
ಇಲ್ಲ ಇಲ್ಲಾ ಇಲ್ಲಾ ಇವನಿಗೊಂದು ಇಂದು ಸಾಟಿಯಿಲ್ಲ

ಇವನೊಬ್ಬ ಮಾಯಾವಿ
ಗುಟ್ಟರಿತ ಗಾರುಡಿಗ
ಇವನ ನೆಲೆ ಸಾಬರಮತಿ
ಇವನೋ ಶೃಂಗಾರಗೊಂಡ ಯತಿ

ನೋಡಿ ದೊಡ್ಡ ಪುಂಗಿಯನೊಮ್ಮೆ ಊದಿಯೇ ಊದಿದ
ಹಲ್ಲ ಕಳಿದು ಹಾವನಾಡಿಸಬಲ್ಲಡೆ
ಆ ಹಾವಿನ ಸಂಗವೇ ಲೇಸು ಕಂಡಯ್ಯ ಎಂದು
ಹಾವನಾಲಿಂಗಿಸಿದ, ವಿಷವನ್ನು ದ್ವೇಷಿಸಿದ
ಅಷ್ಟೇಕೆ? ಮಂತ್ರಾಣಿತನಯನಿಗೆ
ಅದೆ-ಅಂಗೂಲಿಮಾಲನಿಗೆ
ಮಲ್ಲಿಗೆಯ ಹಾರವನು ಹಾಕಿಯೇ ಬಿಟ್ಟ
ಜಗದ ಮಾನಸದಲ್ಲಿ ವಿಹರಿಸಿದ ಈ ಅಗ್ನಿಹಂಸಕ್ಕೆ
ಮುಗಿಲ ಕೆಚ್ಚಲನೆಲ್ಲ ಕಚ್ಚಿ ಹೀರುವ ದಾಹ
ಆದರೂ ಬತ್ತಿಲ್ಲ ಮಣ್ಣ ಮೋಹ
ಬಯಲು ಬತ್ತಲೆಯೆಂದು ಬಟ್ಟೆಯುಡಿಸಲು ಹೋಗಿ
ತಾನು ಬತ್ತಲೆ ನಿಂದ, ಕಡೆಗೆ ಬಯಲಾದ

ಇವನೊಬ್ಬ ಕಾರಣಿಕ
ಮೇಲಿಂದ ಇಳಿದು ಬಂದವನಲ್ಲ
ಇಲ್ಲಿಂದಲೇ ಬೆಳೆದು ಮೇಲೇರಿದಾತ ಬೆಳೆದ
ಇವನು ಬೆಳೆದೇ ಬೆಳೆದ ಬಾನೆತ್ತರ
ಕಾಲು ಕಡಲಾಳದಲ್ಲಿ
ತೋಳು ದಿಕ್ಕು ದಿಕ್ಕುಗಳಲ್ಲಿ
ಆದನಿವ ಸೂಕ್ತಪುರುಷ
ಎಣಿಸಲೇತಕೆ ಹೇಳು ಸತ್ತ ವರುಷ

ಅಂದಿಂದು ಎಂದಿಗೂ ಇವನದೊಂದೇ ನಿಲುವು
ಬದಲು ಕಾಣದ ಭಂಗಿ
ಅಯ್ಯೋ ಪಾಪ
ನಮ್ಮ ಟೈಲರಿಗಂತೂ, ಟೇಪು ಸಾಲದೆ ಬಂತು
ಹೊಲಿದು ಕೊಡಲೇ ಇಲ್ಲ, ಇವಗೆ ಅಂಗಿ

ಇವನೊಬ್ಬ ಬ್ರಹ್ಮಚಾರಿ
ಒಬ್ಬಳೇ ಹೆಂಡತಿ, ನಾಲ್ಕು ಜನ ಮಕ್ಕಳು
ಇದ್ದದ್ದೇ ಬಿಡಿ ಇವನ ಗೋಳೂ
'ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ'
ಮಾತೆತ್ತಿದರೆ ಸಾಕು
ಇವನು ಹಾಕಿದ್ದೇ ಹಾಕಿದ್ದು ಹೈಡ್ರಾಲಿಕ್ಕು ಬ್ರೇಕು

ಆದರೂ ಈ ಮುದುಕ ಕಸ್ತೂರಿ ಪ್ರಿಯ
ಮೈಯೆಲ್ಲ ಕಸ್ತೂರಿ, ಮನವೆಲ್ಲ ಕಸ್ತೂರಿ
ಮನೆಯ ಮುದುಕಿನೊಳಲ್ಲೂ ತುಂಬಿದ್ದ ಕಸ್ತೂರಿ

ಶುದ್ಧ ಸೌರಭ ಅಷ್ಟೇ
ಕಪ್ಪು ಕಲೆ ಇಲ್ಲವೇ ಇಲ್ಲ

ಪಾಂಡುವಿನ ಪರ್ಣಕುಟಿ, ಯಯಾತಿಯುದ್ಯಾನ
ದೇವೇಂದ್ರನಾಸ್ಥಾನ ಯಾವುದೂ ಅಲ್ಲ
ಇವನ ನೆಲೆ ಸಾಬರಮತಿ
ಇವನೋ ಶೃಂಗಾರಗೊಂಡ ಯತಿ

ಕ್ಷಮಿಸಿ
ಇವನೇ ನೋಡಿ ನಮ್ಮ ಗಾಂಧಿ
ಇವನ ಬಾಳಿನ ಗೀತೆ
ಶುಭಕೆ ನಾಂದಿ

ಸೌಜನ್ಯ : ಅಮರ ಬಾಪು ಚಿಂತನ ಮಾಸಿಕ – ಫೆಬ್ರವರಿ 2013

# ಗಾಂಧಿ ನೆನಕೆ

– ಎ.ಆರ್. ನಾರಾಯಣಭಟ್ಟ

ಆಧುನಿಕ ವಿಶ್ವವೇ ಒಪ್ಪಿರಲು ಗಾಂಧಿಯನು
ನಾವೇಕೆ ನಮ್ಮವನ ಕಟುಟೀಕೆ ಮಾಡುವುದು?
ನಮಗಾಗಿ ಬದುಕಿನಲಿ ಅರೆನಗ್ನನಾದವನ
ನಾವೇಕೆ ಮೂಢರೊಲು ಅಪಹಾಸ್ಯ ಗೈಯುವುದು?

ದೌರ್ಜನ್ಯ ಗೈದವರ ಕಾಯ್ದೆಗಳ ಮುರಿದವನ
ಅನವರತ ನಾವೆಲ್ಲ ಕೊಂಡಾಂಡಬೇಕಯ್ಯ
ಸೆರೆಮನೆಯ ವಾಸದಲ್ಲಿ ಆತ್ಮ ಬಲ ಪಡೆದವನ
ಸಾತತ್ಯ ನೆನೆಯುತ್ತ ಅಭಿನವಿಸಬೇಕಯ್ಯ !

ದನುಜರೊಲು ಆಳುವರ ಹೃದಯ ಪರಿವರ್ತಿಸಲು
ಸತ್ಯವನು ನೆರೆನಂಬಿ ಉಪವಾಸ ಗೈದಿಹನು
ನರನಾರಿಯರಲಿ ದಿವ್ಯ ಧೈರ್ಯವನು ತುಂಬಿಸಲು
ಅಹಿಂಸಾ ತತ್ತ್ವವನು ಉಪದೇಶ ಮಾಡಿಹನು !

ಧರ್ಮಾಧರ್ಮಗಳಲ್ಲಿ ಭೇದವನು ಅಳಿಸಲಿಕೆ
ಧರ್ಮಸಾಮರಸ್ಯವ ಸಂಸ್ಥಾಪಿಸಿದನಾತ
ಅಸ್ಪೃಶ್ಯ ಶಾಪದಿಂ ದಲಿತರನು ಪೊರೆಯಲಿಕೆ
ದಲಿತೋದ್ಧಾರವ ಕೈಗೊಂಡ ಪಿತನಾತ !

ಹಿಂದುಗಳು ಮುಸ್ಲಿಮರು ಮರು ಅನುಜರೊಲು ಜೀವಿಸಲು
ಅಲ್ಲಾನ ಜತೆಯಲ್ಲಿ ಈಶ್ವರನ ಬೆರೆಸಿಹನು
ಕರ್ಮವನ್ನು ಕಾಣುವೊಡೆ ಸಂಪೂರ್ಣ  ಯೋಗದೊಲು

ಗೀತೆಯಲಿ ಅಸಾಮಾನ್ಯ ಚೋದನೆಯ ಪಡೆದಿಹನು !

ವಿಶ್ವದಲಿ ಸತ್ಯವೇ ದೇವರೆಂದರಿತವನು
ಸತ್ಯವನೆ ಪೂಜಿಸಿದ ಜೀವನದ ಕೊನೆವರೆಗೆ
ಬದುಕಿನಲಿ ಅಹಿಂಸೆಯ ಧರ್ಮವೆಂದರಿತವನು
ಪ್ರೀತಿಸಿದ ಸರ್ವರನು ಉಸಿರಾಟ ನಡೆವರೆಗೆ !

ಸರ್ವರೇಳಿಗೆಯಲ್ಲಿ ವ್ಯಷ್ಟಿಯೇಳಿಗೆಯೆಂದು
ತತ್ತ್ವ ಸರ್ವೋದಯದ ದರ್ಶನವ ಮಾಡಿಸಿದ
ರಾಮನೇ ಪರಿಪೂರ್ಣ ವಿಶ್ವಾತ್ಮ ಘನನೆಂದು
ತಾ ರಾಮನಾಮದಲಿ ರಾಮನನೆ ದರ್ಶಿಸಿದ !

ಶ್ರೀಮಾತೆ-ಭಗಿನಿಯೊಲು ಮಹಿಳೆಯನು ಗೌರವಿಸಿ
ಮಹಿಳೆಯರ ಸಂಕೋಲೆಗಳನೆಲ್ಲ ಖಂಡಿಸಿದ
ತ್ಯಾಗಮಯಿ ಗೋವಿನಲಿ ಸುರಭಿಯನು ಸಂಗಮಿಸಿ
ಪಡೆದವಳ ರೀತಿಯಲಿ ಆಕಳನು ಪೂಜಿಸಿದ !

ಪಂಚೇಂದ್ರಿಯಂಗಳನು ನೇಮದಲಿ ನಿಗ್ರಹಿಸಿ
ಧ್ಯಾನದಲಿ ಜೀವಾತ್ಮ ಬೆಳಗುವೊಲು ಜೀವಿಸಿದ
ತ್ರಿಕರಣ ಶುದ್ಧಿಯಲಿ ಮಾನವೋತ್ತಮನೆನಿಸಿ
ದೇವಮಾನವನೊಲು ವಿಶ್ವವನು ಬೆಳಗಿಸಿದ !

ವಿಶ್ವಮಾನವರೆಲ್ಲ ಪೊಗಳುತಿರೆ ಗಾಂಧಿಯನು
ಹಿಂದುತ್ವ ಕಡುಧೂರ್ತ ಕೊಂದನೋ ತಂದೆಯನು
ಅನುಸರಿಸುತಿದೆ ವಿಶ್ವ ಗಾಂಧೀಜಿ ತತ್ತ್ವವನು
ನೆನೆಯೋಣವೋ ನಾವು ಗಾಂಧೀ ಮಹಾತ್ಮನನು !

ಕೃಪೆ : ಬಹುಜನ ಕನ್ನಡಿಗರು

# ಗಾಂಧಿ ಸ್ಮರಣೆ

– ಪ್ರೊ. ಚಂದ್ರಶೇಖರ ಪಾಟೀಲ್ (ಚಂಪಾ)

ಖಾಲೀ ಗದ್ದಲದ ಈ ನಾಡಿನ
ಉದ್ದಗಲಕ್ಕೂ
ಈಗ ಶಾಂತಿ ನೆಲೆಸಿದೆ.
ನರನಾಡಿಯೆಲ್ಲ ನಿಂತೇ ಹೋದಂತಾಗಿ
ನಾವೆಲ್ಲ ಯೋಗಿಗಳಾಗಿದ್ದೇವೆ.
ಹಾದಿ ಮಾತು, ಬೀದಿ ಭಾಷಣಗಳ ಸದ್ದಡಗಿ
ಕಿವಿ ತುಂಬ ಹುಲುಸಾಗಿ ಕೂದಲು ಬೆಳೆಯುತ್ತಿದೆ.
ಅನಾಚಾರ ಅತ್ಯಾಚಾರ ಭ್ರಷ್ಟಾಚಾರಗಳ ಬದಲು
ಪತ್ರಿಕೆಗಳ ತುಂಬ ಶುದ್ಧ ಸಮಾಚಾರ ತುಂಬಿದೆ,
ಎಲ್ಲಾ ಸಾಮಾನುಗಳ ಬೆಲೆ ಇಳಿದೂ ಇಳಿದೂ
ಈಗ ಕೈಗೆ ಸಿಗದಂತಾಗಿವೆ.
ಬಿಡಾಡಿ ನಾಯಿಗಳ ನಿರ್ಬೀಜೀಕರಣವಾಗಿದೆ.
ಭಾರತದ ಜನಸಂಖ್ಯೆ ಇಳಿಯುತ್ತಿದೆ.
ನಾಳಿನ ನಾಗರಿಕರಾಗಿ ಇಂದಿನ ಮಕ್ಕಳೆಲ್ಲ
ಸರಿಯಾಗಿ ಸಾಲೆಗೆ ಹೋಗಿ
ಒಂದು ಎರಡು ಬಾಳೆಲೆ ಹರಡು
ಕಲಿಯುತ್ತಿದ್ದಾರೆ.
ಹಸಗಂಡು ಮನೆಗೆ ಬಂದು
ಮಣ್ಣಿನ ವಾಸನೆಯ ತಾಜಾ ಊಟ ಮಾಡುತ್ತಾರೆ.
ಜಾಣ ಬಾಬಾಗಳಿಗೆ ಹುಚ್ಚುಗೌಡರ ಬೆನ್ನು ಸಿಕ್ಕು
ಧರ್ಮೋದ್ಧಾರದ ಸವಾರಿ ಮುನ್ನಡೆದಿದೆ.
ಅಸ್ಪಶ್ಯ ದೇವರಿಗೆ ಹರಿಜನರ ದರ್ಶನವಾಗಿ

ಅವರ ಉದ್ಧಾರವೂ ಆಗುತ್ತಿದೆ
ಸರಕಾರದ ಕೆಲಸ ದೇವರ ಕೆಲಸವಾಗಿ
ತುಪ್ಪದ ದೀಪ ಧಾಳಾಗಿ ಉರಿಯುತ್ತಿವೆ
ವಿಶೇಷ ಪ್ರಾರ್ಥನೆಗಳಿಂದಾಗಿ ದೇಶದ ತುಂಬ
ಜಿಟಿ ಜಿಟಿ ಮಳೆ ಹಿಡಿದಿದೆ.
ನಮ್ಮ ತ್ರಿವರ್ಣ ಧ್ವಜ ತೊಯ್ದು ತಪ್ಪಡಿಯಾಗಿ
ಅಶೋಕ ಚಕ್ರ ಸ್ಥಿರವಾಗಿದೆ.
ಹೆದ್ದಾರಿಯ ಮೇಲೆ ಕೆಟ್ಟು ನಿಂತ ಟ್ರಕ್ಕು ಕೂಡ
ನಾಡು ಮುನ್ನಡೆದಿದೆ–ಎಂಬ ಸಂದೇಶ ಹೊತ್ತಿದೆ.
ರೇಡಿಯೋದ ಗಿಳಿವಿಂಡು, ಅದೋ,
ಒಕ್ಕೊರಲಿಂದ ಅದೇ ಹಾಡು ಹಾಡುತ್ತಿದೆ.
ಧನ್ಯತೆಯ ಈ ಕ್ಷಣದಿ, ಓ ಮುದ್ದುರಂಗ,
ಕಿವಿ ಮುಚ್ಚಿ, ಕಣ್ಣು ಮುಚ್ಚಿ,
ನೆನೆ ಗಾಂಧಿಯನು.
(ಯಾವ ಗಾಂಧಿ? ಅಂತ ತಿಳಿಯದೇ ಪೆದ್ದುಲಿಂಗ?)
ಬಾಯಿ ಮುಚ್ಚಿ,
ನೆನೆ ನೆನೆ ಗಾಂಧಿಯನು.

---

ಜಪಿಸಿರಿ ಸ್ವರಾಜ್ಯ ಮಂತ್ರವನು, ಧರಿಸಿರಿ ಸ್ವರಾಜ್ಯ ವಸ್ತ್ರವನು
ಏಕೆ ಧರಿಸುವೆ, ಸಾಕು ಬಿಡು ಪರದೇಶ ಜನರು ವಸ್ತುವಾ
ಹಾಕು ಬೆಂಕಿಯಲಿ ಉರಿಯಲಿ ಧಗಧಗ ಧರಿಸು ಖಾದಿ ಪವಿತ್ರವಾ
– ತಿಪ್ಪಯ್ಯ ಮಾಸ್ತರ

# ಕನಸಿನಲ್ಲಿ ಗಾಂಧಿ

– ಪ್ರೊ. ಎಸ್.ಜಿ. ಸಿದ್ಧರಾಮಯ್ಯ

ಅಲ್ಲ ಗಾಂಧಿ ಹೀಗೆ ಇದ್ದಕ್ಕಿದ್ದಂತೆ ಒಬ್ಬನೇ
ಮನೆಯ ಹಿತ್ತಲಿನಿಂದ ದನದ ಗೊಂತಿಗೆ ಬಂದು
ಸಗಣಿ ಬಾಚಿ ಗಂಜಳವೆತ್ತಿ ಗುಡಿಸ ತೊಡಗಿದರೆ
ಹೇಗಾಗ ಬೇಡ ಇದು ನಾನು ನಿತ್ಯ ಮಾಡುವ
ದಂದುಗ; ಗೊಣಗಿದರು ತಪ್ಪಿಸದೆ ಒಪ್ಪಿಸುವ

ಕೃತ್ಯ ಕಾಯಕ ಯಾವ ತಪ್ಪು ಕಂಡು ಹೀಗೆ
ಮಾತಿಲ್ಲದ ಮೌನದಲ್ಲಿ ಕ್ರಿಯೆಂಬುದು ಅರಿವು
ಭಾವದಲ್ಲಿ ಬಾಚಿ ಬಳಿದೆ ಗುಡಿಸಿದೆ ತಲೆಮೇಲೆ
ಹೊತ್ತು ತಿಪ್ಪೆಗೆ ಸುರಿದೆ ನೀನು ಬಂದಾಗ ಯಾರೂ
ಎದ್ದಿರಲಿಲ್ಲ ಗಾಂಧಿ; ನಿದ್ದೆಯೆಂಬುದು ಶತಮಾನದ

ಕರ್ಮಸಿದ್ಧಾಂತ ಬೆಳಕು ಹರಿವ ಮುನ್ನ ನಿನ್ನ ಪಾದ
ಮನೆಯಂಗಳವ ನುಡಿಸಿತ್ತು ರಂಗವಲ್ಲಿ ಬಿಡಿಸಿತ್ತು
ಸಾಬರಮತಿಯೋ ತಿಹಾರೋ ಊರು ಕೇರಿಯೆಲ್ಲ
ನಿನ್ನುಸುರಿನ ಪರಿಮಳದಲ್ಲಿ ಪಲ್ಲವದ ಬೆಳಗು ಹರಿಸಿತ್ತು
ಒಬ್ಬೊಬ್ಬರೇ ಎದ್ದಾಗ ಅಲ್ಲಿ ನೀನಿರಲಿಲ್ಲ ಹೆಜ್ಜೆ ಗುರುತಿತ್ತು

ನಾನು ಗೊಂತಿ ಗುಡಿಸುವುದು ಬಿಟ್ಟು ವರುಷ ಐವತ್ತಾಯಿತು
ಹೆಚ್ಚೇನು ಊರುಬಿಟ್ಟೇ ಮೂರು ದಶಕವಾಯಿತು ಗಾಂಧಿ
ಹೋಗಿ ನೋಡಿದರೆ ಗೊಂತಿ ಗೊಂತಿಗಳೆಲ್ಲ ಖಾಲಿ ಖಾಲಿ
ತಿಪ್ಪೆಗಳ ತುಂಬ ಗೋಳೀಕರಣದ ಕರಿಬಿಳಿಯ ಕವರು
ಹಾದಿ ಬೀದಿಯ ಮೇಲೆ ಗುಟ್ಕಾ ಹೆಂಡದ ಮೊಹರು

ಹಟ್ಟಿ ಹಾಡಿಗಳ ಗೋಡೆ ಮಾಡುಗಳಲ್ಲಿ ಭೀಮ ಬಂದು
ಹೋದ ನೆನಪು ನೇತಾಡಿದೆ ಜೇಡ ಬಲೆ ಸೂಡಿ ಪಿಸುಗುಟ್ಟಿದೆ
ಗಾಳಿ ಹಳೆಯ ಕನವರಿಕೆಯಲಿ ತೇಲಿ ಅಲ್ಲಿ ನಿನ್ನ
ನೆನಪಿನ ಬುತ್ತಿ ಬಿಚ್ಚಿದ ಮುದಿ ಜೀವಗಳೆರಡು
ಪಡಸಾಲೆಯಲಿ ಮಬ್ಬುಗಣ್ಣಿನ ಲಾಲಿ ಹಾಡಿವೆ ಪಾಡಿವೆ

---

"ಯಾರು ಹೆರರ ನೋವನ್ನು ಹಂಚಿಕೊಳ್ಳುವರೋ
ಯಾರು ಹೆರರ ದುಃಖ ಕಂಡು ಉಪಕಾರ ಮಾಡುವರೋ
ಯಾರು ಲೋಕದ ಎಲ್ಲವನ್ನೂ ಸಮನಾಗಿ ಕಾಣುವರೋ
ಯಾರು ಯಾರನ್ನೂ ಹಳಿಯರೋ
ಯಾರು ಮಾತು, ಮನ, ಕರ್ಮಗಳಲ್ಲಿ ಅಚಲರೋ
ಇಂಥವರ ಮಾತೆ ಧನ್ಯಳೇ ಸರಿ
ಯಾರು ಸಮದೃಷ್ಟಿಯಿಂದ ಕೂಡಿ ಆಶೆಯನ್ನು ತ್ಯಜಿಸಿರುವರೋ

ಜಿ.ವಿ. ನಾರಾಯಣಮೂರ್ತಿ ಅವರ ಗಾಂಧೀಜಿ ಅವರ
ಸರ್ವಧರ್ಮ ಸಮಭಾವ ಪುಸ್ತಕದಿಂದ ತೆಗೆದುಕೊಳ್ಳಲಾಗಿದೆ.
ಇದು ಸಂತ ನರಸೀ ಮೆಹತಾ ಅವರ ಗೀತೆಯಾಗಿದೆ

# ಗಾಂಧಿ

– ಪ್ರೊ. ಎಸ್.ಜಿ. ಸಿದ್ಧರಾಮಯ್ಯ

ನಾನು ಹುಟ್ಟಿದೆರಡನೆಯ ವರುಷ
ನೀನು ಹುತಾತ್ಮನಾದ ವರುಷ

ನಿನ್ನ ಹೆಸರು ನಮ್ಮ ಉಸಿರಾದಂತೆ
ಬೆಳೆದವರು ನಾವು,
ದೇಶವೆಂದರೆ ಬರಿಯ ಭೂಪಟವಲ್ಲ
ಜೀವ ಜಂಗಮದುಸಿರ ತಾವು

ಸ್ವಾತಂತ್ರ್ಯದ ಹಬ್ಬವೆಂದರೆ
ಜಯಕಾರದ ಬೊಬ್ಬೆಯಲ್ಲ
ಸತ್ಯಶುದ್ಧಕಾಯಕದಲಿ
ನಿತ್ಯರಾಗುವುದು ನಿರತರಾಗುವುದು

ಮಣ್ಣಿನಿಂದ ಅಧ್ಯಾತ್ಮದವರೆಗೆ
ಸಣ್ಣ ಸಂಗತಿಯನ್ನು ಬಿಡದೇ
ಋತದ ನಡೆಯಲ್ಲಿ ಗತಿಯ ಧೇನಿಸಿದೆ

ಗೊಬ್ಬರವೆಂದರೆ ಜೈವಿಕ ತತ್ವ
ಧರಣಿಯ ಗುಣದಲ್ಲಿ ಅನ್ನದ ಸತ್ವ
ಅಹಿಂಸೆಯಿಂದಲೇ ಅನಂತದರಿವು

ನಿನ್ನ ಬದುಕೇ ನಿನ್ನ ದರ್ಶನ
ಪುಟಪುಟಗಳಲ್ಲಿ ತೆರೆದಿಟ್ಟ ಚಿಂತನ
ಅಕ್ಷರಕ್ಷರದಲ್ಲೂ ನಿನ್ನದೇ ಹೆಜ್ಜೆ
ಟೀಕೆ ಟಿಪ್ಪಣಿಗಳಿಗೆ ಎದೆ ತೆರೆದ ಗೆಜ್ಜೆ

ಮೋಕಗಾಂಧಿ ಮಹಾತ್ಮಗಾಂಧಿ
ನೀನು ಹುಟ್ಟಿದ ನಾಡಲ್ಲೇ ಹತ್ಯೆಗೈದ ಹೆಸರಿದೆ
ಗೋಧ್ರಾ ಘಟನೆಯ ಸಾವು ಸಾರಿದೆ
ಯುವರೆದೆಯಲಿ ಉನ್ಮಾದ ಹರಿದಿದೆ

ಕೊಂದವರನ್ನೇ ಭಜಿಸಿ ಹಾಡಿದೆ
ನಿನಗೇ ಮತ್ತೆ ಗುಂಡು ಹೊಡೆದಿದೆ
ಹಿಂಸೆಯನ್ನೇ ಯುಗಧರ್ಮ ಎಂದಿದೆ
ಸತ್ಯಚೇತನದ ಹೆಸರ ಉಸುರಿದೆ

ಬೇಲಿಯೇ ಎದ್ದು ಹೊಲವ ಮೇಯ್ದರೆ
ದೂರುವುದಾರಿಗೆ ಹೇಳು ಬಾಪು
ಸರ್ವಾಧಿಕಾರದ ಧೋರಣೆಯಲ್ಲಿ
ಮಾತು ಮಾತು ಒಡಕಿನ ತತ್ವ

ಇಂದಿನ ಬದುಕಿನ ಪುಟಪುಟದಲ್ಲೂ
ಹರಿದಿದೆ ನೆತ್ತರು ನೆತ್ತರು ನೆತ್ತರು
ಗಡಿಯಲ್ಲಿ ನೆತ್ತರು, ಗುಡಿಯಲ್ಲಿ ನೆತ್ತರು
ಎಲ್ಲೆಲ್ಲಿಯೂ ನೆತ್ತರೇ ನೆತ್ತರು
ಹರಿದ ನೆತ್ತ ಕರ್ದಮದಲ್ಲಿ
ಧರ್ಮದ್ವೇಷದ ಯಜ್ಞದ ಧೂಮ
ಇರಾಕು ಇರಾನು ಸಿರಿಯಾ ಕೊರಿಯಾ
ಭಾರತ ಪಾಕಿ ಅಮೇರಿಕ ಚೀನ
ಎಲ್ಲೆಲ್ಲಿಯೂ ಕೂಗಿದೆ ಹಿಂಸಾರಭಸ

ಸಾಯುವ ನೋಯುವ ಜೀವಗಳ್ಲಿ
ಬೇಯುವ ಬಳಲುವ ಭಾವಗಳಲ್ಲಿ
ಮಳೆಯ ಮಕ್ಕಳ ಕಣ್ಣೀರಿನಲ್ಲಿ
ಮೊರೆದಿದೆ ಕರೆದಿದೆ ಕರುಳಾಳದ ಕೂಗು
ಗಾಂಧಿ ಗಾಂಧಿ ಕರುಣೆಯು ಕೂಗು

ಮಾರ್ಟಿನ್ ಲೂಥರ್ ಮಂಡೇಲಾ
ಅಂಗ್‌ಸಾನ್ ಸೂಕಿ ಎಲ್ಲರ ದಾರಿ ಒಂದೇನೆ
ಜಗವನು ಕಾಯುವ ಧರ್ಮದ ದಾರಿ ಗಾಂಧೀನೇ

ಗಾಂಧಿ ಗಾಂಧಿ ದೇಶದ ಉಸಿರು
ಗಾಂಧಿ ಗಾಂಧಿ ಜಗದ ಉಸಿರು
ರಾಮ ರಹೀಮ ಕ್ರಿಸ್ತ ಕರೀಮ
ಈಶ್ವರ ಅಲ್ಲಾ ತೇರೇ ನಾಮ್
ಸಬ್‌ಕೋ ಸನ್ಮತಿ ದೇ ಭಗವಾನ್

---

ಎಲ್ಲಿ ನೋಡಿದರೂ ಎಲ್ಲರ ಕಣ್ಣಿನಲ್ಲೂ ಕಣ್ಣೀರಧಾರೆ
ಎಲ್ಲೆ ಇಟ್ಟರೂ ಇಟ್ಟ ಹೆಜ್ಜೆಗಳಲಿ ವಿದ್ರೋಹದ ಜ್ವಾಲೆ
ಕಂಗಾಲಾದ ಮನ ಘೀಳಿಸಿತು ಧರ್ಮಕ್ಕೇಕೆ ಈ ರೋದನ
ಹಾಯ್ ! ಧೀಮಂತ ನಾಯಕನಿಲ್ಲದ ವೇದನೆ ಎಂದ ನೊಂದವ

– ಜಾಹಿದಾ ಖಾತುನ
ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಮುಸ್ಲಿಂ ಮಹಿಳೆಯರ
ಕೊಡುಗೆ ಪುಸ್ತಕದಿಂದ – ಪುಟ 129

# ಹೇಳು ಮಹಾತ್ಮ

– ಪ್ರೊ. ಬಿ. ಕೃಷ್ಣಪ್ಪ

ಗಾಂಧಿ, ಗಾಂಧಿ, ಮಿಸ್ಟರ್ ಗಾಂಧಿ
ಅರೆ ನಗ್ನ ಫಕೀರ ಗಾಂಧಿ
ಮಹಾತ್ಮಾ ಗಾಂಧಿ
ಯಾವುದು ನಿನ್ನ ನಿಜರೂಪ
ಮೋಹನ ಕರಮಚಂದ ಗಾಂಧಿ!
ಗಾಂಧಿ ಬಸ್ಸು
ಗಾಂಧಿ ಸಿನೆಮ
ಗಾಂಧಿ ರೈಲು, ಗಾಂಧಿ ಟಿಕೇಟು
ಗಾಂಧಿ ಎಂದರೆ ಬಿಟ್ಟಿ
ನಿನ್ನ ಹೆಸರಿನೊಂದಿಗೆ
ನೀ ಬಿಟ್ಟು ಹೋದ ಹೊಸ ಅರ್ಥ ಕೋಶ
ನೀಕುಡಿದು ಕಣ್ಣೀರಿಟ್ಟೆ
ಬೀಡಿ ಸೇದಿ
ವ್ಯಭಿಚಾರ ಮಾಡಿ, ಕ್ಷಮೆ ಯಾಚಿಸಿದೆ
ಆದರೆ ನಿನ್ನ ಹೆಸರು ಹೇಳುತ್ತ
ಸದಾ ಕುಡಿದು ಬೀಳುವ ಕುಡುಕರಿಗೆ
ಬೀಡಿ–ಸಿಗರೇಟು ಕ್ಷಯ ರೋಗಿಗಳಿಗೆ
ಅನಾಚಾರಿಗಳಿಗೆ ಕ್ಷಮಾ ಮಾಡಲುಂಟೆ?
ಸಜಾ ಮಾಡಬಾರದೇ?
ಸನ್ಮತಿ ಕೋರಲೇ ಹೇಳು ಮಹಾತ್ಮ

ಸೌಜನ್ಯ : ಪ್ರೊ. ಬಿ. ಕೃಷ್ಣಪ್ಪನವರ ಬರಹಗಳು ಮತ್ತು ಭಾಷಣಗಳು ಕೃತಿಯಿಂದ
ಪುಟ ಸಂ. 124

# ಮಹಾರ್ ಕೇರಿಯಲ್ಲಿ ಮಗುವಾದ ಮಹಾತ್ಮ

– ಸುಬ್ಬು ಹೊಲೆಯಾರ್

ಆದಿ ಅಸ್ಪೃಶ್ಯ ಲೋಕದ ಅನಾದಿ ಪುಟ್ಟ ಸಂಸಾರವೊಂದು
ಮಹಾನಗರಿ ಮುಂಬೈನಿಂದ ಆಶ್ರಮಕ್ಕೆ ಆಗಮಿಸಿತ್ತು
ಅಲ್ಲಿದ್ದ ಪರಿವಾರವೆಲ್ಲ ಮೈಚರ್ಮವನ್ನೇ ಸುಲಿದುಕೊಳ್ಳಲು
ಬೇಕಾದರೆ ಉಸಿರಾಟವನ್ನು ನಿಲ್ಲಿಸಿಕೊಳ್ಳಲು ತಯಾರಿತ್ತು

ದೂಧಾಭಾಯಿ ದೀನಾಬೆನ್ ಬೆಸೆದ ಬಂಧನಕ್ಕೆ
ಕರುಳಕುಡಿಯ ಹಣತೆಯಂತೆ ಬೆಳಕು
'ಲಕ್ಷ್ಮೀ' ಎಂಥ ಹೆಸರು!
ಗಾಂಧಿ ಮುಗುಳ್ನಕ್ಕರು, ಕರೆದು ಮೈದಡವಿದರು

ಕಸ್ತೂರಬಾ ಭಾವನೆಗಳ
ಕತ್ತರಿಸಿದ ಕುಹಕಿ। ಪತ್ನಿಯೇ ಇವಳು
ಆಫ್ರಿಕಾಕ್ಕೆ ಹೋಗಿಬಂದರೂ ಕಳಂಕ ಕಲ್ಮಶದ
ಮಹಾನ್ ಧರ್ಮಿಷ್ಠೆ। ಯಾವ ದೇವರ ಹಾವು
ಕುಟುಕಿದೆ। ನಾನು ಕೈಹಿಡಿದೇನೇ ಇವಳನ್ನ
ಕೈಕೈ ಹಿಸುಕಿಕೊಳ್ಳುತ್ತಾರೆ, ಕರಮಚಂದ್ರರು

ದಂಡಿಸಿಕೊಳ್ಳಲು ನಡೆಯುತ್ತಾರೆ ಮನಸು ದೇಹ ದಣಿಯುವವರೆಗೆ
ಹಸಿವು, ನಿತ್ರಾಣ ಕತ್ತಲೆ ದಾಟಿ ಮೂರನೆಯ ಬೆಳಕಿಗೆ ಬರುತ್ತಾರೆ
ಪ್ರಾರ್ಥಿಸುತ್ತ, ನೆರುಪಾಗಿರಲಿ ಆಶ್ರಮವಾಸಿಗಳ ತನ್ಮನಗಳು

ನೆನಪಿನಾಳದ ಗಾಯದ ನೆನ್ನೆಗಳು
ಗರ ಬಡಿದಂತೆ ಕಾಣುತ್ತಿದೆ ಆಶ್ರಮ
ನನ್ನುಸಿರಿನ ಗಾಳಿಯೇ ನಿನಗೆ ಅಸ್ಪೃಶ್ಯತೆಯ ಸೋಂಕೇ

ಸೋಂಕಿದ್ದರೆ ನನ್ನುಸಿರ ನಿಲ್ಲಿಸು ಎಂದೆನ್ನುತ್ತಲೇ ಬಂದ ಗಾಂಧೀ
ಮೊದಲು ಹುಡುಕುತ್ತದೆ ಕಣ್ಣು
ನಿನ್ನೆ ಬಂದ ದೂಧಾಭಾಯಿ ದಂಪತಿಗಳ
ಪುಟ್ಟ ಹಣತೆ ಲಕ್ಷ್ಮೀ ಬೆಳಕನ್ನು ನಿಟ್ಟುಸಿರು ಬಿಟ್ಟ ಗಾಂಧೀ.
ಕಾಣುತ್ತಿಲ್ಲ ಬಾ ತಲ್ಲಣಿಸಿತು ಮನ

ಈ ಕಡೆ ಹರಿದುಹೋದರೂ ನೀರಿನಂತೆ
ಅಗೋ ಅಲ್ಲಿ ಕೆಳಗಿನ ಮನೆಯ ಕಡೆಗೆ
ಹೊರಟಿತ್ತು ಊರುಗೋಲು ಹಿಡಿದುಕೊಂಡ ಕನ್ನಡಕ
ಸತ್ಯ, ಅಹಿಂಸೆ, ಸಹಿಷ್ಣುತೆಗೆ, ಸುತ್ತಿದ್ದ ತುಂಡು ಬಟ್ಟೆಯ
ಜೀವ ನಡೆದುಬರುತ್ತಿತ್ತು । ರಮಾ ಭೀಮಾಬಾಯಿಯ
ಮನೆಯ ಕಡೆಗೆ, ನೆಲನೊಂದುಕೊಳ್ಳದೇ
ಸರಳ ನೆರಳೊಂದು ನನ್ನ ಮೇಲೆ ನಡೆದರೆ
ನನ್ನ ಮೈ ಹಗುರವಾದಂತೆ ಎಂದು ನುಡಿದಿತ್ತು

ಅನ್ನಿಸಿತ್ತು ಬಹಳ ದಿನಗಳಿಂದ
ಭೀಮಸಾಹೇಬರ ಮನೆಗೆ ಬರಬೇಕೆಂದು
ನಡುಮನೆಯಲ್ಲಿ ಅಕ್ಕ ತಂಗಿಯರು
ಹಂಚಿಕೊಳ್ಳುತ್ತಿದ್ದಾರೆ ಸುಖದುಃಖಗಳನ್ನು

ಹಡೆದ ಮಕ್ಕಳು ನಾಲ್ಕು ಕೈಜಾರಿ ಉಸಿರುಬಿದ್ದು
ಹೊಟ್ಟೆಯ ಗುಂಡಿಯಲ್ಲಿ ಮಣ್ಣು ಮಾಡಿದ ಮಕ್ಕಳ
ಮುಖದ ಸೆರಗುಹೊದ್ದು ಕಣ್ಣಿಗೆ ಅಂಟಿದ ದುಃಖದ
ತಲೆಯಮೇಲೆ ನೋವ ಕವುಚಿಕೊಂಡು
ನಿಂತ ರಮಾಬಾಯಿ । ಸಂತೈಸುವ
ಮಹಾತಾಯಿ ಕಸ್ತೂರಬಾ ಭಾವನೆಗಳು
ಮೈಯುಂಡ ಮಾತಾಗಿ ನಾ ಹೊತ್ತ
ಮಕ್ಕಳು ನನ್ನ ಕಣ್ಣ ಗುಂಡಿಯಲ್ಲಿ

ಅಳುತ್ತಿರುವುದನ್ನು ನಿಲ್ಲಿಸಲಾಗದೇ ನನ್ನ
ಕೆನ್ನೆಗಳು ಕಾಲುವೆಗಳು ಆಗಿವೆ ರಮಾ
ಲೋಕಮಾತೆಯರು ಪರ್ವತಗಳಾಗಿ ಮಾತನಾಡುತ್ತಿವೆ
ಈ ಘಳಿಗೆಯಲ್ಲಿ

ಮಹಾತ್ಮರ ಅನಿರೀಕ್ಷಿತ ಆಗಮನ ನಂಬಲಾಗುತ್ತಿಲ್ಲ
ಎದ್ದುನಿಂತರು ಇಬ್ಬರು ಸೆರಗೊಡ್ಡಿ ರಮಾಬಾಯಿ,
ಬಾಪೂಜಿಗೆ ಕೈಮುಗಿದುಬರಮಾಡಿಕೊಂಡರು
ಬಾ, ಆತಂಕದಿಂದಲೇ ಉಗುಳು ನುಂಗಿಕೊಂಡು ನುಡಿದರು

ದೂದಾಬಾಯಿ ಮಗಳು ನನ್ನ ಮೊಮ್ಮಗಳೆಂದು
ರಮಾಗೆ ಹೇಳಿದೆ ಅಂದರು.
ಗಾಂಧಿಗೆ ಬೆಟ್ಟ ಇಳಿಸಿದಂತಾಯಿತು ಕೈ ಮುಗಿದರು ರಮಾಗೆ
ಭೂಮಿಗೆ ಇಳಿದಂತಾಗಿ ರಮಾಬಾಯಿಗೆ
ತುಂಬ ಚಿಕ್ಕವಳು ನಾನು... ಕುಡಿಯಲು ನೀರು ಕೊಟ್ಟರು.
ನೀರು ಕುಡಿದ ಗಾಂಧಿ ನೀರಾದರು
ಎಷ್ಟೋ ವರ್ಷಗಳ ಆಯಾಸವೆಲ್ಲಾ ನಿವಾರಿಸಿದಂತಾಯಿತು.

ಜೀವಕ್ಕೆ ಇನ್ನೊಂದು ಜೀವ ಸೇರಿಕೊಂಡಂತಾಗಿ
ಕಣ್ಣಾಡಿಸಿದರು ಕೋಣೆಯನ್ನೆಲ್ಲಾ, ಬುದ್ಧ, ಫುಲೆದಂಪತಿಗಳ
ಪುಸ್ತಕ, ಭಾವಚಿತ್ರ, ಇಳಿಸಿಕೊಂಡು ಮನಸ್ಸಿಗೆ
ಹೊರಡಲನುವಾದರು ದಂಪತಿಗಳು

ಹೊರಟು ನಿಂತಾಗ ಕಸ್ತೂರಿ ಬಾಪೂಜಿಯವರು
ಅಂಗಳದಲ್ಲಿ ಮೂರೇ ಮೂರು ಜೀವಗಳು
ಸತ್ಯ ಪ್ರೇಮ ಭ್ರಾತೃತ್ವಗಳು
ಕಳುಹಿಸಿಕೊಡಲಾಗದ ಮಹಾ ಚೇತನಗಳು

ಎರಡು ಕೈಗಳ ಜೋಡಿಸಿ ಮುಗಿದ ರಮಾಬಾಯಿಯವರ
ಮನಸ್ಸು ಹೇಳುತ್ತಿತ್ತು ಕಾಯಿರಿ ಇನ್ನು ಸ್ವಲ್ಪ ಹೊತ್ತು
ಬಾಬಾಸಾಹೇಬರು ಬರುತ್ತಾರೆ. ಅಲ್ಲಿಯವರೆಗೆ

ಹೊರಟು ನಿಂತ ಚೇತನಗಳ ಜೀವ ತುಡಿಯುತ್ತಿತ್ತು
ಬಾಬಾಸಾಹೇಬರ ನೋಡಿ ಹೋಗಬಹುದಿತ್ತು ಅಂತ
ಆಕಾಶದ ತುಂಬೆಲ್ಲಾ ಹಕ್ಕಿಗಳ ಗುಂಪು ಗುಂಪಾಗಿ
ಗೂಡಕಡೆಗೆ ಹಾರುತ್ತಿದ್ದವು ಗೋಧೂಳಿ ಸಮಯದಲ್ಲಿ

ತಂಗಾಳಿ ಬೀಸಿ ಮುಖದ ತುಂಬ ಸೆರಗುಹೊದ್ದ ಸೀರೆ
ಅಂಚು ಹರಿದಿದ್ದನ್ನು ತೋರಿಸುತ್ತಿತ್ತು
ಹಿಂದಿರುಗಿ ಬಂದ ಕಸ್ತೂರಬಾ
ರಮಾಬಾಯಿ ಕಿವಿಯಲ್ಲಿ ಏನೋ ಹೇಳಿದರು
ಇನ್ನೊಮ್ಮೆ ಬಂದಾಗ ನಾನೇ ಚರಕದಲ್ಲಿ
ನೂಲಿದ ಸೀರೆಯನ್ನು ತಂದುಕೊಡುವೆ ಎಂದರು
ಇವರ ಕೈ ಇನ್ನಷ್ಟು ಬಿಗಿಹಿಡಿದು
ಬೇಡ, ಸಾಹೇಬರು ನನಗೆ ಸೀರೆ ತರಲೇ ಹೋಗಿದ್ದಾರೆ ಅಂದರು.

ಅರ್ಥವಾದಂತೆ ಎಲ್ಲವೂ ಗಾಂಧಿಗೆ
ಘನತೆ ಎಂದರೆ ಹೆಣ್ಣುಮಕ್ಕಳ ಘನತೆಯೇ ಮೇಲು
ಮನಸ್ಸು ನೂಲುದಾರವ ಲೋಕ ಸುತ್ತುತ್ತ ಕರುಳು-
ಬಳ್ಳಿಯ ನೆನೆಯುತ್ತ । ಮಹಾತ್ಮನಾಗುವುದು ಸುಲಭ
ಹೆಣ್ಣು ಹೆಣ್ಣಾಗುವುದು...ಇದು ನಾನು ಮೊದಲು ನೋಡಿದ
ಕ್ಷಣವೆಂದು ಮುನ್ನಡೆದರೂ, ಮತ್ತೆ ಹಿಂದಿರುಗಿ
ನೋಡಿದ್ದಾರೆ, ರಮಾಬಾಯಿ ಕಸ್ತೂರಬಾ, ಕಸ್ತೂರಿಬಾ ರಮಾಬಾಯಿ
ದೂರದಿಂದ ಭೀಮಸಾಹೇಬರು ನಿಂತಂತೆ ಕಾಣುತ್ತಿತ್ತು

ಕನ್ನಡಕ ಕಳಚಿಬಿತ್ತು ಮೈಮೇಲಿನ ತುಂಡುಬಟ್ಟೆ ಹಾರಿಹೋಯಿತು
ಊರುಗೋಲು ಜಿಲಕಿ ಆಗಿತ್ತು
ನಾನು ಇನ್ನಷ್ಟು ಸಣ್ಣವನಾದಂತೆ ಅನ್ನಿಸಿತು
ಬರೀ ಬೆತ್ತಲೆಯಾದೆ ಬೆತ್ತಲೆಯಾದೆ
ಮಹರ್ ಕೇರಿಯ ಪುಟ್ಟ ಮಗುವಾದೆ
ಅಳುತ್ತ ನಗುತ್ತಾ ಹಗುರಾದೇ ಹೂವಾದೆ...

# ನೆನಪು

– ರುದ್ರಪ್ಪ ಹನಗವಾಡಿ

ಬೊಚ್ಚು ಬಾಯಿಯ
ನಗು ಮೊಗದ ನಮ್ಮೂರ ರೈತನೊಬ್ಬ
ತುಂಡು ಪಂಚೆ ಉಟ್ಟ
ಹಿರೀಕನೊಬ್ಬ ಹಳೇ ಕನ್ನಡಕ ತೊಟ್ಟವನಂತೆ
ಊರ ಶಾಲೆಯ ಗೋಡೆಯ ಮೇಲೆ
ನೇತಾಡಿಕೊಂಡ ಪಟಗಳ ಸಾಲಿನಲಿ
ಮೊದಲಾಗಿತ್ತು
ಶಿಸ್ತಿನ ಸಿಪಾಯಿ ಡ್ರೆಸ್ಸಿನ
ಸುಭಾಷ್ಚಂದ್ರ ಬೋಸ
ಮೈಸೂರು ಆಳರಸನ ಟಾಕು ಟೀಕಿನ
ರಾಜ ಪೋಷಾಕು
ಇವರೆಲ್ಲರ ಮಧ್ಯೆ
ಇದ್ಯಾತಕ್ಕೆಂದು ಅನಿಸಿತ್ತು
ಮತ್ತೆ ಎರಡೋ ಮೂರನೆ
ತರಗತಿಯಲ್ಲಿ ಓದಿಸಿದ
ಪಾಠದಲಿ ಬೀಡಿಸೇದಿ
ಅಪ್ಪನಿಗೆ ಹೇಳಿದ್ದು
ತರಗತಿಯ ಮೇಷ್ಟರು
ಕಾಪಿ ಹೊಡೆಯಲು ಹೇಳಿದರು
ನಿರಾಕರಿಸಿದ ಕ್ಷಣದಲ್ಲಿ
ಬೇರೂರಿದ್ದ ನನ್ನ ಮನದಲ್ಲಿ
ಇವನ್ಯಾರೋ ನಮ್ಮಂತಿದ್ದರೂ
ನಮ್ಮಂತಲ್ಲ ಎಂದು

ಕೂತೇ ಬಿಟ್ಟ ಮನದಲ್ಲಿ
ಊರು ಬಿಟ್ಟು ಮೈಸೂರು
ಬೆಂಗಳೂರು ಎಂದು ತಿರುಗಾಡುತ್ತಾ
ಬಂದವರೊಬ್ಬಬ್ಬರೇ
ಸಿಪಾಯಿಗಳ ಸಾಲಿನಲ್ಲಿ
ಅಂಬೇಡ್ಕರ್ ಜ್ಯೋತಿಭಾ ಪುಲೆ
ನೆಹರು ಲೋಹಿಯಾ
ಶಾಹೂ ಮಹಾರಾಜಾ
ಮತ್ಯಾವುದೋ ದೇಶದಲ್ಲಿನ
ಲೆನಿನ್ – ಮಾರ್ಕ್ಸ್ ಮಾವೋತ್ಸೆತುಂಗ
ಅಲ್ಲಲ್ಲ, ಇಲ್ಲೇ ನಮ್ಮ ಸುತ್ತ ಮುತ್ತಲ
ಇದ್ದ ಬಸವ, ಅಕ್ಕಮಹಾದೇವಿ
ಮಡಿವಾಳ ಮಾಚಯ್ಯ, ದೇವರ ದಾಸಿಮಯ್ಯ
ಅಂಬಿಗರ ಚೌಡಯ್ಯ, ಡೋಹರ ಕಕ್ಕಯ್ಯ
ಮಾದಾರ ಚೆನ್ನಯ್ಯ, ಸೂಳೆ ಸಂಕವ್ವೆ
ಕಾಳವ್ವೆ, ಮತ್ತೆ ಆಯ್ದಕ್ಕಿ ಲಕ್ಕಮ್ಮ
ಎಲ್ಲರ ಜೊತೆ ಜಾಣ ಅಲ್ಲಮ
ಚೆನ್ನ ಬಸವಣ್ಣ
ಸಾಲು ಸಾಲು ಹೀಗೆ ಬೆಳೆಯುತ್ತಾ....!
ಅವರಿಟ್ಟ ಉಸಿರು ಕಟ್ಟಿಕೊಟ್ಟ ಬಸಿರು
ನನ್ನೊಳಗಿನೊಳಗನ್ನು
ನೀರು ಪೊರಕೆಯಿಂದ
ತೊಳೆಯುತ್ತಿದ್ದಾರೆ
ನನ್ನ ದಾಟಿ
ಬೆಳೆಯುತ್ತಿದ್ದಾರೆ.

ಸೌಜನ್ಯ : ಎಲೆ ಮುಗಿಲ ಬೆಳಕು ಕವನ ಸಂಕಲನದಿಂದ

# ಇಂದಿಲ್ಲವೇ ಆ ದೇವಮಾನವ

– ಪ್ರೊ, ರಾಮಚಂದ್ರ ಶರ್ಮಾ

ಜ್ಞಾನಭಾನುವು ಮುಳುಗಿ ಕಾವಳವು ಸುತ್ತಿರಲು
ದ್ವೇಷ ಸಾರಥಿಯಾಗಿ ಜಗರಥವ ಹತ್ತಿರಲು
ತುಂಬು ಬಳಕನು ತಂದೆ, ದಾರಿ ತೋರಿದೆ, ತಂದೆ!
ಜಗದ ಬಾಳೊಳು ಬೆರೆತು, ನಾನು ಎಂಬುದ ಕೊಂದೆ
ನೊಂದವರ ಬಂಧು, ನೀ ಕಣ್ಣೀರ ಮಳೆಗರೆದೆ
ಲೋಕದಪರಾಧಗಳ ನೀ ಮುನ್ನಿಸಿದೆ, ಮರೆತೆ
ಸುಗ್ಗಿ ಚಂದಿರನಂತೆ, ಜನಕೆ ಹಿಗ್ಗನು ತಂದೆ
ದೀನ ದಲಿತರ ಸೇವೆಯೊಳು ಸ್ವರ್ಗಸುಖವೆಂದೆ
ಜಗಹಿತಕೆ ದುಡಿದೆ, ಜನ ನಿನಗಿತ್ತ ಫಲವೇನು?
ತುಂಬೊಲವ ತೋರ್ದವಗೆ ಇಳೆ ತೋರಿದೊಲವೇನು?
ಹಿಂಸೆ ಬೇಡೆಂದವಗೆ, ಹಿಂಸೆಯೊಳೆ ಮರಣವೆ?
ಕಟು ನುಡಿಯದವನೆದೆಗೆ ಕಠಿಣತಮಕಬ್ಬಿಣವೆ?

ಬರದೆ ಮಾನವದೇವರಿಳೊಯೊಳುಳಿಯುವ ಕಾಲ?
ಅಥವ ಬಂದಿದೆಯೇನೋ, ಈ ಲೋಕದಳಿಗಾಲ?

ಸೌಜನ್ಯ : ಅಮರ ಬಾಪು ಚಿಂತನ ಮಾಸಿಕ – ನವೆಂಬರ್ – ಡಿಸೆಂಬರ್ 2017

# ತಿಳಿದುಕೋ

– ಶ್ರೀ ಭಕ್ತಿತೀರ್ಥರು

ತಿಳಿದುಕೋ ತಿಳಿದುಕೋ
ಈ ಏಳು ತಿಳಿದುಕೋ
ಗಾಂಧಿ ತಾತನು ಪೇಳಿದ
ಸಪ್ತಪಾತಕ ತಿಳಿದುಕೋ

ಶೀಲವಿಲ್ಲದ ಶಿಕ್ಷಣ
ತತ್ತ್ವರಹಿತ ರಾಜಕಾರಣ
ದುಡಿಮೆ ಇಲ್ಲದ ಸಂಪತ್ತು
ತರುವುದೋ ಮತ್ತು

ಬರಿ ಪೂಜೆ ಪೂಜೆ ನೋಡು
ಅದರೊಳಿಲ್ಲದ ತ್ಯಾಗ
ಮಸಣಕ್ಕೆ ಸಮ ನೋಡು
ಮನಸಿಲ್ಲದ ಭೋಗ

ನೀತಿ ಇಲ್ಲದ ವಾಣಿಜ್ಯ
ಬರೀ ವ್ಯಾಜ್ಯ ತ್ಯಾಜ್ಯ
ಮಾನವತಾ ಶೂನ್ಯ ವಿಜ್ಞಾನ
ಬೆಳಕಲ್ಲೋ ಅಜ್ಞಾನ

ಸೌಜನ್ಯ : ಗಾಂಧೀಜಿ ಅವರು ನಿತ್ಯ ಮಾಡುತ್ತಲಿದ್ದ
ಆಶ್ರಮ ಪ್ರಾರ್ಥನೆ ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ.
ಸಂಗ್ರಹ ಮತ್ತು ಅನುವಾದಕರು : ನರಸಿಂಹ ದಾಬಡೆ

# ಶತಮಾನ ಕಂಡ ಸತ್ಯಾನ್ವೇಷಕ

– ಎ. ರಾಣಿ ಗೋವಿಂದರಾಜು

ಭಾರತ ಸ್ವಾತಂತ್ರ್ಯ ಸಂಗ್ರಾಮದ ನೇತಾರ
ಉಪ್ಪಿನ ಸತ್ಯಾಗ್ರಹಿ, ಅಸಹಕಾರ ಚಳುವಳಿಕಾರ
'ಭಾರತ ಬಿಟ್ಟು ತೊಲಗಿ' ಘೋಷಿತ ಹರಿಕಾರ
ಸತ್ಯ ಅಹಿಂಸೆ, ತ್ಯಾಗ ಶಾಮತಿ ಮೂಲಗಳ ಮಂತ್ರೋಚ್ಚಾರ
ಸಾಮಾಜಿಕ–ಆರ್ಥಿಕ–ರಾಜಕೀಯ ಪರಿವರ್ತನಾ ಚತುರ
ಆಧುನಿಕ ಐತಿಹಾಸಿಕ ತತ್ವ ಸಿದ್ಧಾಂತಿ ನೈತಿಕತೆಯ ಶಿಖರ
ಸರ್ವೋದಯ ಸೌಹಾರ್ದತೆಯ ಅಪ್ರತಿಮ ವೀರ
ಸರಳತೆ ಪ್ರಾಮಾಣಿಕತೆ ಕ್ಷಮಾಗುಣಗಳ ದಯಾಸಾಗರ

ವಿವೇಕ ವಿನಯಗಳ ಮೈಗೂಡಿಸಿಕೊಂಡ ಶಾಂತಿಧೂತ
ವಿಶ್ವವೇ ಒಂದು ಮನೆ–ಕುಟುಂಬ ಎಂದರುಹಿದ ಮಹಾಸಂತ
ಬಡವರ ಹರಿಜನರ ಉದ್ಧಾರಕೆ ಹಗಲಿರಳು ಶ್ರಮಿಸಿದ ಧರ್ಮದರ್ಶಿ
ಅಹಿಂಸೆಯೊಂದೇ ಧೀರರ ಅಸ್ತ್ರ ಎಂದು ಸಾರಿದ ಮಹಾಯೋಧ

ಬಿಟಿಷ್ ನ್ಯಾಯಶಾಸ್ತ್ರ ಪದವಿ ವಿಜೇತ ಆದರೇನು?
ಮಣ್ಣಿನ ಗುಡಿಸಿಲಿನ ವಾಸದಲಿ ವಾಸಿಸುತ
ಸರ್ವೋದಯದ ಏಳಿಗೆಗೆ ಅನವರತ ಶ್ರಮಿಸಿದ
ಧೀರೋದಾತ್ತ ಸತ್ಯಸಂಧತೆಯ ಸಂಕುಲಕೆ
ಶತಮಾನದ ಶ್ರೀಸಾಮಾನ್ಯರ ನಾಯಕರತ್ನ
ಎಂದೆಂದಿಗೂ ಅಮರ ಈ ಮಹಾತ್ಮನ ದೀವಟಿಗೆ

# ಬಾಪುನಿನ ಬಾಳ ಬುತ್ತಿ

– ಅಗುಸ್ತ್ರ ಮಂಜ

ಒಕ್ಕನೆಲ ಸುಧಾಮಪುರಿಯಲಿ ಜನುಮವೆತ್ತಿ
ಸಕ್ಕದದ ಗೀತೆಯ ಅಕ್ಕಡಿಯ ಸಾಲನು ಬಿತ್ತಿ
ತಕ್ಕಡಿಯಂತೆ ದೇಶಿ ನ್ಯಾಯವ ಹಿಡಿದು ಎತ್ತಿ
ಬೊಕ್ಕತಲೆ ಫಕೀರ ಬಂಡಿಯಂತೆ ಇಸ್ಟವ ಸುತ್ತಿ

ಅಕ್ಕಳಿಕೆ ಅಸ್ಪೃಶ್ಯತೆಯ ಸಿಟ್ಟೋರ್ಸೆಯ ಕೆತ್ತಿ
ರಕ್ಕಸವಲೆ ದಾಟಿದಕ್ಕೆ ತಗ್ಗಿಸಲಿಲ್ಲಾ ತನ್ನನೆತ್ತಿ
ಕಕ್ಕನ್‌ಮಕ್ಕ ಕಂಪನಿಗೆ ಸಿಡಿಲಿನಂತೆ ಮುತ್ತಿ
ಸುಕ್ಕವದು ಆರೋಗ್ಯಕ್ಕೆ ಹಾನಿಕಾರದ ಬತ್ತಿ

ಚಿಕ್ಕದರಲ್ಲಿಯೇ ನಕಲಿನ ಕಲೆಯ ಬಿಟ್ಟ ಯತ್ತಿ
ಗಕ್ಕನೆ ಜಳಪಿ ರಾಮನಾಮದ ಮಿಂಚಿನಕತ್ತಿ
ದಿಕ್ಕರಿಸಿ ದುಶ್ಚಟಗಳ ಕೋಲಿನಲಿ ಬದಿಗೊತ್ತಿ
ಲೆಕ್ಕವಿಲ್ಲದಷ್ಟು ಶಾಂತಿ ಪ್ರೀತಿ ಕರುಣೆಗಳ ಉತ್ತಿ

ಠಕ್ಕತನವ ಮೆಟ್ಟಿ ಅಂತರಂಗ ಶುದ್ಧಿಯ ಮೆತ್ತಿ
ನಕ್ಕವರ ಬಾಯಿಗೆ ತುರುಕಿ ಚರಕದ ಹತ್ತಿ
ಮಕ್ಕಳ ಪಾಲನೆಯಲ್ಲಿ ಕಸ್ತೂರ ಬಾ ಗಟಿಗಿತ್ತಿ
ಕಕ್ಕರನಂತೆ ಉಪವಾಸದ ಅಸ್ತ್ರ ಹೂಡಿದ ಜತ್ತಿ

ಹೊಕ್ಕ ಜಾತಿ ಪದ್ಧತಿಯನು ನೆಲಕೆ ಹಾಕಿ ಒತ್ತಿ
ಲೆಕ್ಕದಲಿ ಸೇವೆಯ ಪ್ರತಿಫಲ ಸೇವೆಯೆಂಬ ದತ್ತಿ
ಕಕ್ಕಸು ಹೊರುವ ಹಸುಳೆಗಳ ಸೆಳೆದು ಎದೆಗೊತ್ತಿ
ಪಕ್ಕ ಇದೇ ನನ್ನ ಸತ್ಯಾನ್ವೇಷಣೆಯ ಬಾಳ ಬುತ್ತಿ

# ಗಾಂಧಿಯವರ ಸಂದೇಶ

– ತಿಪ್ಪಯ್ಯ ಮಾಸ್ತರ್

ಸಂದೇಶ ಪೂಜ್ಯ ಗಾಂಧಿಕ – ಎಂಬಂತೆ
ಸಂದೇಶಾ ಪೂಜ್ಯ ಗಾಂಧಿಯರಾ
ಜಗತ್ತಿನ ಮುಂದಿಡುವೆ ನಿದರಾ
ಎದರ ಸಮೂಲವುಚ್ಚರಿಸಿ ಭೂಲೋಕದ ಜನರನೆಚ್ಚರಿಸೀ

ಕೌನ್ಸಿಲದ ಆಶೆಯನು ಬಿಟ್ಟು
ಸ್ವದೇಶಾಭಿಮಾನವನು ತೊಟ್ಟು
ಅಂಶತಾ ಮಾತೃಭೂಮಿಯನು
ಸೇವಿಸಿ ಧನ್ಯನಾಗುವೆನೂ

ವಖಾಲತ್ ಬಿಟ್ಟು ನಡೆಯುವೆನು
ಶಾಲೆ ಕಾಲೇಜು ತ್ಯಜಿಸುವೆನೂ
ಸ್ವದೇಶಿ ವಸ್ತ್ರ ಧರಿಸುವೆನು
ವಿದೇಶಿ ವಸ್ತ್ರ ಬಿಡಿಸುವೆನು

ಅದಾಲತ್ ಕೋರ್ಟು ಬಲು ಚಿಂತೆ
ಮಾಡುವೆನೂ ಗ್ರಾಮ ಪಂಚಾಯಿತಿ
ಕೊರ್ಟಿನ ನ್ಯಾಯ ತಿಳಿಸುವೆನೂ
ಬೀಗಿದ ಕಲ್ಮಷವ ತಿಳಿಸುವೆನೂ

ಜಡಿದ ಬಂದುಕ ತೋಪುಗಳಾ
ಬೆದರುಂಸೀಸು ನಮಗಿಲ್ಲಾ
ಆತ್ಮ ಬಲವೆಂದೆನ್ನುತ ಭೇರಿ
ಹೊಡಿಸುವೆನು ಲೋಕದಲಿ ಸಾರಿ

ಲಡಾಯಿಯ ಸೈನ್ಯಗಳು ಬೇಡಾ
ಬೇಡ ಶಸ್ತ್ರಾಸ್ತ್ರಗಳು ಬೇಡಾ
ಹತ್ತಿ ಬರುವಂಥಾ ಬೆಂಕಿಯನು
ನಂದಿಸುವೆ ನಮ್ಮ ವ್ರತದಿ ನಾನು

ನಮಗೆ ಸ್ವರಾಜ್ಯ ಸಿದ್ದಿಯನು
ಕೊಡುವ ಕೈರಾಟಿಯಿದು ತಾನು
ವಿದೇಶಿ ಮಾಲಿಗಿದು ಮೂಲಾ
ಬೇರುಗಳ ಕೀಳುವದರ ಸಕಲಾ

ಕೃಷ್ಣ ಬಂಧ ವೀರರಾಘವರಾ
ಚರಿತ ಇಸಾ ಮಹಮ್ಮದರಾ
ತಿಲಕ ದಾದಾಬಾಯಿಯವರಾ
ವಾಕ್ಯಗಳ ತತ್ವ ಸಾರಾ

---

ತಿಳಿಸುವ ಕರ್ತವ್ಯ ನಮ್ಮದು ವ್ಯತ್ಯಾಸವಿಲ್ಲದೆ ಈ ಸಭಾದಾಗ
ಹಿಡಿದ ಅದರ ವರ್ತನೂಕ ಮಾಡಿದರ ಸಾರ್ಥಕ ಆತ
ಈ ಜನ್ಮದಾಗ

ಡಪ್ಪಿನೊಳಗಿನ ಪದ ತಪ್ಪ ಆದರ ಸುದ್ದಾ
ಅಪ್ಪಿಕೊಳ್ಳಿರಿ ನಮ್ಮಪ್ಪಗಳಿರಾ
ಶಿಸ್ತಾಗಿ ಕೂತಕೊಂಡ ಚಿತ್ತಿಟ್ಟ ಕೇಳ್ರಿ ನಿಮ್ಮ ಹಿತಾ
ಬಯಸುವ ತತ್ವದ ಕುಶಲಾ

ಸೌಜನ್ಯ : ಹೊಸತು ಜೂನ್ 2017 ಪತ್ರಿಕೆಯಲ್ಲಿ ಶ್ವೇತಾ ಎಂ.ಬಿ. ಅವರ
"ಜನಪದ ಸಂಗೀತ ಮತ್ತು ರಾಷ್ಟ್ರೀಯ ಚಳುವಳಿಗಳು ಎಂಬ ಲೇಖನದಿಂದ
ಆಯ್ದುಕೊಳ್ಳಲಾಗಿದೆ

# ಸರ್ವತ್ರ ಗಾಂಧಿ

– ತಿಪ್ಪಯ್ಯ ಮಾಸ್ತರ

ಗಾಂಧಿಯೇ ಗಾಂಧಿ ಸರ್ವತ್ರ ಗಾಂಧಿ
ಸಂದೇಹಕಾರರನು ನಿಂದಿಸನು ಗಾಂಧಿ
ಮುಟ್ಟಿದವ ತಾ ಗಾಂಧಿ ಭೆಟ್ಟಿಯಾದವ ಗಾಂಧಿ
ನಿಟ್ಟಿಸಿದವರೆಲ್ಲ ಗಾಂಧಿಯ ರೂಪವೋ
ಕಟ್ಟಕಡೆಯಲಿ ಅವರ ಸಂದೇಶವನು ತಂದು
ಮುಟ್ಟಿಸಲು ಕೇಳಿದವರಾಗುವರು ಗಾಂಧಿ

ಹಿಂದೂ ಮುಸಲ್ಮಾನ ಹಿಂದಿ ಕ್ರೈಸ್ತರು ಸಹಿತ
ಒಂದಾಗಿ ಫಾರ್ಶಿಯಹೂದಿಗಳೆಲ್ಲರೂ
ಮುಂದೊರೆಯುತಿರುವಲ್ಲಿ ಸಂಧಿಯಾಗಿಹ ಗಾಂಧಿ
ಕಂದಕನ್ಯರ ಮುಖದಿ ಬೆಳಗುತಿಹ ಗಾಂಧಿ

ಸತ್ಯವಾಡುವ ಗಾಂಧಿ ನಿತ್ಯ ಮರೆಯುವ ಗಾಂಧಿ
ಕತ್ತಲೆಯೊಳಲ್ಲಲ್ಲಿ ಕಾಣುತಿಹ ಗಾಂಧಿ
ಸುತ್ತಲಿನ ದೇಶ ಪರರಾಷ್ಟ್ರದಲಿ ತಾ ಗಾಂಧಿ
ಚಿತ್ರವೆಂದೆನಿಸಿದನು ಚಿದ್ರೂಪ ಗಾಂಧಿ

ದೇಶ ದೇಶಗಳಲ್ಲಿ ದೇವರೆಸುವ ಗಾಂಧಿ
ಕೋಶ ಕೋಶಗಳಲ್ಲಿ ಕರ್ಮ ಗಾಂಧಿ
ದಾಸರಿಗೆ ನಿತ್ಯದಲಿ ಭಾಸವಾಗುವ ಗಾಂಧಿ
ವಾಸವಾಗಿಹ ಹೃದಯಪಟವಲ್ಲಿ ಗಾಂಧಿ

ಕಣ್ಣು ಮುಚ್ಚಲು ಗಾಂಧಿ ಕನಸಿನೊಳು ತಾ ಗಾಂಧಿ
ಮುನ್ನೆರಡು ಮೂರು ಮನೆ ಹಳ್ಳಿಯೊಳು ಗಾಂಧಿ
ಉನ್ನತಾದ್ರಿಯ ಶಿಖರದೊಳಗು ಪಾತಾಳದಾ
ಕೊನ್ನಾರಕಂದರದಿ ಕಾಣಿಸುವ ಗಾಂಧಿ

ಉಣ್ಣುವಾಗಲು ಗಾಂಧಿ ತಿನ್ನುವಾಗಲು ಗಾಂಧಿ
ಸನ್ನುತದಿ ಕುಡಿಯುವಾ ಚಹದೊಳಗು ಗಾಂಧಿ
ಧನ್ಯ ಧನ್ಯರು ತೆಮ್ಮೊಳನ್ಯೋನ್ಯ ಭಾಷಣದಿ
ತನ್ನಿಂದ ತಾನೆ ಹೊರಬೀಳುತಿಹ ಗಾಂಧಿ

ಬುದ್ಧಿಯಲಿ ತಾ ಗಾಂಧೀ ನಿದ್ರೆಯಲಿ ತಾ ಗಾಂಧಿ
ಸಿದ್ಧನಾಗಿರುದ ಪ್ರಸಿದ್ಧ ಗಾಂಧಿ
ಮುದ್ದು ಮೋಹನದಾಸ ಭದ್ರನಾಗಿಹ ಗಾಂಧಿ
ತಿದ್ದಿ ತೋರುವ ತಾನೇ ಶುದ್ಧ ಗಾಂಧಿ

---

ನಿನ್ನ ವಸಂತಕಾಲ ಎಷ್ಟು ಅವರ್ಣನೀಯ
ಹೃದಯದಿಂದ ಹೊರಹೊಮ್ಮಿದರೂ ಕೇಳುವವರಿಲ್ಲ
ನಿನ್ನಿಂದಾಗಲಿ ನಿನ್ನ ಲೋಕದಿಂದಾಗಲಿ ನನಗೇನೂ ಸಂಬಂಧವಿಲ್ಲ
ನನಗೆ ಸಂಬಂಧವಿರುವುದು ನನ್ನ ದೇಶದಿಂದ, ಹಿಂದುಸ್ಥಾನದಿಂದ
ನಿನ್ನ ಹಾಗೆ ಪ್ರಕಾಶಿಸುವ ಹಿಂದುಸ್ಥಾನವನು
ಭಗವಂತ ನನಗೆ ತೋರಿಸುವನೆ?

ಇಡೀ ಲೋಕ ನಿಜ್ಜೆರಗಾಗಿ ನೋಡುತ್ತದೆ ಹಿಂದುಸ್ಥಾನವನು
ಇದರ ಹೊಳಹು ನಾಲ್ಕು ಕಡೆ ಹೊಳೆಯುತ್ತದೆ
ಈ ಸುಂದರ ದೇಶಕ್ಕಾಗಿ ಬಲಿಯಾಗುವೆ ನಾನು
ಧ್ವಂಸಗೊಂಡ ವನದಲ್ಲಿ ವಸಂತ ನೋಡುವೆ ನಾನು!

ಸೌಜನ್ಯ : ತಾಡೋಂಕಿ ಗುಪ್ತಗು – 1910
ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಮುಸ್ಲಿಂ ಮಹಿಳೆಯರ
ಕೊಡುಗೆ ಪುಸ್ತಕದಿಂದ – ಪುಟ 113

# ಗಾಂಧಿ ಎಂಬ ಮಾಯಾದೀಪ

– ಮೀನಾ ಮೈಸೂರು

ಒಂದು ಹಿಡಿ ಮಾಂಸ ಒಂದೆರಡು ಔನ್ಸ್ ರಕ್ತ
ಬೊಜ್ಜು ಬಾಯಲ್ಲಿ ಬ್ರಹ್ಮಾಂಡ
ತುಂಡು ಉಡುಗೆಯ ಅರೆ ಬೆತ್ತಲ ಫಕೀರ
ಕೈಯಲ್ಲೊಂದು ಮಂತ್ರದಂಡ
ಒಮ್ಮೊಮ್ಮೆ ಬರಿಗಾಲಿನಲ್ಲಿ ಬಂಟ ಜಗದೇಕ ವೀರ
ನಮ್ಮ ರಾಷ್ಟ್ರಪಿತ

ಮಕ್ಕಳು ಬಿಕ್ಕಳಿಸಿ ಹರಸಿದ ಕಣ್ಣೀರಧಾರೆ
ಕಡಲು ಸೇರಿ ಉಪ್ಪಾಗಿ
ಹಿಡಿ ಉಪ್ಪು ಗಾಂಧೀಜಿಯ
ಕೈಸೇರಿ ನೈತಿಕ ಸಿಟ್ಟಿನಲಿ
ಹರಳುಗಟ್ಟಿ ಕ್ರಾಂತಿ ಮಾಡಿ
ಬ್ರಿಟಿಷರ ಬೆಚ್ಚಿ ಬೀಳಿಸಿತು

ಸಂಸಾರದ ವ್ಯಾಮೋಹ ತೊರೆದಿದ್ದಕ್ಕೆ
ಗಾಂಧಿ ರಾಷ್ಟ್ರಪಿತನಾದರು
ಗಾಂಧಿ ನೂತಿದ್ದ
ಖಾದಿ ಖದೀಮರ ಕಿಸೆ ಸೇರಿ
ಗಾಂಧಿ ಟೋಪಿ
ಹಲವು ಅಯೋಗ್ಯರ ಅಹಂಕಾರವಾಗಿ

ಗೆದ್ದಲು ಹತ್ತಿ ತತ್ತ್ವಗಳು
ಅಹಿಂಸೆ ಮೇಲೆ ಹಿಂಸೆ ಸವಾರಿ
ಸಹನೆ ಮೇಲೆ ಅಸಹನೆಯ ತಾಂಡವ ನೃತ್ಯ

ಅಟ್ಟಹಾಸದಿ, ಅಟ್ಟಾಡಿಸುತ್ತ ಅಣಕಿಸಿದವು
ಗಾಂಧಿ ನಿಷೇಧಿಸಿದ್ದ ಅಸ್ಪೃಶ್ಯತೆ
ಸೇಂದಿ–ಸಾರಾಯಿಗಳು
ಬಡ ಬಗ್ಗರ ತಣಿಸುತ್ತಾ, ಮಣಿಸುತ್ತಾ

ಕೆಂಪುಹಾಸಿನ ಮೇಲೆ
ನೃತ್ಯೋತ್ಸವ ನಿತ್ಯ ನಿತ್ಯೋತ್ಸವ!
ದಿನ ದಿನವೂ ಗಾಂಧಿ ಕೊಲೆಯಾಗುತ್ತಿದ್ದಾರೆ
ಮೆಲ್ಲಗೆ ಬೇಡುತ್ತಿರುವೆ
ಗಾಂಧಿ ಎಂಬ ಸಾವಿಲ್ಲದ ಸುಗಂಧದ ಒಳಗಣ್ಣ
ಬೆಳಕ ಕುಡಿ ಬೆಳಗುತ್ತಿರಲಿ ಅನವರತ

ಸೌಜನ್ಯ : ಅಮರ ಬಾಪು ಚಿಂತನ ಮಾಸಿಕ – ಮೇ – ಜೂನ್ 2017

---

ದುಷ್ಟಗುಣದ ಬ್ರಿಟಿಷರನ್ನು ಬಿಟ್ಟು ಇನ್ನು ಫಲ ಇಲ್ಲ
ಮೆಟ್ಟಿ ತುಳಿಯಬೇಕ ಪಾತಾಳಕ
ಕಾಲಕಟ್ಟಿ ಕುಟ್ಟಿ ಅಟ್ಟಬೇಕು ಇಂಗ್ಲೆಂಡಕ
ಎಷ್ಟು ನಿಷ್ಠುರ ಆಡಿದರ ಸಿಟ್ಟ ತಡಿಯದಕ
ಬುದ್ಧಿಗೇಡಿ ಬ್ರಿಟಿಷರನ್ನು ಗದ್ದಿಕೊಂತ ಬಿದ್ದ ರಕ್ತ
ಹದ್ದು ನಾಯಿ ನರಿಗಳಿಗೆ ನೀಡಾಕ

ಸೌಜನ್ಯ : ಹೊಸತು ಜೂನ್ 2017 ಪತ್ರಿಕೆಯಲ್ಲಿ ಶ್ವೇತಾ ಎಂ.ಬಿ.
ಅವರ "ಜನಪದ ಸಂಗೀತ ಮತ್ತು ರಾಷ್ಟ್ರೀಯ ಚಳುವಳಿಗಳು
ಎಂಬ ಲೇಖನದಿಂದ ಆಯ್ದುಕೊಳ್ಳಲಾಗಿದೆ

# ಗಾಂಧೀಜಿ ನಗು ಮಾಸುವುದಿಲ್ಲ

– ಡಾ. ಸತ್ಯಮಂಗಲ ಮಹದೇವ

ಕೈಯಲ್ಲಿನ ಗೆರೆಗಳನ್ನು ಅಳಿಸಲು
ಮಾತಿನ ತೆವಲ ಹಚ್ಚುವ ಪಡೆ ಸನ್ನದ್ಧವಾಗಿದೆ
ನಾಯಕ ಹಸಿವಿಗೆ ರಕ್ತದ ಸಮುದ್ರಗಳ ನಿರ್ಮಿಸುತ್ತಿದ್ದಾನೆ
ಚಲಾವಣೆಯಾಗುವ ಶಬ್ದಗಳನ್ನು ಟಂಕಿಸಲಾಗುತ್ತಿದೆ
ಗದ್ದುಗೆಯ ಮೇಲಿನ ಕಿರೀಟಗಳನ್ನು ಗಿರವಿ ಇಡಲಾಗಿದೆ

ತಲೆತಲಾಂತರದ ಮಾರಾಟದ ವಿಷಯ
ವಿಶ್ವವಿದ್ಯಾಲಯಗಳಲ್ಲಿ ಪಠ್ಯವಾಗುತ್ತಿದೆ
ಹಸಿವಿಗೆ ಅನ್ನವನಿಕ್ಕಿದೊಡೆ ಕಿರೀಟ ಭಗ್ನವಾಗುತ್ತದೆ
ಊರಿನ ಕೇರಿಗಳಲ್ಲಿ ಭೀಮನ ಕೊಲೆನಡೆದಿದೆ
ಮುಳ್ಳಿನ ಕಿರೀಟವಿರಿಸಿಕೊಂಡವರು ಮೊರೆಯಿಡುತ್ತಿದ್ದಾರೆ
ಒನಕೆ ಚಿಗುರುವ ಕನಸು ಬಿದ್ದಿದೆ ಕವಿಗೆ
ಉಪದೇಶ ನಿಲ್ಲಿಸದ ಗುರುವಿಗೆ
ನೊಬೆಲ್ ಪಾರಿತೋಷಕ ಕಾದು ಕೂತಿದೆ

ಗಾಂಧಿಯ ನೆರಳಲ್ಲಿ ಮುಖವಿಟ್ಟುಕೊಂಡವರ
ಪರಾಕುಗಳ ಹೇಳಿಸಲಾಗುತ್ತಿದೆ
ಹೆದ್ದಾರಿಯ ಕ್ರಾಸು ರಸ್ತೆಗಳಲ್ಲಿ ಹೆಮ್ಮನೆಯ ಪಡಸಾಲೆಯಲ್ಲಿ
ಗಾಂಧಿಯನ್ನು ಕೂರಿಸಲಾಗಿದೆ
ಪ್ರತಿಭಟನೆಗಳ ನೋಡಿ ನೋಟ ಗಾಂಧಿ ಮೌನವಾಗಿದ್ದಾನೆ

ಪೊರಕೆ ಹಿಡಿದು ಗುಡಿಸುವುದು ತಂತ್ರವಾಗಿದೆ
ಕಸವಿಲ್ಲದ ನೆಲದಲ್ಲಿ ಮಾತ್ರ ಇವರ ಕೆಲಸ
ನೆಲವಿಲ್ಲದ ಕಸ ತುಂಬಿದ ಬುದ್ಧಿಯೊಳಗೆ
ಗಾಂಧಿ ಇರಲಿ ಅವನೇ ಇರುವುದಿಲ್ಲ
ಮೋಜು–ಮುಲಾಜು ಹಣದ
ಇಲಾಜುಗಳ ಕೊಳೆ ತುಂಬಿದೆ

ದೇಹವನ್ನು ಛಿದ್ರಮಾಡಿರಬಹುದು
ಬುದ್ಧನ ಅಳಿಸಲು ಸಾಧ್ಯವಹುದೆ
ಗಾಂಧಿಯ ನಗು ಮಾಸುವುದಿಲ್ಲ
ಭೂಮಿ ಮೊಳೆಯುವುದ ಮರೆತ ದಿವಸ
ಹೂ ಅರಳುವುದು ನಿಲ್ಲಿಸಿದ ಕ್ಷಣಗಳಲ್ಲಿ
ಗಾಂಧಿ ವಿರಮಿಸುವುದು ಕಾಣುತ್ತದೆ ಎಲ್ಲರಿಗೆ

---

ಗದಗಿನಲ್ಲಿ ಭಗಿನಿ ಮಂಡಲದ ಪರವಾಗಿ ಕಮಲಾಬಾಯಿ ಪಿಸೇಕರ, ತುಕ್ಕಾಬಾಯಿ ಗುರ್ಜರ, ಜಿಂದವ್ವಾ ಕುನ್ನಿಭಾವಿ, ಬಸವ್ವಾ ಗೌಡರ, ಶಾಂತಾಬಾಯಿ ಬೆಟಗೇರಿ, ಸುಂದರಾಬಾಯಿ ನಾಗಪ್ಪನವರ, ಗಂಗಾಬಾಯಿ ಮುಂತಾದವರು ಪ್ರತಿನಿತ್ಯ ಮುಂಜಾನೆ ಪ್ರಭಾತಫೇರಿಯನ್ನು ಅತ್ಯುತ್ಸಾಹದಿಂದ ಹೊರಡಿಸುತ್ತಿದ್ದರು. ಈ ಭಗಿನಿಯರು ಬೆಳಗು ಮುಂಜಾನೆ ಕೈಯಲ್ಲಿ ಧ್ವಜವನ್ನು ಹಿಡಿದು ದೇಶಭಕ್ತಿ ಗೀತೆಗಳೊಂದಿಗೆ ಸಾಗುತ್ತಿದ್ದರು.

ಭಾರತ ದೇಶ ಕೊರಗುತಿಹದು
ಕರುಣೆಯಿಂದ ಪೊರೆಯೋ ದೇವಾ
ಧರ್ಮಭೂಮಿ ಕರ್ಮ ಭೂಮಿ
ನರ್ಮವಾಯಿತು ದಾಸ್ಯದಿಂದ
ಸತ್ಯಾಗ್ರಹವು ಗಾಂಧೀ ತತ್ವಾ
ಸತ್ಯದಿಂದ ಕಾದುತಿಹೆವು ನಿತ್ಯ ನಿನ್ನ
ನಂಬಿದೆವು ಸತ್ಯದೇವಾ ಪೊರೆಯೋ ಬೇಗಾ

ಸೌಜನ್ಯ : ಡಾ. ಜೆ.ಎ. ಬಿರಾದಾರ ಅವರ 'ಮುಂಬಯಿ ಕರ್ನಾಟಕದಲ್ಲಿ ಸವಿನಯ ಕಾನೂನುಭಂಗ ಚಳವಳಿ' ಪುಸ್ತಕದಿಂದ ಆಯ್ಕೆಮಾಡಲಾಗಿದೆ

# ಕನಸುಗಳಿಲ್ಲದಾಗಿವೆ ಗಾಂಧಿ

– ಡಾ. ರಾಮಲಿಂಗೇಶ್ವರ (ಸಿಸಿರಾ)

ಮಹಾತ್ಮನಾಗುವುದು ಹೇಗೆಂದು
ಗಾಂಧಿಯನ್ನೆಲ್ಲವನು ಓದಿಕೊಂಡಾಗೆಲ್ಲ
ನಿದ್ದೆಯೂ ಕನಸುಗಳೂ ಇಲ್ಲವಾಗಿವೆ
ನಮ್ಮ ಸುತ್ತಲೂ ಜಂಡಗಳೇ ತುಂಬಿ ತುಳುಕುತ್ತಿವೆ !
ಮಹಾತ್ಮನ ದೇಹ ಕೌತುಕವ ಗಮನಿಸಿದಾಗ
ನಮ್ಮೊಳಗಿನ ಅಹಂಗಳೆಲ್ಲವೂ ಹೊರಬಾರದೆ
ಒಳಗೊಳಗೆಯೇ ಇಣುಕಿ ನೋಡುತ್ತಲೇ
ಅವಿತುಕೊಳ್ಳುತ್ತವೆ, ನಾಚಿಕೆಯಾಗುತ್ತದೆ !
ಸತ್ಯದ ದಾರಿ ಹುಡುಕುತ್ತಾ ಹೊರಟಾಗ
ನಿನ್ನ ಹಿಂದೆ ಬಂದವರೆಷ್ಟು ಲೆಕ್ಕವಿಲ್ಲ ಮಹಾತ್ಮ
ಆಡಿಕೊಂಡವರೆಷ್ಟು! ಅರಚಾಡಿದವರೆಷ್ಟು!
ಬೊಬ್ಬೆ ಹೊಡೆದವರೆಷ್ಟು
ಈಗ ಅವರೆಲ್ಲಾ ಲೆಕ್ಕವಿಲ್ಲ
ನಿನ್ನ ಹೆಸರಿಗೆ ಸಾಟಿ ಬೇರಾರೂ ಕಾಣೆ!

ನೆಲಮೂಲ ಬಲಮೂಲ ಆಕಾಶದೆತ್ತರ
ಜಗವೆಲ್ಲ ಸುತ್ತಿ ಬಂದರೂ
ಸದ್ದಿಲ್ಲದೆ ನಿಶ್ಯಬ್ಧದೊಳಗೆ
ಬಾಂಬು ಬಂದೂಕು ಗ್ರೇನೆಡ್‌ಗಳು
ಸದ್ದು ಮಾಡುತ್ತಿವೆ ಮಾತುಗಳ ಬಂಡವಾಳದಲ್ಲಿ !

ನಿನ್ನಷ್ಟು ತಾಳಿ ಬಾಳಿದ ಜನರು ಶಾಂತಿ ಕಾಣುತ್ತಿಲ್ಲ
ನೆಮ್ಮದಿಯ ಅರಸಿ ಗುಡ್ಡ-ಗಾಡು, ಬೆಟ್ಟ ಅಗೆದರೂ
ಅವರಿಗೆ ಮುಕ್ತಿ ಸಿಗುತ್ತಿಲ್ಲ !!

ಮಹಾತ್ಮನಾಗಿ ಹೋದೆ ನೀನು
ಗಾಂಧಿಗಿರಿಯು ನಮಗೆ ಕಾಣುತ್ತಿಲ್ಲ
ಮತ್ತೆ ಹುಟ್ಟಿ ಬಾ ಎಂದು ಕೇಳುತ್ತಿಲ್ಲ
ದೇವರಾಗಿ ಬಾ ಎಂದು ಹೇಳುತ್ತಿಲ್ಲ
ಶಾಂತಿ-ಸಹನೆ-ಸಹಬಾಳ್ವೆ ಇಲ್ಲವಾಗಿದೆ
ಯಾರಿಗೂ ಒಳಗೊಳಗೆ

ಬುದ್ಧ ಬಸವ ಗಾಂಧಿ ಅಂಬೇಡ್ಕರ್ ನಮಗೆ ರಸ್ತೆಗಳಲ್ಲಿ,
ಜಯಂತಿಗಳಲ್ಲಿ. ಪ್ರತಿಮೆಗಳಲ್ಲಿ ಕಲ್ಲಾಗಿ ಹೋಗಿದ್ದೀರಿ
ದಾರಿ ಕಾಣದೆ ದಿಕ್ಕು ತೋಚದೆ
ಜಾತಿ-ಮತ-ಧರ್ಮಗಳ ಸಂಕೋಲೆಗಳಲ್ಲಿ ಬಂಧಿಸಲ್ಪಟ್ಟಿದ್ದೀರಿ

ಗಾಂಧೀಜಿ ನಮಗಿನ್ನು
ನಿದ್ದೆಯೂ ಬಾರದೆ ಕನಸಗಳೂ ಇಲ್ಲದೆ
ವಿಲ ವಿಲ ಒದ್ದಾಡುತ್ತಾ
ಹುಡುಕುತ್ತಿದ್ದೇವೆ ನಿನ್ನ ಹೆಸರ ಪ್ರತಿಮೆ, ಜಯಂತಿ, ರಸ್ತೆ
ದಾರಿ ಕಾಣದಾಗಿದೆ ಓ ಮಹಾತ್ಮ

ಸೌಜನ್ಯ : ಬಾಪು ಪ್ರಪಂಚ – ಸೆಪ್ಟಂಬರ್-ಅಕ್ಟೋಬರ್ 2018

# ಗಾಂಧಿಯ ವೇಷ

– ಪ. ಗ. ಭಟ್ಟ ಹರಾಹುರಿ

ಒಂದು ದಿನಾ ನಾ ಬಂದೆನು ಪೇಟೆಗೆ
ಗಾಂಧಿಯ ವೇಷದಲಿ ಕೈಯಲಿ ಕೋಲು ಹಳೆ ಚಾಳೀಸು
ಹೊದ್ದಿಹ ಎರಡೆ ಬಟ್ಟೆಯಲಿ
ಗಾಂಧಿ ತಾತ ಬಂದನು ಇಲ್ಲಿ
ನಡೆಯಿರಿ ನಮಿಸುವ ನಾವು
ಬಂದಿತು ಹಿಂದೆ ಬಾಲರ ದಂಡು
ಒಗೆಯುತ ಚಿಣ್ಣಿದಾಂಡು
ಅರರೆ ನೀನು ಬದುಕಿಹೆ ಏನು?
ಅಂದೆ ಕೊಂದರು ಎಂದರು ನಿನ್ನ
ಗೊಣಗುತ ಹಿರಿಯರು ಹಾಗೆ ನಡೆದರು
ನಿನ್ನಯ ಭೋದನೆ ಅಪ್ಪಟ ಚಿನ್ನ
ಬದುಕಿಗಿಂತ ಸಾವೇ ಚೆನ್ನ
ತಕಲಿಯೇ ಇಲ್ಲಾ ನಕಲಿಯೆ ಎಲ್ಲಾ
ಟೊಂಕದೊಳಿಲ್ಲ ಗಡಿಯಾರ
ಒಂದೆ ಎರಡೇ ಅಪರಂಪಾರ
ನಿನ್ನಯ ಶಿಷ್ಯರ ಬಡಿವಾರ
ಸಿಡುಕುತ ನುಡಿದನು ಗಡ್ಡವ ನೀವುತ
ಎಂದಿಗೂ ನಿನ್ನ ಕ್ಷಮಿಸನು ಅಲ್ಲಾ
ಹಿಂದಿನ ಬೀದಿಯ ಅಬ್ದುಲ್ಲಾ
ಆರತಿ ಎತ್ತಿರೇ ರಾಷ್ಟ್ರದ ಪಿತನಿಗೆ
ರಾಷ್ಟ್ರದ ಕ್ಷೋಭೆಗೆ ಶಾಂತಿಯ ನೀಡಲು
ಬಂದನು ಮತ್ತೆ ಭೂಮಿಯಲಿ
ಎಂದಳು ಮುಗ್ಧೆ ಸುಮಂಗಲಿ
ಹೋಗೋ ಗಾಂಧಿ ಯಾತಕೆ ಬಂದಿ
ದೇಶವನೊಡೆಯಲು ಹಾಕಿದೆ ನಾಂದಿ

ಇನ್ನೂ ಇದ್ದರೆ ಮತ್ತುಪವಾಸ
ಸಾಕು ಭೂಮಿಯ ಸಹವಾಸ
ಎನ್ನುತ ಗದ್ದಲ ಎಬ್ಬಿಸುತ್ತಿದ್ದರು
ಬೀದಿಯ ತುದಿಯಲಿ ಕೆಲಮಂದಿ
ಕುಡಿಯಿರಿ ಕುಡಿಯಿರಿ ಮೇಕೆಯ ಹಾಲು
ಜೊತೆಗೆ ಕೊಡುವೆನು ಕಡಲೆಯ ಕಾಳು
ಕರೆದನು ಹತ್ತಿರ ಕುರುಬರ ಕುವರ
ನೆನೆಸುತ ಗಾಂಧಿಯ ಜೀವನ ಪ್ರವರ
ಅಲ್ಲೆ ಇದ್ದನು ಮುದಿಮುದಿ ಮುದುಕ
ಇತ್ತ ಗುಲಾಬಿ ಹೂವು
ಮಣ್ಣಿನ ದಿಬ್ಬವ ತೋರುತ ಹೇಳಿದ
ಇಲ್ಲೆ ನಿನ್ನಯ ಠಾವು
ಗಾಂಧಿತತ್ವವ ಹೆಡೆಮುರಿ ಕಟ್ಟಿ
ಹಾಕಿದರಿಲ್ಲಿ ಮಣ್ಣಿನೊಳು
ಕಾಯುತಲಿದ್ದೆನು ಬೇಲಿಯ ಕಟ್ಟಿ
ನೀರೂ ಇಲ್ಲ ಗಾಳಿಯೂ ಇಲ್ಲಾ
ಆದರೂ ಅರಳಿವೆ ಹೂವುಗಳು
ಕಡಿದರೂ ಹುಗಿದರೂ ಸಾಯದು ಮಾತ್ರ
ನಿಮ್ಮಯ ಏಕಾದಶ ಸೂತ್ರ
ಅದನೆ ಹೇಳುತ ನಿಂತಿಹೆ ನೋಡಿ
ಚಂದದ ವಾಸನೆ ಈ ಗುಲಾಬಿ
ಪುಣ್ಯವು ಬೇಕು ಸಿಗಬೇಕಿದ್ದರೆ
ಇದಕಿದೆ ದೊಡ್ಡ ಗುಲಾಬಿ
ಬತ್ತಲೆಯಾದೆನು ವೇಷವ ಕಳಚಿ
ನಗುತಲಿ ನಿಂತಿದೆ ನಡುಬೀದಿ
ಕಳಚಿತು ಕೋಲು ನಡುಗಿತು ಕಾಲು
ಕಣ್ಣಿಗೆ ಕಾಣದು ಹಾದಿ
ಎಲ್ಲೆಲ್ಲೂ ಮಂಜಿನ ಬೀದಿ

ಸೌಜನ್ಯ : ಸುಧಾ – 17 ಅಕ್ಟೋಬರ್ 2019

# ನಾನೂ ನಿನ್ಹಂಗಾ ಅಜ್ಜ

– ಡಾ. ಬಿ.ಟಿ. ಲಲಿತಾ ನಾಯಕ್

ಥೇಟ್ ನಿನ್ಹಂಗ ಅಜ್ಜಾ ನಾನೂ
ಬೋಳು ತಲಿ ಬಿಳಿದೊಗಲು
ಅಗಲ ಕಿವಿ ಕೃಷಕಾಯ ಕಣ್ಣಿಗೆ ಹಾಕಿಹೆನು ಹೊಳೆವ ಕನ್ನಡಕ
ದೇಶಕ್ಕಾಗಿ ದುಡಿದವ ನೀ ವೇಷ ಬಲು ಸರಳ
ಅಹಿಂಸೆ ನಿನ್ನ ಮಂತ್ರ ಸತ್ಯ ಭಗವಂತ
ನನ್ನ ನಿನ್ನೊಳಗೆ ಕೂದಲೆಳೆ ಫರಕು
ಅಹಿಂಸೆಯೊಳಗಿನ 'ಅ'ಕಾರ ಬಿಟ್ಟು ಹೋಗ್ಯದ ಅಜ್ಜ
ಸತ್ಯದ ಜೋಡಿ ಸಂಪರ್ಕ ಬೆಳೆಸೈತೆ
ಉಳಿದೆಲ್ಲಾ ಬಾಳಾಟ ಬರೋಬ್ಬರಿ ಸಾಗೈತೆ
ಜಾತಿಭೇದ ತೋರಿದಳೆಂಥ
ಹೆಂಡತಿಯ ದಂಡಿಸಿದವ ನೀ
ನಾನೂ ಅಷ್ಟೇ ಅಜ್ಜ
"ಅಪ್ಪನ ಮನಿಯೇ ಬೇರೆ ತಾತಾ ಎಂಬುದು ತರವೆ?"
ಎಂದಾಕೆ ಒದರಾಡಿದಾಗ ಬಾರುಕೋಲಲಿ ಬಡಿದವನು
ದಮ್ಮಯ್ಯ ಎಂದರೂ ಬಿಡದವವು
ಆದರೆ 'ಬಾ' ಮಂತನಸ್ಥರ ಮಗಳು
ನೀ ಹೇಳಿದಕೆ ಹೂಂ ಗುಟ್ಟಿದಳು
ನನ್ನಾಕೆ ಘನ ಬೆರಕೆ ಸುಟುಕೊಳದು ಸತ್ತಳು
ಅದಕ್ಕೇ ನಾನೀಗ 'ಸರಳ ಹಿಂದಿನ' ವಾಸಿ
ಅರೆಹೊಟ್ಟೆ ಅರಬಟ್ಟೆ ನಿನ್ನದೇ ರೀತಿ
ಕೈಯೊಳಗೆ ಕೊಟ್ಟವರೆ ಆಸರೆಯಾಗಿ ಬಡಿಗಿ
ತಲಿಮ್ಯಾಲೆ ಇಟ್ಟವರೆ ನಿನ್ನ ಬಳಿ ಟೋಪಗಿ

ಸೌಜನ್ಯ : ಕನ್ನಡ ಕವಿ ಕಾವ್ಯ ಕುಸುಮ – 14 ಬಿ.ಟಿ. ಲಲಿತಾನಾಯ್ಕ ಅವರ ಆಯ್ದ ಗೀತೆಗಳು ಕವನ ಸಂಕಲನದಿಂದ ಆಯ್ದುಕೊಳ್ಳಲಾಗಿದೆ

# ಪ್ರೀತಿಯ ಬಾಪು

– ವಿಜಯಲಕ್ಷ್ಮಿ ವೈ. ಕಲಾಲ

ಮರಳಿ ಬಾ ಗಾಂಧಿ
ರಾಮ ರಾಜ್ಯ ಕನಸು
ನನಸು ಮಾಡಲು
ನೀ ಕಂಡ ಕನಸು
ನನಸಾಗದೆ ಉಳಿದಿದೆ

ಅಂದು ಸ್ವಾತಂತ್ರ್ಯ ಕೊಡಿಸಿ
ಪಾರಾತಂತ್ರ್ಯ ಬಿಡಿಸಿ
ಪರಾವಲಂಬನೆ ಅಳಿಸಿ
ಸ್ವಾವಲಂಬನೆ ಬೆಳಸಿ

ದೇಶದ ರಕ್ಷಣೆಗಾಗಿ
ಜನರ ಉಳಿವಿಗಾಗಿ
ದೀನರ ಏಳ್ಗೆಗಾಗಿ
ದಲಿತರ ಉದ್ಧಾರಕ್ಕಾಗಿ
ಮರಳಿ ಬಾ ಗಾಂಧಿ

ಪ್ರೀತಿಯಾ ಬಾಪು ಆಗಿ
ಭಾವೈಕ್ಯತೆಯ ಹೊನಲಾಗಿ
ಅಹಿಂಸೆಯ ಕಣಜವಾಗಿ
ನೀನಿದ್ದೆ ಮಹಾತ್ಮನಾಗಿ

# ಗಾಂಧಿಯ ಪಕ್ಷಿ

– ನಳಿನಾ ಡಿ.

ಮನಕುಲುಕಿ ಕುಕ್ಕಿ
ರೆಕ್ಕೆ ಬಡಿದು ಹೆಕ್ಕಿ ತೆಗೆಯುತಿದೆ
ಒಂದೊಂದೇ ಹುಳಗಳ
ಅಹಿಂಸೆಯ ಪಾರಿವಾಳವೊಂದು
ಬಡ ದೇಹ ಭೂಮಿಗೊರಗಿದೊಡ ಆ ಕ್ಷಣ
ಉಸಿರು ನಿಲ್ಲುವ ಮೊದಲೇ
ತಾತನೆದೆಯಿಂದ ಹಾರಿ ಬಂದಿತು
ನೋಡ ನೋಡುತಾ ಬೆಕ್ಕಸ ಬೆರಗಾಗುತಿರೆ,
ಜಗದ ಬೆಳಕಿನಂತೆ ಬೆಳಗುತಿತ್ತು
ಆ ಹಠಾತ್ತಾಗಿ ಹತ್ತಾಗಿ
ನೂರಾಗಿ ನೂರು ಸಾವಿರವಾಗಿ
ಕಣ್ಣಿಗೆಟುಕದಷ್ಟು ವಿಸ್ತಾರವಾಗಿ
ಹಾರಿ, ನಭ ಮುಟ್ಟಿ ಮರಳಿ
ಜನಮನದೆದೆಯೊಳಗೆ ಸೇರಿ ಹೋಗುತಿಹುದಂಥ
ಬಹು ಬೇಗ ಕೊಂದ ಕೈಯಲಿ ಕಾರುಣ್ಯ ಮೂಡಿ
ನೊಂದಂತೆ ನಡೆದಾಗ, ಹೆಜ್ಜೆ ತಡವಿರಸಿದ್ದು ದಿಟ
ಗಾಂಧಿಯೆದೆಯ ವಿಶ್ರಾಂತ ದೇಹದ
ಪಕ್ಷಿಯದು ಅವಿಶ್ರಾಂತ ದುಡಿತ
ಲೋಕದಯುದ್ಧಕೂ ಹಾರಿ
ಜನರ ಪಕ್ಕೆಲುಬುಗಳ ನಡುವೆ ಸೇರಿ
ಗಾಂಧಿಯ ತತ್ವಗಳು ಉಸಿರಾಡುತಿದೆ ಹಸಿರಾಡುತಿದೆ
ಮಾನವೀಯತೆ, ಸರ್ವೋದಯ, ಸಹಬಾಳ್ವೆ

ಹಾರುತಿಹುದು, ಏರುತಿಹುದು ಮುಗಿಲ ದಾಟಿ
ಸಮುದ್ರಖಂಡಗಳ ಸುತ್ತಿ ಒಂದೇ ಸಮನೆ

ಸುಧೀರ್ಘ ಕಾಲದವರೆಗೆ
ಮುಂದುವರಿಯುತಲೇ ಇಹುದು
ಬಾಳ ಧರ್ಮ ಸಾರುತಲೇ ಸಾಗುತಿಹುದು
ಬದುಕಿನ ಮರ್ಮ ತಿಳಿಸುತಿವುದು
ಬಗ್ಗಿಸುತಿಹ ವಿತಂಡಿಗಳ
ಅರಿವಿಂಗೆ ಗುರುವಾದವರೆದೆಯ
ಪಕ್ಷಿ ಮರಳಿ ಮರಳಿ
ಹಾರುತಲೇ ಇಹುದು
ದ್ವೇಷಕೆ ಪ್ರೀತಿಯ ಅಶಾಂತಿಗೆ ಶಾಂತಿಯ
ಗದ್ದಲಕೆ ಮೌನವಾ
ಅನ್ಯಾಯಕೆ ನ್ಯಾಯವ
ಹಂಚುತ ಹರಡುತಾ
ಪ್ರಾಂಜಲ ಮನದಿ ದಿಗಂತ
ಮುಖಿ ಹಾರುತಿಹುದು
ತಿರುಗಿ ನೋಡದೆ, ತಲೆ ತಗ್ಗಿಸದೆ
ದೇವನೊಲಿದಂತೆ ಹಾರುತಲೇ ಇಹುದು
ಮನುಜನೆಗಳ ಹೊಕ್ಕು,
ಹಾರುತಲೇ ಇಹುದು

---

ಪುಣ್ಯಭಾರತವನು ಸುಲಿದು, ಜನರ ಶಕ್ತಿಯನು ಸೆಳೆದು
ಉಪ್ಪಿಗೆ ಕರವ ಹಾಕಿದಂಥ, ವೈರಿಗಳನು ಕಾದು ನಿಂತ
ಅಂಕೋಲೆಯವರು ನಾವು ಪರಮಧನ್ಯರು

– ದಿನಕರ ದೇಸಾಯಿ

# ಗಾಂಧೀ ಗಾಂಧೀಜಿಯನ್ನು ಕಂಡಂತೆ

– ಡಾ. ಹೆಚ್.ಎಸ್. ಸುರೇಶ್

ತರಗತಿ ತಪಾಸಣೆಯ ಸಮಯ ಪದವೊಂದ ತಪ್ಪಾಗಿ ಬರೆದಾಗ
ತುದಿಗಾಲಿನಲಿ ನನ್ನ ಎಚ್ಚರಿಸಿ ತಿದ್ದಿಕೊಳಲು ತಿಳಿಸಿದಾಗ
ನಕಲು ಮಾಡಲು ಮನ ಒಪ್ಪದ ಕ್ಷಣ
ನಾ ಆದನಂತೆ ಗಾಂಧೀ !

ಕದ್ದು ಮಾಂಸವನುಂಡು ಸೇದಿ ಸಿಗರೇಟ್ ತುಂಡು
ತಪ್ಪೆಂಬ ಅರಿವಿನಲಿ ಅಪ್ಪನಿಗೊಂದು ಪತ್ರ ಬರೆದು
ಅವರತ್ತ ಕಣ್ಣೀರ ಮುತ್ತು ಹನಿಗಳ ಧಾರೆ
ಬಿದ್ದು ಪತ್ರದ ಮೇಲೆ
ಶುದ್ಧ ಆದೆನು ನಾನು ಎಂದೆನಿಸಿದಾಗ
ನಾ ಆದನಂತೆ ಗಾಂಧೀ !

ಮಾರಿಟ್ಸ್ ಬರ್ಗ್ ರೈಲು ನಿಲ್ದಾಣದಲಿ
ಡಬ್ಬಿಯಾಚೆ ಹೊರದಬ್ಬಿದಾಗ
ನಡುಗುತ್ತ ಮುದುಡಿಕೊಂಡಿದ್ದ ಆ ರಾತ್ರಿ
ಅಪಮಾನದಗ್ನಿಯಲಿ ಬೆಂದು
ನಾ ಆದನಂತೆ ಗಾಂಧೀ !

ಆಯಾತದ ಬಟ್ಟೆ ಸುಟ್ಟು ಕೈಮಗ್ಗದ ಖಾದಿ ತೊಟ್ಟು
ತುಂಡು ಪಂಚೆಯನುಟ್ಟು ಮೈಲುಗಳ ನಡೆದುದಕ್ಕೆ,
ಜೈಲುಗಳ ತುಳಿದುದಕ್ಕೆ ಸಂಡಾಸುಗಳ ತೊಳೆದುದಕ್ಕೆ
ಮುಂಡಾಸು ನೀರಿನಲಿ ತೇಲಿಬಿಟ್ಟುದುದಕ್ಕೆ
ನಾ ಆದನಂತೆ ಗಾಂಧೀ !

ಸತ್ಯಾಗ್ರಹ ಆಶ್ರಮದ
ಸ್ಪೃಶ್ಯಾಸ್ಪೃಶ್ಯ ಸಂದಿಗ್ದದಲಿ
ನೀಲಿ ಬೆಳೆದವರ ನೋವಿನಾಳದಲಿ
ದುಂಡು ಮೇಜಿನ ಹಿಂದೆ
ದಂಡಿ ಯಾತ್ರೆಯ ಮುಂದೆ
ಕಾಯಿದೆಯ ಭಂಗಕ್ಕೆ ಕರೆಕೊಟ್ಟ ಕಾರಣಕೆ
ಸತ್ಯಾಗ್ರಹ ಸೃಷ್ಟಿಗೆ ಸರ್ವೋದಯ ದೃಷ್ಟಿಗೆ
ನಾ ಆದನಂತೆ ಗಾಂಧೀ !

ನೌಖಾಲಿಯ ನೆತ್ತರು ಬಸಿದ
ನೆಲದ ನೊಂದವರ ಜತೆ
ಒಂದಾದಾಗ, ಹಿಂಸೆಗೆ ನೊಂದಾಗ,
ಗುಂಡಿಗೆಗೆ ಬಿದ್ದ ಗುಂಡಿಗುತ್ತರವಾಗಿ
ಹೇ ರಾಮನೆಂದಾಗ
ನಾ ಆದನಂತೆ ಗಾಂಧೀ !

ನಾನು ಗಾಂಧೀ ಆದದ್ದು,
ಆಗಬೇಕಾಗಿ ಬಂದದ್ದು,
ಒಂದೇ ದಿನ, ಒಂದೇ ಕ್ಷಣ, ಅದು
ಆಗಸ್ಟ್ 15 ರ ಮಧ್ಯರಾತ್ರಿ
ನಾನೊಬ್ಬ ಸತ್ಯಾರ್ಥಿ,
ಇದು ಮಾತ್ರ ಖಾತ್ರಿ
ಉಳಿದೆಲ್ಲ ಅವರವರು
ಪರಿಭಾವಿಸಿದ ರೀತಿ !

# ಮನುಷ್ಯರೆದೆಯ ಮೀಟಬಾರದ ತಂತಿಗಳನ್ನು

– ಲಕ್ಷ್ಮೀಪತಿ ಕೋಲಾರ

"ಅವರು" ಮನುಷ್ಯರೆದೆಯ ಮೀಟಬಾರದ ತಂತಿಗಳನ್ನು ಮೀಟುತ್ತಿದ್ದಾರೆ
ಶ್ರುತಿ ಲಯಗಳೇ ಮುಗ್ಗರಿಸಿದ ವಿಲಯನಾದಕ್ಕೆ
ತಾಂಡವಿಸುತ್ತಿದ್ದಾರೆ – ಕಾಲವ ಕಾಲವಾಗುವಂತೆ
ಹೂತ ಸತ್ಯಗಳೊಂದಿಗೆ ಕನಸುಗಳೂ ಕಾಲಗತವಾಗುವಂತೆ
ಚಿಗುರು ಜೀವಗಳುರುಳಿ ಕೊಳೆತು ಗೊಬ್ಬರವಾಗಿ
ಗೊಬ್ಬರವೇ ಪವಿತ್ರ ಖಾದ್ಯದ ಭ್ರಮೆಯಾಗುವಂತೆ
ಗಾಳಿಯೂ ತನ್ನ ಪಾಳಿ ಬದಲಿಸಿದೆ – ನೀರು
ಕೆನ್ನೀರನ್ನೇ ಗಟಗಟಿಸಿದರೂ ರವರವ ದಾಹವಿಂಗುತಿಲ್ಲ!
ಮಣ್ಣು ಇತಿಹಾಸ ಪುರಾಣವಾಗಿ – ಪುರಾಣವೂ ಹೈರಾಣವಾಗಿ
ತರ್ಕ ತುಕ್ಕುಗಟ್ಟಿ ಗುಜರಿಯ ಗೋರಿ ಸೇರಿದೆ
ಅಮಲಿನೋತ್ಕಟಕ ಮಲಿನತೆಗಂಜಿದೆ 'ಪರ'ದ ಧರ್ಮ
'ಇಹ'ದ ಸರ್ವಾಧಿಕಾರಿ ಉಸ್ತುವಾರಿ ಹೊತ್ತಿದೆ
ಅವಧಿ ಮೀರಿದ ಧರ್ಮದೌಷಧಿಯ ನಂಜು
ಅಮೃತವನಣಕಿಸುತ್ತಿದೆ
ಜಗತ್ ಸತ್ಯ ಬ್ರಹ್ಮಮಿಥ್ಯವಾಗಿ ತತ್ತ್ವವಿಡೀ ಉಲ್ಟಾ ಹೊಡೆದಿದೆ!
ನಿಘಂಟಿನಲ್ಲಿ ನಿರುಮ್ಮಳ ನಿದ್ರಿಸುತ್ತಿರುವ
'ಸತ್ಯಾಗ್ರಹ'ದ ಮೇಲೂ ಹಿಂಸಾಚೋದನೆಯ ಮೊಕದ್ದಮೆ!
ಹೊಸೆವ ಮಿಥ್ಯೆಯ ಹೊಸ ಉರುಳು ನ್ಯಾಯದೊಡತಿಗೆ
ಸ್ವನೇತ್ರಗಳನ್ನು ಸ್ವಕುಚ ಮರ್ದನದಂತೆ ಇರಿದುಕೊಂಡು
ಕುರುಡು ರಾಜ್ಯದಲ್ಲಿ ಕತ್ತಲದೊಂದೇ ಕಾನೂನು
ಕಾಣುವ ಬಣ್ಣವೊಂದೇ, ಅಣತಿಯ ಧ್ವನಿ – ಭಾಷೆಯೊಂದೇ
ಏಕಾಣುವಿನಂತೆ ಎಲ್ಲೆಲ್ಲೂ ವಿಕೃತ ವಾಕರಿಕೆಯ ಕ್ಷೀಷೆ

'ಈಶ್ವ ಅಲ್ಲಾ ತೇರೋ ನಾಮ್'
ಹೆ ರಾಮ್! ಹೇ ರಾಮ್

ನಿನ್ನ ಚರವೂ ಹತ್ತಿ-ತಕಲಿಯ ಸಂಗ ತೊರೆದು
ನಕಲಿ ಲೋಹದೆಳೆಗಳನ್ನು ನೂಲುತ್ತಿದೆ
ತಂತ್ರ ಬದಲಾಗಿದ್ದರೂ ಸ್ವದೇಶಿಯೆ!
ಮೇಕ್ ಇನ್ ಇಂಡಿಯಾದ ನವ ಮಾಯೆ
ಬೇಕು ಬೇಕಾದ್ದನ್ನೀಗ ನೇಯಬಹುದು ಸರಪಳಿ... ಸಂಕೋಲೆ...
ನಿನ್ನ ಮಾಂತ್ರಿಕ ಕೋಲಿನ ವರಸೆಯೂ ಬದಲಾದ ಲೀಲೆ!
ಅಹಿಂಸೆಯನ್ನು ಕಲಿಸುತ್ತಿದೆ ಹಿಂಸೆ
ಗಾಳಿಗೂ ನೀಡಲಾಗುತ್ತಿದೆ ಉಸಿರಾಡುವ ಹೊಸ ವರಸೆ!

ಸತ್ಯವ್ರತವೇ ಗೈರಾಗಿ, ರಾಮಜಪವೂ ಸವಕಲಾಗಿ
ಅಪದ್ಧಗಳೇ ಅಪದ್ಧರ್ಮವಾಗಿ
ಮಿಥ್ಯೋಪನಿಷತ್ತೇ ಕಲಿಸಂಹಿತೆಯಾಗಿದೆ
ಬೇರು ಭದ್ರವಿಲ್ಲದ ನಂಬಿಕೆಗಳು - ತಾವೇ ಸ್ವಯಂ
ಈಡಾಡುತ್ತ ಜೀವಾದಿಜೀವಗಳನ್ನು - ಲಜ್ಜೆಗೇಡಿ
ಈಶ್ವರನಾಣತಿಯಿಲ್ಲದೆ ಹುಲ್ಲುಕಡ್ಡಿಯೂ ಕದಲದೆನ್ನುತ್ತಿವೆ
ಉಗ್ರ ದೇವತೆಗಳ ಹತ್ತೂ ಕೈಗಳ ಹತಾರಗಳು
ಅನಿಂದ್ರಿಯ ಕುಲಜರ ಹಸ್ತಗತವಾಗಿ
ನಿಷ್ಪಾಪಿ ನೆತ್ತರು ಚಿಲ್ಲೆಂದು ಚಿಮ್ಮಿ ಹವಿಸ್ಸಾಗುತ್ತಿದೆ
ವಿಶ್ವವೊಂದೇ ಅನಂತವಲ್ಲ; ಜನರ
ಮೂರ್ಖತನವೂ ಅನಂತವಾದುದು
ಎಂದ ಜ್ಞಾನಿ ವಿಜ್ಞಾನಿಯ ಹಂಗಿಸುವಂತೆ ಅದೇ 'ಅವರು
ಮನುಷ್ಯರೆದೆಯ ಮೀಟಬಾರದ ತಂತಿಗಳನ್ನು
ಮೀಟಿಯೇ ಮೀಟುತ್ತಿದ್ದಾರೆ.
ಅಂದು ಗೋಡ್ಸೆ ನಿನ್ನೆದೆಗೇ ಕೈತೂರಿ ಮೀಟಿದಂತೆ
ಹೇ ರಾಮ್! ಹೇ ರಾಮ್!!

ಸೌಜನ್ಯ : ಮಯೂರ ಮಾಸಿಕದಿಂದ ಆಯ್ದ ಕವನ ಅಕ್ಟೋಬರ್ 2018

# ಸುಮೋದವಿಲ್ಲ ಪ್ರಮಾದವಿಲ್ಲ

– ಲಲಿತಾ ಸಿದ್ದಬಸವಯ್ಯ

ಎಷ್ಟೊಂದು ಸುಲಭ ಇತ್ತು ಸಾರ್
ನಿಮ್ಮ ಮೇಲೆ ಪದ್ಯ ಬರೆಯೋದು, ಗದ್ಯ ಸೈತ ಅಷ್ಟೇ
ಮೇಷ್ಟ್ರು 'ಓಂಗೇಳಿ ಹಂಗ' ತಿರುಗೋದೆ ತಡ
ದಡಬಡ ದಡಬಡ ಬರೆದುಬಿಡ್ತಿದ್ವಿ, ಹಾಡೂ ಪ್ರಬಂಧ
ಒಂದೊಂದ್ಸಾರಿ ಆ ಹಾಡಿಗೆ ಡ್ಯಾನ್ಸೂ
ಇವರೇ ನಮ್ಮ... ಇವರೆ ನಮ್ಮ...
ಒನ್ ಟೂ ಥ್ರೀ, ಥ್ರೀ ಟೂ ಒನ್, ಒನ್ ಟೂ ಥ್ರಿ

ರೆಡಿಮೇಡ್ ಅಂಗಡಿಗೆ ಹೋಗಿ ಅಂಗಿ ತಂದ ಥರ
ಎಷ್ಟೊಂದು ರೆಡಿ ಪದಪುಂಜಗಳು ಹ್ಯಾಂಗರುಗಳ ಮೇಲೆ
ಝಘಘ ಮಘಘ ಮುತ್ತು ಮಾಣಿಕ್ಯಗಳು ಸಿಗ್ತಿದ್ದು ಸೇರುಗಟ್ಟಲೆ
ಎಗ್ಗಿಲ್ಲದೆ ಬಳಸಿ ಬರೀತಿದ್ದೆವು ರೀಮುಗಟ್ಟಲೆ

ಇಲ್ಲಪ್ಪ ನಾಚಿಕೆಯೇನಾಗ್ತಿರಲಿಲ್ಲ
ಅವರಿವರು ಬಳಸಿದ್ದೆ ನಾವೂ ಬಳಸಿದೆವೂಂತ ಅಲ್ಲ,
ಹಿಮಾಲಯದ ಬಗ್ಗೆ ಬರೀರಿ ಅಂದ್ರೆ ನಾನೂ ಅಷ್ಟೇ ನೀವೂ ಅಷ್ಟೇ
ಆ ಶಿಖರ, ಆ ಎತ್ತರ, ಆ ಘನತೆ, ಆ ಭವ್ಯತೆ, ಆ ಬಿಳುಪು..
ಆ ಆ ಆ ಆ ಅವೆಲ್ಲ ಬಿಟ್ಟು ಏನು ಬರೀತೀರ್ರೀ ಬೇರೆ
ಕ್ಷಿಪೆಂತ ಬದಲಾಯ್ತು ಈ ಹಿಮಾಲಯ
ಇದು ಕುಳ್ಳು, ಇದು ಸುಳ್ಳು ಇದು ಮೋಸ, ಇದು ಕಪ್ಪ
ಈ ಈ ಈ ಈ ಇವೆಲ್ಲ ಬರ್ದೀರ್ರೇನ್ರೀ
ಸುಮ್ನಿರ್ರಿ ಸಾಕು ನಾನು ಸಾರ್ ಹತ್ರ ಮಾತಾಡ್ತಿದ್ದೆ

ನೋಡಿ ಸಾರ್ ಹೀಗೆ ಹೀಗೆಂದು ನಾವೇನು ಬರೆದೆವೋ
ೀವದಾಗಿರಲೆ ಇಲ್ಲ ಅಂತಿದಾರಿವರು
ನಾವೀಗ ಮೊದಲಿನ ಹಾಗೆ ರೆಡಿಮೇಡ್ ಅಂಗಡಿ
ಆಶ್ರಯಿಸುವಂತಿಲ್ಲ; ಅವೆಲ್ಲವೂ ಮುಚ್ಚಿಸಲ್ಪಟ್ಟಿವೆ
ಅನುಮಾನದ ಮೇಲೆ
ಇನ್ನು ಇವರು ದಿನಕ್ಕೊಂದು ಮೊಳ ನೇಯ್ದು ಕೊಡುವ
ಅವರವರ ಮೂಗಿನ ಗಾತ್ರದ ಕರ್ಚೀಫುಗಳ ಆಶ್ರಯಿಸಿ
ಹೊಲೆಯಲಾರೆವು ಪದ್ಯ

ಸುಮೋದದಿ ಬರೆದಿದ್ದ ಕೈಯೀಗ ತಡವರಿಸುತ್ತಿದೆ
ಪ್ರಮೋದದಿ ಹಾಡಿದ ಕೊರಳು ಕಳ್ಳಬೀಳ್ತಿದೆ
ಬಾಪು ಅಂತಿದ್ದ ನಾಲಿಗೆ 'ಸಾರ್'ಗೆ ತಿರುಗಿದೆ
ಕಾಲ ಕಂಡ ಕಾಗೆ ರಾಗಿ ತಿಂದಿತಂತೆ
ಹಂಗಾಗಿದೆ ಕವಿ ಬಾಳು;
ಕ್ಷಮಿಸುವಿರಾ ನನ್ನಯ್ಯ?

ಸೌಜನ್ಯ : ಮಯೂರ ಮಾಸಿಕದಿಂದ ಆಯ್ದ ಕವನ ಅಕ್ಟೋಬರ್ 2018

---

ನೀವು ಏನು ಮಾಡುತ್ತೀರಿ ಎನ್ನುವುದು ಮುಖ್ಯವಲ್ಲ. ನೀನು ಏನನ್ನಾದರೂ ಮಾಡುತ್ತಿದ್ದೀರಿ ಎನ್ನುವುದೇ ಮುಖ್ಯ ಏಕೆಂದರೆ ನೀವು ಮಾಡಲಿಲ್ಲ ಎಂದರೆ ನಿಮಗಾಗಿ ಯಾರೂ ಅದನ್ನು ಮಾಡಲಾರರು.

**– ಮಹಾತ್ಮ ಗಾಂಧಿ**

# ಒಂದು ಸಂವಾದ

– ಬಿ.ಎಂ. ಹನೀಫ್

ಒಂದು ಕಣ್ಣಿಗೆ ಸ್ವಚ್ಛ ಇನ್ನೊಂದು ಕಣ್ಣಿಗೆ ಭಾರತ
ಸ್ವಚ್ಛ ಭಾರತದ ಐಡಿಯಾ ಹೇಗಿದೆ ಗಾಂಧಿ ತಾತ?
ಸ್ವಚ್ಛ ಇದ್ದಲ್ಲಿ ಭಾರತ ಇಲ್ಲ, ಭಾರತ ಇದ್ದಲ್ಲಿ ಸ್ವಚ್ಛವಿಲ್ಲ
ನನ್ನ ಕನ್ನಡಕ ಎಂದು ಮರಳಿ ಕೊಡುತ್ತೀರಪ್ಪ?
ನೀ ನೂತ ಖಾದಿಯನ್ನೇ ದಿನವು ಧರಿಸುತ್ತೇವೆ
ಎಲ್ಲ ಕಚೇರಿಗಳಲ್ಲಿ ನಿನ್ನ ಚಿತ್ರ ತೂಗುಹಾಕಿದ್ದೇವೆ
ಖಾದಿಯನ್ನೇ ಯಾರು ನಂಬದಂತೆ ಮಾಡಿದ್ದೀರಲ್ಲ?
ನೋಟು ಬದಲಿಸಿದರೂ ನಿನ್ನ ಫೋಟೋ ಬದಲಿಸಿಲ್ಲ
ಗ್ರಾಮರಾಜ್ಯ ಯೋಜನೆಗೆ ನಿನ್ನ ಹೆಸರೇ ಇಟ್ಟಿದ್ದೀವಲ್ಲ
ಓಟು ಹಾಕಲು ನೀವು ಆ ನೋಟೇ ಕೇಳುತ್ತೀರಲ್ಲ
ಸುಳ್ಳು ಲೆಕ್ಕಗಳ ಗ್ರಾಮರಾಜ್ಯಕ್ಕೆ ನನ್ನ ಹೆಸರೇಕಪ್ಪ?
ಎಲ್ಲ ಊರಲ್ಲಿ ನಿನಗೊಂದು ರಸ್ತೆ, ಚೌಕದಲ್ಲೊಂದು ಪ್ರತಿಮೆ
ಸದಾ ನಿನ್ನ ಸ್ಮರಣೆಗೆ ಇನ್ನೇನು ಬೇಕು ತಾತ?
ಆ ರಸ್ತೆಯುದ್ದಕ್ಕೂ ಬಾರು, ತಿರುವಿನಲ್ಲಿ ಕೆಂಪುದೀಪ
ನನ್ನ ಊರುಗೋಲು ಕೊಟ್ಟರೆ ಊರು ಬಿಡುತ್ತೇನಪ್ಪಾ
ಇಲ್ಲ ತಾತ, ನೀವು ನಮ್ಮ ನಡುವೆಯೇ ಇರಬೇಕು
ನಿಮ್ಮ ಹುಟ್ಟು ಸಾವುಗಳನ್ನು ನಾವು ಸಂಭ್ರಮಿಸಬೇಕು
ನಿಮ್ಮ ಕನ್ನಡಕವನ್ನು ಮರಳಿ ಕೊಡಬಹುದಿತ್ತು ನಿಮಗೆ
ಅದರೊಳಗೆ ಕನ್ನಡಿಯಿಲ್ಲ, ಕೊಟ್ಟರೆ ನಿಮಗೇನು ಕಾಣಿಸಲ್ಲ
ಮಾತು ಮರೆತ ಗಾಂಧಿ ಕುಸಿದು ಕುಳಿತಿದ್ದಾರೆ
ಮಾತು ಬಲ್ಲ ಮಂದಿ ಕೈಬೀಸಿ ನಗುತ್ತಿದ್ದಾರೆ
ಸ್ವಚ್ಛ ಭಾರತದ ರಾಯಭಾರಿ ಬೀದಿ ಗುಡಿಸುತ್ತಿದ್ದಾನೆ
ಅವನ ಮನೆಯಲ್ಲಿ ಕಸ ಹೊಡೆಯಲು ಆಳುಮಕ್ಕಳಿದ್ದಾರೆ

# ಮಹಾತ್ಮ ಗಾಂಧಿ

– ಡಾ. ಪ್ರದೀಪ್‌ಕುಮಾರ್ ಹೆಬ್ರಿ

ಮೊಗದ ಮುಗ್ಧ ನಗೆ
ಪುಟ್ಟ ಹಣತೆಯ ಬೆಳಕ ಕುಡಿ
ಜಗದ ತೇಜ ತುಂಬಿಕೊಂಡಂತೆ
ನಗೆ ಬೆಳಕಿನಲಿ ಹರಸುವಂತೆ

ಕಡ್ಡಿಯಾಕಾರದ ದೇಹ
ಭಾರತಭೂಮಿಯಲೊಂದು ಸಮೃದ್ಧ ತೆನೆ
ನೆಲದ ಫಲವಂತಿಗೆ ತುಂಬಿಕೊಂಡಂತೆ
ಬೆಳೆ ಬೆಳಕಿನಲಿ ಹರಸುವಂತೆ

ಚರಕದ ಸದ್ದು
ಬೇಗೆ ಬಯಲಿನಲಿ ಬೀಸಿಬರುವ ತಂಗಾಳಿ
ಸಪ್ತ ಸಾಗರದ ಜಲತುಂಬಿಕೊಂಡಂತೆ
ಹನಿ ಬೆಳಕಿನಲಿ ಹರಸುವಂತೆ

ಮುಂದಿಟ್ಟು ಒಂದೊಂದು ಹೆಜ್ಜೆ
ಮಹಾಕಾವ್ಯದ ಅಮರ ಪಂಕ್ತಿಗಳು
ಭೂತ ಭವಿಷ್ಯ ವರ್ತಮಾನವ ತುಂಬಿಕೊಂಡಂತೆ
ಭಾವ ಬೆಳಕಿನಲಿ ಹರಸುವಂತೆ

ಮಹಾತ್ಮ ಗಾಂಧಿ
ಜಗದೆಲ್ಲ ಶಕ್ತಿ ಸೇರಿ ನಳನಳಿಸಿ
ಶಾಂತಿಗೀತೆಯ ನಿನದಿಸುತಿರುವಂತೆ
ಆಸೆ ಬೆಳಕಿನಲಿ ಹರಸುವಂತೆ

ಸೌಜನ್ಯ : ಗಾಂಧಿ ಭವನ ವಾರ್ತಾ – ಸೆಪ್ಟಂಬರ್ – ಅಕ್ಟೋಬರ್ 2018

# ಸ್ವಾಭಿಮಾನಿ

– ಭಾಗ್ಯಲಕ್ಷ್ಮಿ ಮಗ್ಗ

ರಾಟೆ ತಿರುವುತ ಭರಟೆಯಿಂದ ಚಕ್ರವ
ಸುತ್ತುತ್ತಿರುವ ನೀನು ಕಷ್ಟ ಜೀವಿ
ರಾಜ್ಯಗಳು ಬಂದು ಹೋದರೂ ರಾಜ
ಕಾಯಕದಲ್ಲಿ ಮಗ್ನ
ದಾರಗಳ ಬೇಕಾದಂತೆ ಹೊಸೆದು ಹಂತ
ಹಂತವಾಗಿ ಸುತ್ತುತ್ತ
ಕಂತೆಯಾಗಿ ಸರಕು ಕೊಡುವೆ ತುತ್ತಿನ
ಚೀಲ ತುಂಬುವೆ
ಮನೆಯಲ್ಲೇ ಮನದುಂಬಿ, ಓರಿದುಂಬಿ
ಗತ್ತಿನಿಂದಲೇ ಬದುಕನು ಸಾಗಿಸಿರುವೆ
ಗಾಂಧಿ ಮಾರ್ಗದಲ್ಲಿ ನೀನು ನಡೆದು
ಧನ್ಯನಾಗಿರುವೆ
ಸ್ವಾಭಿಮಾನಿ ನೀನು ನಿಜದ ಸಾರ್ಥಕ
ಬದುಕು ನಿನ್ನದು
ಮನೆಯ ಹೊರೆಗೆ ದೈನಿಕದ ಕಾಯಕ ಈ
ಬದುಕು ಎಲ್ಲರಿಗೂ ಪ್ರೇರಕ

# ಗಾಂಧಿ ಜಯಂತಿ

– ಚೈತ್ರ ಶಿವಯೋಗಿಮಠ

ಪ್ರತಿಯೊಬ್ಬರಲ್ಲೂ ದೇವರಿದ್ದಾನೆ
ಶಾಂತಿ, ಅಹಿಂಸೆಯಲ್ಲಿ ಅವನಿದ್ದಾನೆ
ಎಂದ ಗಂಧಿ ತಾತ ಇಂದು
ಗೋಡೆ ಮೇಲಿನ ಪಟದಲ್ಲಿದ್ದಾನೆ

ಪ್ರೀತಿ, ಕರುಣೆ, ಮನುಜತೆ ಎಂದಾತ
ಇಂದು ಬರಿಯ ನೋಟಿನಲ್ಲಿದ್ದಾನೆ
ಸತ್ಯ, ನಿಷ್ಠೆ, ಧರ್ಮ ಎಂದಾತ
ಇಂದು ಬರಿದೆ ಭ್ರಷ್ಟರ ಕೋಟಿನಲ್ಲಿದ್ದಾನೆ

ರಾಮ ರಾಜ್ಯದ ಕನಸು ಕಂಡಾತ
ಇಂದು ಎಷ್ಟೋ ಅನಾಚಾರಗಳಿಗೆ ಮೂಕ ಸಾಕ್ಷಿಯಾಗಿದ್ದಾನೆ
ಸ್ವರಾಜ್ಯವೆಂಬ ನನಸೂ ಕಂಡಾತ
ಇಂದು ದುರ್ವ್ಯಸನಗಳ ದಾಸ್ಯದ ಮೂಕ ಪ್ರೇಕ್ಷಕನಾಗಿದ್ದಾನೆ

ಎಲ್ಲವನ್ನೂ ಬದಲಿಸಲಾಗದೇ ಇರಬಹುದು
ಎಲ್ಲರೂ ತಮ್ಮ ಪಾತ್ರ ಸರಿಯಾಗಿ ನಿರ್ವಹಿಸಬಹುದು
ಸಮಾಜದ ಸ್ವಾಸ್ಥ್ಯ ಉತ್ತಮಗೊಳಿಸುವುದು
ಮನೆಯಲ್ಲಿ ಸೌಹಾರ್ದತೆಯಿಂದಿದ್ದು ಶುರು ಮಾಡಬಹುದು

ಎಲ್ಲರನ್ನೂ ಪ್ರೀತಿಸದಿದ್ದರೂ, ದ್ವೇಷಿಸುವುದು ಬೇಡ
ಯಾರಿಗೂ ಮನಸಾರೆ ಬಯಸುವುದು ಬೇಡ ಕೇಡ
ಅಂದು ದಿಟವಾಗಿಯೂ ಆಚರಿಸಿದಂತೆ ನೋಡ
ಹುಡುಗ ಗಾಂಧಿ ತಾತನಿಗೆ ಹುಟ್ಟುಹಬ್ಬದ ಹಾಡ...

# ಗುಜರಾತಿನ ಸುಪುತ್ರ

– ಎಸ್. ವಿಜಯ ಗುರುರಾಜ

ಗುಜರಾತಿನ ಸುಪುತ್ರ
ಕಸ್ತೂರ್ ಬಾರ ಬಾಳಮಿತ್ರ
ಆಫ್ರಿಕನ್‌ರ ಹಕ್ಕುಗಳಿಗಾಗಿ ಹೋರಾಡಿ
ಅಜೇಯನಾದ ಬ್ಯಾರಿಸ್ಟರ್

ಮೇಲು ಕೀಳೆಂಬ ಕತ್ತಲೆಯ ಕಳೆದು
ಐಕಮತ್ಯ ಸಾಧಿಸಿದ ಸಾಧಕ
ಸಬರ್ಮತಿ ಆಶ್ರಮದಿ ನೆಲೆಸಿ
ಚರಕದಿ ನೂಲು ನೇಯ್ದ ಗುರಿಕಾರ
ಮಹೋನ್ನತ ಧ್ಯೇಯಗಳ ಹರಿಕಾರ

ಉಪ್ಪಿನ ಸತ್ಯಾಗ್ರಹದ ದಂಡೀಯಾತ್ರೆ
ಕೈಗೊಂಡ ದಂಡನಾಯಕ
ಉಪ್ಪಿನ ಸತ್ಯಾಗ್ರಹದಿ ಪಾದ ಸವೆಸಿ
ಅಸ್ಪೃಶ್ಯತೆಯ ನಿವಾರಿಸಿ
ಮದ್ಯಪಾನ ಚಳುವಳಿ ಮುನ್ನಡೆಸಿದ ಮಹಾತ್ಮ

ಕಸ್ತೂರ್ ಬಾ ಆಶ್ರಮದ ಆಶ್ರಯದಾತೆ
ಹರಿಜನ ಅನಾಥೆ ಲಕ್ಷ್ಮಿಯ ಲಾಲಿಸಿದ ಮಾತೆ
ಸೇವಾಗ್ರಾಮದ ಕರ್ಮಭೂಮಿಯ
ಕುಷ್ಠರೋಗಿಗಳ ಶುಶ್ರೂಶಕಿ

ಖಾದಿಯ ಒರಟಿನಲಿ ಮೃದು ಮನಸ ಸಾಧ್ವಿ
ಧರ್ಮ ತ್ಯಾಗ ಸೇವಾ ಸಂಘರ್ಷಗಳಲಿ

ಬಾಪುವಿನ ಬಲಗೈ ಆದ ಬಾ
ಭಾರತಾಂಬೆಯ ಸೆರೆ ಬಿಡಿಸಲು
ಬ್ರಿಟಿಷರ ಕಪಿಮುಷ್ಠಿ ಸಡಿಲಿಸಲು
ಸೆರೆಮನೆಯೇ ಮನೆಯಾಗಿಸಿದ
ಬಾಪು ಬಾರ ಜೀವನ ಯಾನ

ಸ್ವಾತಂತ್ರ್ಯ ತಂದಿತ್ತು ಸ್ವಾತಂತ್ರ್ಯ ಗೀತೆ ಹಾಡಿ ದಣಿದ
ಬಾಪೂ ಹೇ ರಾಮ್ ಹೇ ರಾಮ್ ಎನ್ನುತ
ಅಮರನಾದ ನಮ್ಮ ಮಹಾತ್ಮ ಗಾಂಧಿ

---

ಕಣ್ಣು ತೆಗೆದಾ ನೋಡಿರಣ್ಣಾ ಚಿನ್ನದಂಥಾ ಹಿಂದೂಸ್ಥಾನ
ಮಣ್ಣುಗೂಡಿ ಆಗಿ ಹೋಯಿತಪ್ಪಾ ಮಸಣ
ಸಂಪನ್ನವಾಗುವಂಥ ಯೋಚನಾ
ಇನ್ನು ನಾವು ಮಾಡದಿದ್ರ ಉಳಿಯೋದು ಕಠಿಣಾ
ಅದಕ್ಕೆ ಹುಟ್ಟಿ ಬಂದಿದಾನ ಮಹಾತ್ಮಗಾಂಧಿ ಮೋಹನಾ

ತಕ್ಕಡಿ ಹಿಡಕೊಂಡು ಬೇಹಾರ ಮಾಡುತ
ಬಿಳುಪಾದ ಪರಕೀಯ ಜನರೆಲ್ಲರು ಬಂದು
ಕಕ್ಕಸ ಬಡುತಲಿ ಕೂಡಿದರು
ನಮ್ಮ ಉಕ್ಕುವ ನಾಡನು ಕೆಡಿಸಿದರು
ಯುಕ್ತಿಯ ಬಲದಿಂದ ನೆಕ್ಕುತ ರಾಜ್ಯವ
ರಾಜಕಾರಣವನ್ನು ಭರದಿ ಹೂಡಿದರು
ಮಾತರಂ ! ವಂದೇ ಮಾತರಂ

ಸೌಜನ್ಯ : ಹೊಸತು ಜೂನ್ 2017 ಪತ್ರಿಕೆಯಲ್ಲಿ ಶ್ವೇತಾ ಎಂ.ಬಿ.
ಅವರ "ಜನಪದ ಸಂಗೀತ ಮತ್ತು ರಾಷ್ಟ್ರೀಯ ಚಳುವಳಿಗಳು
ಎಂಬ ಲೇಖನದಿಂದ ಆಯ್ದುಕೊಳ್ಳಲಾಗಿದೆ

# ಬಂದ ಬಂದ ಗಾಂಧಿ ತಾತ

– ಶ್ರೀಶೈಲ ಬಿರಾದರ್ (ಸಂಗಮತಯನಶ್ರೀ)

ಬಂದ ಬಂದ ಗಾಂಧಿ ತಾತ
ದೇಶ ಕಾಯ್ವ ಯೋಧನೀತ
ಸತ್ಯ ಶಾಂತಿ ಅಹಿಂಸೆ ತತ್ವ
ನುಡಿದಂತೆ ನಡೆದ ರಾಷ್ಟ್ರಪಿತ

ಕೈಯಲ್ಲಿ ಕೋಲು ಹಿಡಿದು ಈತ
ಹೊಡೆಯಲಿಲ್ಲ ಯಾರಿಗೂ ಎತ್ತಿ
ದೇಶಕ್ಕಾಗಿ ದುಡಿಯಲೆಂದು
ಹಿಡಿದುಕೊಂಡ ಬೆತ್ತ

ಒಂದು ಕೆನ್ನೆಗೆ ಏಟು ತಿಂದು
ಮತ್ತೊಂದು ಕೆನ್ನೆ ತೋರಿನಿಂತ
ಹಿಂಸೆ ಮಾಡುವ ಕಟುಕ ಮನಸ್ಸಿಗೆ
ಅಹಿಂಸೆಯಿಂದಲೇ ಗೆದ್ದು ತೋರಿದ

ದೇಶದ ದಾರಿದ್ರ್ಯ ತೊಲಗಲು
ತಾನು ಮೊದಲು ಅರೆಬೆತ್ತಲಾದ
ಚರಕ ತಿರುವಿ ನೂಲನೆಯ್ದು
ಸ್ವದೇಶಿಯತೆಗೆ ಕರೆಯ ನೀಡಿದ

ಚಾಲಾಕಿ ಬುದ್ಧಿ ಬ್ರಿಟಿಷರಿಗೆ
ಚಾಟಿಯಂತೆ ಏಟು ಬೀಸಿದ
ಅವರ ಕಾರ್ಯಕೆ ಸೊಪ್ಪು ಹಾಕದೆ
ಹಠಹಿಡಿದು ನಿಂತ ದೇಶ ಸೇವೆಗೆ

ಮಾಡು ಇಲ್ಲವೆ ಮಡಿ ಘೋಷ ನುಡಿದು
ಆಡಿದಂತೆ ಮಾಡಿ ತೋರಿದ
ಸತ್ಯಾಹಿಂಸೆಗಳ ಪ್ರಯೋಗದಿ
ಕಲಿತನಕೆ ಮೆರುಗು ತಂದ ಗಾಂಧಿ

ಕರಿಯರು ಬಿಳಿಯರು
ಮೇಲ್ವರು ಕೆಳವರು
ಇಲ್ಲ ಎಲ್ಲರೂ ಸರ್ವಸಮರು
ಎಂದು ಸಾರಿದ ಮಹಾತ್ಮ ನೀ

ನಿನ್ನ ಕಾಯ ಈಗ ಮಾಯ
ಅರಿಯದಿರು ನಿನ್ನ ಧ್ಯೇಯ
ಜಗಕೆ ನೀನು ಮಹಾಮಯ
ಶರಣು ಮಹಾತ್ಮನೇ ಮುಗಿವೆ ಕೈ

---

ಸ್ವರ್ಗದ ಆಸೆಯಲ್ಲಿ ಮಿಂದಿದೆ ಮನಸ್ಸು ನಮ್ಮದು
ಭಗವಂತನ ಕೃಪೆಯಿಂದ ಹಿಂದೂಸ್ತಾನ ದೇಶ ನಮ್ಮದು
ಹೇಳಲು ನಾವು ಹಿಂದಿ ದೇಶಭಕ್ತಿಯೇ ಧರ್ಮ ನಮ್ಮದು
ಗೊತ್ತಿದ್ದರೂ ಏಕೆ ಕೇಳುತ್ತೀರಿ ಪರಿಚಯ ನಮ್ಮದು
ದೇಶಕ್ಕಾಗಿ ಹರಿದರೆ ಹರಿಯಲಿ ರಕ್ತ ನಮ್ಮದು
ಇಚ್ಛೆಯಿಂದ ಬಲಿಯಾಗಲಿ ಪ್ರಾಣ ನಮ್ಮದು

ಸೌಜನ್ಯ : ತರಾನಾ–ಎ–ಇತ್ತೆಹಾದ್ ಕವಿತೆಯಲ್ಲಿ
ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಮುಸ್ಲಿಂ ಮಹಿಳೆಯರ ಕೊಡುಗೆ
ಪುಸ್ತಕದಿಂದ – ಪುಟ 130

# ಮಹಾತ್ಮ

– ಜಯಂತಿ ಚಂದ್ರಶೇಖರ್

ಭಾರತಾಂಬೆಯ
ಪ್ರಿಯ ಸುತ
ಇಂದಾಗಿರುವ
ಗಾಂಧಿ ರಾಷ್ಟ್ರಪಿತ!

ಸ್ವಾತಂತ್ರ್ಯ ಸಮರಕ್ಕೆ
ಸ್ವ ಸೇವೆಯ ತೇರು ಮಾಡಿ
ಸತ್ಯಾಗ್ರಹಗಳ ಚಕ್ರ ಉರುಳಿ
ಅತ್ಯಾಚಾರನಾಚಾರದಶ್ವಗಳಿಗೆ
ಸತ್ಯ ಅಹಿಂಸೆಯ ಹಗ್ಗ ಕಟ್ಟಿ
ಕೋಟಿ ಎದೆಯ ಈಟಿ ಮಾಡಿ
ಜಾತಿ ಭೇದ ಜೀತ ತೊರೆದು
ಸಮಾನತೆಯ ಗೀತೆ ಸಾರಿ
ಆತ್ಮಸ್ಥೈರ್ಯವೆಂಬ ಬಿಲ್ಲಿಗೆ
ಉಪವಾಸಗಳ ಬಾಣಹೂಡಿ
ಹಿಡಿದು ಅಹಿಂಸಾಸ್ತ್ರ ಕೊಂದು
ವೈರಿಯ ಹೃದಯಾಸ್ತ್ರ...!
ವೈಭವದಿ ಪಡೆದ ವಿಜಯಾಸ್ತ್ರ

ಕೃಶ ದೇಹದ ತೇಜೋಪುಂಜ
ಕಿತ್ತೊಗೆಯಿತು ಹೆತ್ತೊಡಲಿಗಂಟಿದ ನಂಜ...!
'ಒಂಟಿಯಾಗಿ ನಡೆ' ಎಂದ
ತಾ ಒಂಟಿಯಾಗಿ ನಡೆದಾಗ
'ಹೇ ರಾಮ್' ಕೊನೆಗಂದ...

ಆತ್ಮಗಳ ಆತ್ಮವಾದ ಆ ಮಹಾತ್ಮ...
ತವರೆದೆಗೆ ತಂಪೆರದು..
ಭಾರತಾಂಬೆಯ ಪ್ರಿಯಸುತ
ಇಂದಾಗಿರುವ
ಗಾಂಧಿ ರಾಷ್ಟ್ರಪಿತ

---

ನೋಡಿರಿ, ನೋಡಿರಿ ದೂರ ದೂರದ ಕಾಡು ಮೇಡುಗಳಾಚೆ
ಗಿರಿಗಳೂತ್ತುಂಗ ಸಾಲುಗಳಾಚೆ ಕಾದಿದೆ ನಮ್ಮಯ ಭರತಭೂಮಿ
ಅದುವೆ ನಮ್ಮಯ ಜನ್ಮದ ಬೀಡು
ಹಿಡಿದಿದೆ ನಮಗೆ ಆ ನಾಡಿನ ಜಾಡು
ಅಂತಿದೆ ಸೇನೆಯ ವೀರಭಟರ ಹಾಡು ಆಲಿಸಿ ಭಾರತಾಂಭೆಯ ಕರೆ
ಎದ್ದೇಳಿರಿ ತಡಮಾಡುವುದೇತಕೆ, ಝಳಪಿಸಿ ನಿಮ್ಮ ಶಸ್ತ್ರಗಳ
ದಾರಿ ಬೆಳಗಿದ ಹಿರಿಯರ ಹಿಂದಿಂದೆ
ಹೆಜ್ಜೆಯನಿಕ್ಕಿರಿ ರಭಸದಿ ಮುಂದೆ
ಮುಂದೆ ಮುಂದೆ ಸಾಗಿರಿ ನೋಡದೆ ಹಿಂದೆ
ಜಪಿಸುವ ಬಲಿದಾನದ ಮಂತ್ರ, ಬಿದ್ದರೆ ಭೂಮಿಗೆ ಮರಣವನಪ್ಪಿ
ಮಾರ್ಗದ ಧೂಳಿಗೆ ನಮಿಸುವ ಮಾತೆಯನಪ್ಪಿ
ಬದುಕಿದರೆ ಸಾಗುವಾ ದಿಲ್ಲಿಗೆ ವಿಜಯದಿ ವೀಕ್ಷಿಸಿ
ದಿಲ್ಲಿಯ ಮಾರ್ಗ ಅದೇ ಸ್ವಾತಂತ್ರ್ಯದ ಮಾರ್ಗ, ಚಲೋ ದಿಲ್ಲಿ

– ವಸಂತ ಬಾಪಟ

## ಮಹಾತ್ಮನಿಗೆ

– ಕುವರ ಯಲ್ಲಪ್ಪ

ವಿದೇಶದಲ್ಲಿ
ನೀ ಥಳಿಸಿಕೊಂಡದ್ದು
ತುಳಿಸಿಕೊಂಡದ್ದು
ತಳ್ಳಿಸಿ ಕೊಂಡದ್ದು
ಒಳ್ಳೆಯದೇ ಆಯಿತು

ನಿನ್ನದೇ ನೆಲದಲ್ಲಿ
ತುಳಿಸಿಕೊಂಡವರ ನೋವಿಗೆ
ನೀ ಸ್ಪಂದಿಸುವಂತಾಯಿತು

ಆದದ್ದೆಲ್ಲಾ ಒಳಿತೇ ಆಯಿತು

---

## ಗಾಂಧಿ ಜಯಂತಿ

– ಕುವರ ಯಲ್ಲಪ್ಪ

ಮಾತಾಡಿಕೊಂಡವು
ಕುರಿ, ಕೋಳಿಗಳು
ಹುಟ್ಟಿ ಬಾರದಿತ್ತೇ
ನೂರಾರು ಗಾಂಧಿಗಳು
ಬರಬಾರದಿತ್ತೇ
ದಿನದಿನವೂ ಜಯಂತಿ

# ಗಾಂಧಿ ಮಹಾತ್ಮ, ಕಸ್ತೂರಿ ಬಾ ನಡೆದ ಹಾದಿ

– ಪೂರ್ಣಿಮಾ ಮೂರ್ತಿ

ಅಂದು ಆಂಗ್ಲರ ಆಳ್ವಿಕೆಯಲಿ
ಸಿಲುಕಿದ ಜನನಿ ಭಾರತೀಯ
ದಾಸ್ಯ ಶೃಂಖಲೆಯಿಂದ
ಬಂಧ ಮುಕ್ತರನ್ನಾಗಿಸಿದರು
ರಾಷ್ಟ್ರಪಿತ ಗಾಂಧಿ ಮಹಾತ್ಮ

ಸತ್ಯಾಗ್ರಹ ದಂಡೀಯಾತ್ರೆ
ಸೆರೆಮನೆವಾಸ ಅನುಭವಿಸಿ
ಅಹಿಂಸಾ ತತ್ವ ಶಾಂತಿಮಂತ್ರಗಳ
ಕಂಡರು ರಾಮರಾಜ್ಯದ ಕನಸ
ಬರೀಕನಸಾಗಿಯೇ ಉಳಿಯಿತು

ಸತಿ ಶಿರೋಮಣಿ ಕಸ್ತೂರಿ ಬಾ
ಪತಿಯ ಇಚ್ಛೆಗೆ ಇಂಬುಗೊಟ್ಟು
ನಡೆದರು ಅವರ ಹೆಜ್ಜೆಗಳಲಿ
ಹೆಜ್ಜೆಗಳಿರುಸುತು ನಡೆದರು

ಸ್ವದೇಶಿ ಮೋಹದಲಿ ನೇಯ್ದರು
ಚರಕ ಓಡಿದು ಹತ್ತಿ ವಸ್ತ್ರಗಳ
ಘಾತವಾಯಿತು ಎದೆಗೆಗುಂಡು
ಸ್ಥಗಿತಗೊಂಡವು ಚರಕ ತಕಲಿ
ರಾಮ ಸ್ಮರಣೆಯಲಿ ತೆರಳಿದರು
ರಾಮನೊಂದಿಗೆ

# ಮರೆಯದ ರವಿಕಿರಣ

– ಎ.ಕೆ. ಗುರುಸ್ವಾಮಿ

ಅವನಿ(ಭೂಮಿ)ಗವರು ಭಾರತ ಮಾತೆಯ ಸುಪುತ್ರ
ಸತ್ಯ, ಶಾಂತಿ, ಅಹಿಂಸೆಗಳೇ ಅವರ ಗೆಲುವಿನ ಸೂತ್ರ

ಜೀವನ್ಮೃತವಾಗಿತ್ತು ಅಂದು ಭಾರತೀಯ ಸಮೂಹ
ದುರ್ಬರ ನೋವು, ಬವಣೆ, ಎಲ್ಲೆಡೆ ಬರೀ ದ್ರೋಹ

ಅಲುಗಾಡುತ್ತಿತ್ತಂದು ಈ ಭರತ ಭೂಮಿಯ ಬೇರು
ಆದ ಬಲಿದಾನಗಳೆಷ್ಟೋ, ಆದರೂ ಕದಲಿಲ್ಲ ಯಾರು

ಕೋಲ್ಮಿಂಚಿನಂಥಾಯಿತೆಮಗೆ ತಮ್ಮ ದಿವ್ಯ ಆಗಮನ
ತಮ್ಮಿಂದಾಯಿತು ನಮ್ಮೀ ಹಿಂದೂ ದೇಶ ಪಾವನ

ಗುರಿ ತೋರುವ ಮುಂದಾಳಾಗಿ ಬಂದವರು ಗಾಂಧಿ
ಸುಸಂಗತವಾಗತೊಡಗಿದಾಗ ಸ್ವಾತಂತ್ರ್ಯದ ಹಾದಿ

ಭೀಕರ ಬಿರುಗಾಳಿಗೆದುರಾಗಿ ಬಗ್ಗದೆ ನಡೆದರವರು
ಸಿಡಿಮದ್ದು ತುಪಾಕಿಗಳಿಗೂ ಜಗ್ಗದೆ ನಿಂದರವರು

ಅದು ಸದಾ ಮೊನಚಾದ ಮಾತು, ಮಾರ್ಗದರ್ಶನ
ಪರಕೀಯರಿಗವರು ಮಾಡಿಸಿದರು ಸತ್ಯದರ್ಶನ

ಎಂದಿಗೂ ತೋರಲಿಲ್ಲ ರಕ್ತಸಿಕ್ತ ಅಧ್ಯಾಯದ ಹಾದಿ
ಅಗಣಿತ ಜನಶಕ್ತಿಗೆಲ್ಲ ಇದುವೇ ಆಯಿತು ಬುನಾದಿ

ಪ್ರಶಂಸೆಯ ಬಯಸದೆ, ದಬ್ಬಾಳಿಕೆ ಸಹಿಸದೆ
ಸ್ವಾತಂತ್ರ್ಯವ ತಂದಿರಿ ತಾವು, ಅನರ್ಘ್ಯರತ್ನದಂತೆ

ನೊಂದವರಿಗೆ ದೊರಕಿತು ತಮ್ಮಿಂದ ಸಾಂತ್ವನ
ತಂದಿರಿ, ಎಲ್ಲರಿಗೂ ತಾವೇನೋ ಹೊಸತನ

ದರಿದ್ರ, ದೀನ ದಲಿತರತ್ತಿತ್ತು ತಮ್ಮ ಚಿತ್ತ
ಆಕಾಶಕಾಯಗಳೂ ತಿರುಗಿದ್ದವೊಮ್ಮೆ ನಿಮ್ಮತ್ತ

ತಾವೊಂದು ಆಭರಣ, ಮರೆಯದ ರವಿಕಿರಣ
ಇಂದಿಗೂ ತಮ್ಮ ಆದರ್ಶಗಳೇ ಸಿಹಿ ತೋರಣ

ಹುಸಿಯಾಗದಿರಲಿ ತಾವು ಕಂಡ ಹೊಂಗನಸು
ಹಸಿರಾಗಿಯೇ ಇರಲಿ ನವ ಭಾರತದ ಕನಸು

---

ಬಿಡುವಿಲ್ಲ, ಕೆಲಸ ನನಗೆ ನನ್ನ ತೋಟದಲ್ಲಿ
ನಾನು ನನ್ನ ತೋಟದಲ್ಲಿ ಸಮಯ ಕಳೆಯುತ್ತಿದ್ದೇನೆ
ಪರಕೀಯ ಬಂದು ಒತ್ತಿದ ಮುದ್ರೆ ನನ್ನ ದೇಶಕ್ಕೆ
ಇದರಿಂದ ಮನಸ್ಸು ಬಹಳ ವ್ಯಾಕುಲವಾಗಿದೆ
ತೋಟದಲ್ಲಿ ಹಕ್ಕಿಗಳ ಚಿಲಿ-ಪಿಲಿ ಗಾನವನ್ನಾಲಿಸುತ್ತೇನೆ
ತೋಟದಿಂದ ಹೊರಬಂದು ಹೊರಗೆ ಜೀವಿಸಲಿಚ್ಛಿಸುತ್ತೇನೆ
ಮನಸ್ಸಿಗೆ ಶಾಂತಿ ಸಮಾಧಾನ ಹೇಗೆ ಮಾಡಲಿ
ನೋವುಂಡ ನಂತರ ಮನ ಸಮಾಧಾನಗೊಳ್ಳುತ್ತದೆ
ಇದರಿಂದ ಮನ ಸ್ವಲ್ಪ ಹಗುರವಾಗುತ್ತದೆ
ಆಚೆಯಿಂದ ಶಬ್ದಗಳು ಹೊರ ಹೊಮ್ಮುತ್ತಿವೆ
ಮತ್ತೆ ನನ್ನ ಭಾರತ ತಲೆ ಎತ್ತುವುದೆಂದು

ಸೌಜನ್ಯ : ಖದೀಜಾ ಬೇಗಂ
ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಮುಸ್ಲಿಂ ಮಹಿಳೆಯರ ಕೊಡುಗೆ
ಪುಸ್ತಕದಿಂದ – ಪುಟ 132

# ನಮ್ಮ ಬಾಪೂಜಿ

– ಮಹಾಂತೇಶ ಎಸ್. ಪಾಟೀಲ

ಭಾರತ ದೇಶದ ಸ್ಫೂರ್ತಿಯ ಚಿಲುಮೆ
ಮನುಕುಲಕೆ ಆದರ್ಶದ ಗರಿಮೆ
ಜಗದೆಲ್ಲೆಡೆಯೂ ಮನ್ನಣೆ ಪಡೆದಾ
ನಮ್ಮಯ ಬಾಪೂಜಿ ಮಹಾತ್ಮಾ ಗಾಂಧೀಜಿ !!

ಹಿಂದೂಸ್ತಾನದ ಕೀರ್ತಿಯ ಹೆಮ್ಮೆ
ರಾಷ್ಟ್ರಪಿತನಾ ಸ್ಥಾನದ ಹಿರಿಮೆ
ಅದ್ಭುತ ವ್ಯಕ್ತಿತ್ವದ ಆ ಮಹಿಮೆ
ನಮ್ಮಯ ಬಾಪೂಜಿ ಮಹಾತ್ಮಾ ಗಾಂಧೀಜಿ !!

ಬದುಕಿದ ರೀತಿಯೇ ನಮಗಾದರ್ಶ
ದೇಶದ ಜನರಿಗೆ ಮಾಂತ್ರಿಕ ಸ್ಪರ್ಶ
ಇವರನು ನೆನೆದರೆ ಮನಸಿಗೆ ಹರ್ಷ
ನಮ್ಮಯ ಬಾಪೂಜಿ ಮಹಾತ್ಮಾ ಗಾಂಧೀಜಿ !!

ಸತ್ಯ ಅಹಿಂಸೆ ತ್ಯಾಗದ ಹಾದಿ
ಹಿಡಿದು ಸುತ್ತಿದರು ದೇಶದ ಬೀದಿ
ಶಾಂತಿಯಿಂದಲೇ ಜನರನು ತಟ್ಟಿದ
ನಮ್ಮಯ ಬಾಪೂಜಿ ಮಹಾತ್ಮಾ ಗಾಂಧೀಜಿ !!

ಬಡವನ ಬವಣೆಗೆ ಬಟ್ಟೆ ಬಿಟ್ಟರು
ಚರಕವ ತಿರುಗಿಸಿ ಖಾದಿಯ ಉಟ್ಟರು
ದಲಿತೋದ್ಧಾರಕೆ ಪಣವನು ತೊಟ್ಟರು
ನಮ್ಮಯ ಬಾಪೂಜಿ ಮಹಾತ್ಮಾ ಗಾಂಧೀಜಿ !!

ಕೋಲನು ಹಿಡಿದು ಹೆಜ್ಜೆಯನಿಡಲು
ಕೋಟಿ ಜನಗಳು ಹಿಂಬಾಲಿಸಲು
ಕೋವಿ ಗಂಡುಗಳು ಎದುರಿಸಿ ನಿಂತರು
ನಮ್ಮಯ ಬಾಪೂಜಿ ಮಹಾತ್ಮಾ ಗಾಂಧೀಜಿ !!

ಉಪವಾಸವನೇ ಅಸ್ತ್ರವ ಮಾಡಿ
ಸತ್ಯ ಶಾಂತಿಯ ಶಸ್ತ್ರವ ಹಿಡಿದು
ದುಷ್ಟ ಆಂಗ್ಲರ ಕ್ರೌರ್ಯವ ಗೆದ್ದರು
ನಮ್ಮಯ ಬಾಪೂಜಿ ಮಹಾತ್ಮಾ ಗಾಂಧೀಜಿ !!

ದಾಸ್ಯದ ಜೀವನ ಕೊನೆಗಾಣಿಸಿದರು
ಸ್ವಾತಂತ್ರ್ಯವನು ದೊರಕಿಸಿಕೊಟ್ಟರು
ಶಾಂತಿಯ ದೂತ ಮಹಾತ್ಮರು ಇವರು
ನಮ್ಮಯ ಬಾಪೂಜಿ ಮಹಾತ್ಮಾ ಗಾಂಧೀಜಿ !!

---

ಗಂಗಾ ಜಮುನ ಕೂಡಿದಂತೆ ಒಟ್ಟಾಗಿ ಆಳುತ್ತಿದ್ದೇವೆ
ಪ್ರಾಣ ತೆತ್ತು ರಕ್ತ ಕೊಟ್ಟ ಮೇಲೂ ನಗುತಿದೆ ಮನ
ಸತ್ತ ಆತ್ಮಗಳಿಗೆ ಜೀವ ತುಂಬಿ ಬಂದರೆ
ಆಗುವರು ಯುವಕರೆಲ್ಲಾ ಗಾಂಧಿ
ತನು ಮನ ಧನ ಎಲ್ಲಾ ಹಿಂದುಸ್ತಾನಕ್ಕಾಗಿ
ನಮ್ಮ ಹಿಂದುಸ್ತಾನ ಒಂದು ವಿಚಿತ್ರ ದೇಶ

ಸೌಜನ್ಯ : ಫಿರ್ದೋಸ್ ತಖ್ಯಲ್
ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಮುಸ್ಲಿಂ ಮಹಿಳೆಯರ ಕೊಡುಗೆ
ಪುಸ್ತಕದಿಂದ – ಪುಟ 131

# ಗಾಂಧಿ ಎಂದೂ ಸಾಯುವುದಿಲ್ಲ

– ಗುಂಡೀಗೆರೆ ವಿಶ್ವನಾಥ್

*"I have nothing new*
*to teach the world.*
*Truth and non-violence are*
*as old as the hills."*

ಹುಲಿಯ ಮೇಲೆ ಸವಾರಿ ಏರಿ
ಬಾಂಬು – ಬಂದೂಕುಗಳನಿಡಿದು
ಹಸನು ಬೆಳೆವ ಹೊಲಗಳಲಿ
ದನಕರುಗಳ ಜಾಡಿನಲಿ
ಶಾಂತಿಯನು ಕೊಂದು
ನೀರ ಮೇಲೆ ನೆರಳಿನಾಟ ಆಡುವವರೆ

ಹೊಲ, ಗದ್ದೆ, ಪೈರುಗಳಲಿ
ಕಸುವು ಬಿದ್ದ ಗೊಬ್ಬರ ಬಗೆದು
ಊರ ಜಾತ್ರೆಯಲಿ ಜಾಗಟೆ ಬಡಿದು
ವೇದಿಕೆಯ ಅಂಗಳದಲಿ
ನೇಪಥ್ಯದ ಹಿಂದೆ ನಾಟಕವಾಡಿ
ಬಯಲ ವೇಷ ತೋರುವವರೆ

ಹಲಗೆಗಳಿಲ್ಲದೆ ಗೋಡೆಗಳಲಿ
ಅರಿವಿಲ್ಲದ ಅಕ್ಷರ ಬರೆದು
ಫಲ ಕೊಡುವ ವೃಕ್ಷಗಳನು
ಬೇರು ಕಿತ್ತು ಬುಡಮೇಲು ಮಾಡಿ
ಹಾರೆ ಗುದ್ದಲಿಗೆ ಪೂಜೆಯ ಮಾಡಿ
ಮನೆ ಕೆಡುವುವ ಕಾಯಕದಲಿ
ಆತ್ಮ ತೃಪ್ತಿ ಹೊಂದುವವರೆ

ತಾಯಿ ಸೆರಗಿನ ಜೋಗುಳದಲಿ
ತುತ್ತು ತಿಂದು ಮಿಥ್ಯೆಯ ಬಗೆದು
ಈ ನೆಲದ ಕಣ್ಣಿನ ಹಾಡಿನಲಿ
ನೀರು ಬಗೆದು ಜೀವ ತೆಗೆವ
ಹಂತಕರೆ, ಉಸಿರು ಕಂಟಕರೆ

ಬೆವರು ಬಸಿದು, ಜೀವ ಹೊಸೆದು
ಎವರೆಸ್ಟಿನ ಶಿಖರದಂತೆ ನಾಡಕಟ್ಟಿ
ಜೀವತೆತ್ತು, ಹುತಾತ್ಮರಂತೆ ಹತಭಾಗ್ಯರಾದ
ಗಾಂಧಿ ಎಂದೂ ಸಾಯುವುದಿಲ್ಲ
ಗಾಂಧಿ ಎಂದೂ ಸಾಯುವುದಿಲ್ಲ

---

ಕಸಿದ ನನ್ನ ಕನಸಿನ ಬೂದಿಯಿಂದ ಧೂಳು ಚಿಮ್ಮಿದಾಗ
ನಾನು ಬದುಕಿದ್ದೇನೆ, ಸೌಖ್ಯವಾಗಿದ್ದೇನೆ ಎಂದು ನನ್ನ ಆತ್ಮ ಚೀರಿತು

ಸೌಜನ್ಯ : ಫಿರ್ದೋಸ್ - ತಖ್ಯಿಲ್
ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಮುಸ್ಲಿಂ ಮಹಿಳೆಯರ ಕೊಡುಗೆ
ಪುಸ್ತಕದಿಂದ - ಪುಟ 131

# ಸ್ವಾತಂತ್ರ್ಯೋದಯ

– ಡಾ. ಬೈರಮಂಗಲ ರಾಮೇಗೌಡ

ಬ್ರಿಟಿಷರೆಂಬ ಖೂಳರು
ವ್ಯಾಪಾರಕೆ ಬಂದರು
ರಾಣಿಯ ಮನವೊಲಿಸಿ
ಸೈನ್ಯಬಲವ ಪಡೆದರು

ರಾಜರುಗಳ ಬಡಿದರು
ಭಾರತವನು ಹಿಡಿದರು
ಸ್ವಾತಂತ್ರ್ಯವ ಕಸಿದರು
ಅಟ್ಟಹಾಸ ಮೆರೆದರು

ಬಂದೂಕಿನ ಸದ್ದು ಕೇಳಿ
ಜನ ನಡುಗಲು ಜೀವಭಯದಿ
ಸತ್ಯ ಶಾಂತಿ ತ್ಯಾಗಮೂರ್ತಿ
ಗಾಂಧಿಸೂರ್ಯ ಕಂಡನು

ಅಹಿಂಸೆ ಮಂತ್ರ ಜಪಿಸುತ
ಗುಂಡಿಗೆ ಎದೆಯೊಡ್ಡುತ
ದೇಶ ಬಿಟ್ಟು ತೊಲಗಿರೆಂದು
ಬಿಳಿಜನಕೆ ಕೂಗಿ ಹೇಳಲು

ಹೋರಾಟದ ಸಾಗರಕ್ಕೆ
ತನು ಮನ ಧನ ಒತ್ತೆಯಿಟ್ಟು
ಹರಿದು ಬರಲು ನದಿಗಳು
ಸಾಗರವೇ ಕಲಕಿತು
ಸುನಾಮಿಯಲೆಯು ಎದ್ದಿತು

ದುಷ್ಟ ಭ್ರಷ್ಟ ಬ್ರಿಟಿಷ್ ಸೈನ್ಯ
ಗಾಂಧೀಜಿಗೆ ಅಳುಕಿತು
ಸರಳತೆಗೆ ಬೆದರಿತು
ದೇಶ ಬಿಟ್ಟು ತೊಲಗಿತು

ಪರತಂತ್ರವು ಅಳಿಯಿತು
ಸಮಾನತೆಯ ಕನಸು ಮೂಡಿ
ಸ್ವತಂತ್ರ ಭಾರತ ಬೆಳಗಿತು
ಸ್ವಾತಂತ್ರ್ಯೋದಯವಾಯಿತು.

# ಗಾಂಧಿ ದಿಗ್ಧರ್ಶನ

– ವಿಭಾ ಪುರೋಹಿತ್

ಕಲಿಸಿಕೊಟ್ಟ ಪಾಠ ಶೂನ್ಯ
ಹಣದಾಹ, ಅಧಿಕಾರ ಮೋಹಕ್ಕೆ ನಾಗಾಲೋಟ
ಬೆಟ್ಟದಷ್ಟು ಪಾಪಕ್ಕೆ
ಕ್ಷಮೆಯೂ ಸಿಗಲಿಕ್ಕಿಲ್ಲ!
ವಿದ್ಯೆ ವಂಚಿತ ಬಾಲಕರ
ಶೋಷಿತ ಕಿಶೋರಿಯರ
ಹಸಿದ ಕಣ್ಗಳಕಲ್ಲಿ
ಜಗದ ಹಣವೇ ಕಾಣುತಿದೆ
ಗಾಳಿಯಲ್ಲಾದರೂ
ಗಾಂಧೀವಾದ ತೀರಬಾರದೇ
ನೆರಳ ಬಿಸಿಲಿನ ನಡುವೆ
ದಣಿದ ದೀನರಿಗೆ ಭಾಗ್ಯ ಯೋಜನೆ
ಮರೀಚಿಕೆಯಾಗಿ, ಮಸಲತ್ತು ನಡೆದಿದೆ
ಇನ್ಯಾರದೊ ಜೇಬಿಗೆ ತುತ್ತಾಗಿದೆ
ಭ್ರಷ್ಟ ನೋಡುವುದೇ ಕಷ್ಟ
ಹಗಲಿನಲ್ಲೇ ಒಂಟಿ ಹೆಣ್ಣು ತಿರುಗಾಡುವಂತಿಲ್ಲ
ಇನ್ನೆಲ್ಲಿ ರಾಮರಾಜ್ಯ! ಕನಸೇ ಅದು
ಭಗ್ನ ರಾಜಕಾರಣ, ಸೊರಗಿತು ದೇಶಪ್ರೇಮ
ಸಾವಿಗೆ ಶರಣಾಗುವ ಅನ್ನದಾತರು
ವ್ಯಸನಿ ಯುವಕರು, ಢೋಂಗಿ ದಾನಿಗಳು
ಅಮಾನವೀಯ ಅಂಧಾನುಕರಣೆಗೆ

ಚೂರಾದರೂ ಗಾಂಧಿತತ್ವ ನೆನಪಾಗಲಿ
ಶ್ವೇತಕಾಯ ನಡುವಲ್ಲಿ ಕೆಂಪು ಬತ್ತಿ ತಿರುಗುತ್ತ
ಕೇ ಕೇ ಹಾಕುತ್ತ ರಥಗಳ ಹಿಂಡು
ದೊರಗು ಖಾದಿ, ಅಲ್ಲ ಮೆರುಗು, ಪೊಗರು
ಧರಿಸಿದ ನಾಯಕರು!
ಸಿಂಹಾಸನಕ್ಕೆ ವರಗಿ, ಹಾರಕ್ಕೆ ಕೊರಳೊಡ್ಡಿ
ಮೈಕಾಸುರನ ಮೇಲೆರಗಿ
ಭಾಷಣಶೂರರು, ಹೊಗಳುಭಟ್ಟರು
ಮಹಾತ್ಮನೆಂದು ಜಪಿಸುತ್ತಾರೆ
ಗಾಂಧಿ ನಿಯಮ ಯಾರಿಗೂ ಬೇಕಿಲ್ಲ
ನಡೆಯುವುದೆಲ್ಲ ನಿಯಮ ಬಾಹಿರವೇ!
ಇತ್ತೀಚೆಗೆ ಹೊಸ ಚಹಾದ ಪರಿಮಳ ಸೂಸಿದೆ
ಸ್ವಚ್ಛ ಭಾರತದ ಪೊರಕೆಗಳು ಅಲ್ಲಲ್ಲಿ ಸೆಳೆಯುತ್ತಿವೆ
ಕೊಳೆಯಾಗಿದ್ದ ನನ್ನ ಚಿತ್ರ ಈಗ ಗರಿಗರಿ
ನವರಂಗುಗಳಲ್ಲಿ ಓಡಾಡುತ್ತಿವೆ
ನಕಲಿ ಪೋಟೋಗಳು ಇದ್ದಂತಿಲ್ಲ
ಒಂದೇ ಕಡೆ ಬೀಗ ಜಡಿದು ಕೂತಿಲ್ಲವೆಂದು
ಸ್ವಲ್ಪ ನಿಟ್ಟುಸಿರು ಬಿಟ್ರೆ
ಹಗರಣಗಳು, ಪ್ರಕರಣಗಳು ಚಳುವಳಿ ರೂಪತಾಳಿ

ಮೀ...ಟೂ ಮೆನ್ ಟೂ ಗಳ ಕೂಗಾಟ
ಧರ್ಮದ ಮೆಟ್ಟಿಲಿಗೆ ಕ್ರಾಂತಿ ಹೆಜ್ಜೆಯ ಹುನ್ನಾರ
ಸಂಸ್ಕೃತಿ ಸಂಪ್ರದಾಯ ಸಂಸ್ಕಾರಗಳು ಗಾಳಿಗೆ ತೂರಿವೆ
ಶಿಕ್ಷಣದಲ್ಲಿ ಸಮಾನತೆ, ದುರ್ಬಲರ ಸಂರಕ್ಷಣೆ
ಗಡಿಕಾಯ್ವ ಯೋಧರ ಸ್ಥಿತಿಗತಿಗಳ ಚಿಂತನೆಯಿಲ್ಲ
ಭಾರತೀಯತೆ, ಮಾನವೀಯತೆಯನ್ನೇ
ಮರೆತಿದ್ದಾರೆ!!! ಹೇ ರಾಮ ಹೇ ರಾಮ

# ಬಾಪೂಜಿ ಕನಸು

– ಕಸ್ತೂರಿ ಡಿ. ಪತ್ತಾರ

ಮತ್ತೊಮ್ಮೆ ಹುಟ್ಟಿ ಬಾ ಬಾಪೂಜಿ
ವರ್ಷಕ್ಕೊಮ್ಮೆ ಮಾಡುವರು ನಿನಗೆ ಬರೀ ಪೂಜೆ
ನೀ ಕಂಡ ಕನಸು ಏನಾಗಿದೆ
ಕಣ್ತುಂಬ ನೀ ನೋಡುಬಾ
ಮತ್ತೊಮ್ಮೆ ಹುಟ್ಟಿ ಬಾ ಬಾಪೂಜಿ

ರಾಮರಾಜ್ಯದ ಮಾತು
ಕನಸಿನಾಗೂ ಮರತಾರ
ಬೆಳಗಾದ ಕೂಡಲೆ
ಐಷಾರಾಮಿ ವಿಚಾರದಾಗ ಮುಳುಗುತಾರ
ಏನು ಆಗ್ಯಾದ ನಾಡು
ಕಣ್ತುಂಬ ನೀ ನೋಡು ಬಾ

ಭಾರತದ ವಸ್ತ್ರ ಧರಿಸಿ
ಬ್ರಿಟಿಷರ ನೀತಿ ಅನುಸರಿಸುತಾರ
ಅನ್ನದಾ ರೈತರ ಮರತಾರ
ಅಂದ ಚಂದ ಮೋಜಿಗೆ ಎಣಿ ಇಲ್ದೆ ರೊಕ್ಕ ಸುರಿತಾರಾ
ಸತ್ಯದನುಡಿ ಹೇಳಕ ಹೋದ್ರ ಕತ್ತು ಹಿಡಿದು ದಬ್ಬುತಾರ

ಕೋಟಿ ಕೋಟಿ ಹಣ ಸುರಿಸಿ ಬೀರ್ ಕುಡಿಸಿ ಬಾಡೂಟ ಹಾಕಿಸಿ
ಭ್ರಷ್ಟತೆ ಬಲಿಷ್ಠಗೊಳಿಸಿ ಭರ್ಜರಿ ಕಾರಭಾರ ನಡಿಸ್ಯಾರ
ನ್ಯಾಯ ನೀತಿ ಗಾಳಿಗೆ ತೂರಿ ಶಾಂತಿ ಇಲ್ಲದಂಗ ಮಾಡ್ತಾರ
ಮತ್ತೊಮ್ಮೆ ಹುಟ್ಟಿ ಬಾ ಬಾಪೂಜಿ ನೀ ಕಂಡ ಕನಸೀಗ
ಬರೀ ಪೂಜಿ.

# ಗಾಂಧೀಜಿ

– ಚಂದನ ಡಿ.ಓ.

ಗಾಂಧಿ ಸ್ವಾತಂತ್ರ್ಯ ತಂದುಕೊಟ್ಟರು
ಉಪ್ಪಿನ ಸತ್ಯಾಗ್ರಹ ಮಾಡಿದರು
ದಂಡಿ ಮಾರ್ಚ್ ಮಾಡಿದರು
ರಾಷ್ಟ್ರಕ್ಕೆ ರಾಷ್ಟ್ರಪಿತಾಮಹ ಇವರು

ಗಾಂಧಿ ಎಂದು ಇತಿಹಾಸ ಪುಟದಲ್ಲಿ ಅಮರ
ಶಾಂತಿ ಮತ್ತು ಪ್ರೀತಿ ಸಹನೆಯ ಹೆಮ್ಮರ
ನೀವು ಕಂಡ ಕನಸು ನನಸು
ದೇಶಕ್ಕೆ ದುಡಿದರು, ಸ್ವಚ್ಛತೆಯ ಬಗ್ಗೆ ಅಭಿಯಾನ

ದೇಶಕ್ಕಾಗಿ ಪ್ರಾಣ ಬಿಟ್ಟರು
ನೀವು ಕೊಟ್ಟ ಒಂದು ಕರೆ
ಬ್ರಿಟಿಷರೆ ಭಾರತ ಬಿಟ್ಟು ತೊಲಗಿ ಎಂದರು
ನೀವು ಇಟ್ಟ ಛಲದ ಕಿಚ್ಚು
ಬ್ರಿಟಿಷರ ಎದೆ ಸೀಳಿತು
ನೀವು ಹೇಳಿದ ಒಂದು ಮಾತು
ಇಡೀ ದೇಶವನೇ ಬಡಿದೆಬ್ಬಿಸಿತು

ಸ್ವಾತಂತ್ರ್ಯ ಹೋರಾಟಗಾರರು ಮಾತ್ರವಲ್ಲ
ದೇಶವನ್ನು ಪ್ರತಿನಿಧಿಸುವ ಸರದಾರ ಛಲಗಾರ
ನಿಮ್ಮ ಆತ್ಮಕಥೆ 'ನನ್ನ ಸತ್ಯಾನ್ವೇಷಣೆ'

# ತಾತ ನಗುತ್ತಿರುವೆಯೋ!
# ಅಳುತ್ತಿರುವೆಯೋ!!

– ಕೆ.ಎಂ. ರೇವಣ್ಣ

ಪರರ ಗುಲಾಮಗಿರಿಯಿಂದ ಬಿಡಿಸಿ ಹಿಡಿದು ತಂದು
ಬುದ್ಧಿ ಕಲಿಸಿ ವಿದ್ಯೆ ತಿಳಿಸಿ ಸಲಹಿದ ನಿನ್ನ ಮೂರು ಕಪಿಗಳು
ಇಂದು ಯಥಾಸ್ಥಿತಿ ದೊಂಬರಾಟದಲಿ
ಹುಚ್ಚೆದ್ದು ಅಮಲೇರಿ ಕುಣಿಯುತ್ತಿವೆ !

ನೀ ಕಲಿಸಿದ ಸಂಯಮ ಶಿಸ್ತು
ಹೆಂಡ ಕುಡಿದ ಮಂಗಗಳಿಗಿಲ್ಲ
ಉಪಯೋಗವಾಗುವುದೇ?
ಸ್ಮರಣೆ ತಪ್ಪಿ ಬೀಳುತ್ತಿವೆ ಏಳುತ್ತಿವೆ!

ಬಾಯಿ ಮುಚ್ಚಿದ ಮಂಗ–ಡೊಂಬರ
ಓಕುಳಿಯ ರುಚಿ ನೋಡುತ್ತಿದೆ
ಕಿವಿ ಮುಚ್ಚಿದ ಮಂಗ ಕೇಕೆ ಹಾಕಿ
ಡೋಲಿನಾರ್ಭಟಕೆ ಜೋಲುತ್ತಿದೆ!
ಕಣ್ಣು ಮುಚ್ಚಿದ ಮಂಗ ಕೇಳೋಣವೇ
ಕಂಡವರ ಕಚ್ಚೆ ತನ್ನ ಕೈಲಿಯಬಾರದೇ ಎನ್ನುತ್ತಿದೆ!

ಇದ ನೋಡಿ ನೀನು ನಗುತ್ತಿರುವೆಯೋ
ಇಲ್ಲ ದುಗುಡ ದುಮ್ಮಾನಗಳಿಂದ ಹಿಗ್ಗುತ್ತಿರುವೆಯೋ?
ಅಥವ ಮಾಡಿದ ಹೋಮ ವ್ಯರ್ಥವಾಯಿತೆಂದು
ಬೊಚ್ಚು ಬಾಯಿನ ದುಗುಡ
ಉತ್ಸಾಹದಿಂದ ಮುಕ್ತನಾಗಿರುವೆಯೋ?
ತಾತಾ ನೀನು ನಗುತ್ತಿರುವೆಯೋ
ಇಲ್ಲ ಅಳುತ್ತಿರುವೆಯೋ ನಾನಂತು ತಿಳಿಯೆನು!

# ದೇವರಲ್ಲದೆ ಮತ್ತೇನು ?

– ಕೆ.ಎಂ. ರೇವಣ್ಣ

ದೇವರೆಲ್ಲಿರುವನೆಂದು ಕೇಳುವಿರೇನು?
ಐವರ ಕಾಪಾಡಲೋಸುಗ ಕೋಟಿ ಕೋಟಿ ಜನರ
ಬಲಿ ತೆಗೆದುಕೊಂಡ ಮಹಾಭಾರತದ ದೇವರನ್ನು
ದೇವರೆನ್ನುವಿರೇನು

ನವಭಾರತ ಸಂಗ್ರಾಮದಿ ಸತ್ಯ–ಧರ್ಮ ಕೈಚಳಕವ ತೋರಿ
ಸಾವಿರಾರು ದಾನವರ ಗನ್ನುಗಳಿಗೆ ಬೆನ್ನುಕೊಟ್ಟು
ಅಹಿಂಸೆಯ ಸಂದರ್ಶನದಿಂದ ಹೊಡೆದಟ್ಟಿದ
ಆ ಮುದುಕ ದೇವರಲ್ಲದೆ ಮತ್ತೇನು?

ಕಾರಾಗೃಹದ ಕತ್ತಲೆಯನ್ನು ಬೆಳಗಿ ಬಂಧಿಖಾನೆಗಳ
ಬೀಗ ಮುರಿದು ಅರಮನೆಯ ಮಾಡಿಕೊಂಡ
ಆ ಮುದುಕ ದೇವರಲ್ಲದೆ ಮತ್ತೇನು?

ಅರವತ್ತು ಕೋಟಿ ಭಕ್ತರನು ಉದ್ಧಾರ ಮಾಡಿ
ದಾಸ್ಯದ ಶೃಂಖಲೆಗಳಿಂದ ಮುಕ್ತಿ ನೀಡಿದ
ಆ ಮುದುಕ ದೇವರಲ್ಲದೆ ಮತ್ತೇನು?

ಧರ್ಮದ ವಾಸನೆಯಿಂದ ಹೂಂಕರಿಸುತ್ತಿದ್ದ ಹಂದಿಗಳಿಗೆ
ಧರ್ಮದಂಬಲ ಹೊಯ್ದು ತೃಪ್ತಿಪಡಿಸಿದ
ಆ ಮುದುಕ ದೇವರಲ್ಲದೆ ಮತ್ತೇನು?

ಉಟ್ಟ ಒಂದೇ ದೋತ್ರದಿಂದ ಅಕ್ಷಯ ವಸ್ತ್ರವ ಮಾಡಿದ
ಸ್ವರ್ಗ ಮರ್ತ್ಯ ಪಾತಾಳಕೆ ಓಡಾಡಿ
ನಂಬಿದ ಭಕ್ತರಿಗೆ ನಗುಮುಖವ ತೋರಿದ
ಮುಕ್ತನಾಗುವ ನಿಮಿತ್ತ ಬೇಡನು ಕೂರುಂಬ ಕಣ್ಣಿಗೆ ಬಲಿಯಾದ
ಉಟ್ಟ ಒಂದೇ ದೋತ್ರದಿಂದ ಅಕ್ಷಯ ವಸ್ತ್ರವ ಮಾಡಿದ

# ನೀ ಯೋಗಿಯೋ ತ್ಯಾಗಿಯೋ

– ಜಯಶ್ರೀ ರಾಜು

ಕ್ರೋಧವ ಗೆದ್ದವ ನೀನು
ಮದವ ಮಣಿಸಿದವ ನೀನು
ತಾಳ್ಮೆಯ ತಿಳಿಸಿದವ ನೀನು
ಶಾಂತಿಯ ಪಸರಿಸಿದವ ನೀನು

ಅರಿಗಳೇ ಕರ ಮುಗಿವಂತೆ
ಗುಂಡೇಟಿಗೆ ಗುಂಡಿಗೆಯ ಒಡ್ಡಿದವ ನೀನು
ದೇವನೊಬ್ಬ ನಾಮ ಹಲವು ಎಂದು
ಸಾರಿ ನಡೆದವನೂ ನೀನೆ

ದೀನ ದಲಿತರಲಿ ಒಂದಾದ ಬಂಧುವು ನೀನು
ಶಕ್ತಾಶಕ್ತರಿಗೆಲ್ಲ ಧೀಃಶಕ್ತಿ ನೀನೇ
ವರ್ಣನೆಗೆ ನಿಲುಕದ ಬಹುವರ್ಣ ನೀನು
ಅಪ್ರಮೇಯನ ಪ್ರಮೇಯನಾದವನು ನೀನೆ

ಯೋಗಿಯೂ ನೀನಾಗಿ
ದೇಹ ಮಣಿಸಿದವ ನೀ
ತ್ಯಾಗಿಯೂ ನೀನಾಗಿ ಆಸೆಗಳ
ತೊರೆದವ ನೀ

ಜಗವೆ ಪೂಜಿಪ ಪ್ರಾಥಃ ಸ್ಮರಣೀಯ ನೀ
ಜಗವನಪ್ಪುವ ವೀರ ಬಾಹುವೂ ನೀನು
ಇತಿಹಾಸ ನೆನಪಿಸುವ ಪೂತಾತ್ಮ ನೀನು
ಅಬಾಲ ವೃದ್ಧರಿಗೆಲ್ಲ ದಾರಿದೀಪಾಗಿಹೆ ನೀನು

ತಾಯಿಯ ಸೆರೆಯ
ಬಿಡಿಸಿ ಧನ್ಯನಾದವ ನೀನು
ಭಾರತಾಂಬೆಯ ಮಡಿಲ
ಮುದ್ದಿನ ಮಗುವೂ ನೀನು

ದೇವಾತ್ಮ ನೀನು ಪರಮಾತ್ಮ ನೀನು
ಯೋಗಿಯೂ ನೀನೇ ಪರಮ ತ್ಯಾಗಿಯೂ ನೀನೆ
ನಮ್ಮ ಆಸನ ವಸನಗಳಿಹವು ನಿನ್ನದೇ ನೆರಳಲ್ಲಿ
ಸತ್ಯ ಶಾಂತಿ ಅಹಿಂಸೆಗಳ ಪ್ರತಿರೂಪ ನೀನು

---

ರಾಮ ಭಕ್ತಿಗೀತೆ (ಗುಜರಾತಿ ಭಾಷೆಯ ನೀತಿ ಪದ್ಯ)

ಬೊಗಸೆ ನೀರಿತ್ತವಗೆ ತೃಪ್ತಿಯಪ್ಪಂತುಣಿಸು
ಒಳ್ಳಿತನ ಮಾಡದಗೆ ಭಕ್ತಿಯಿಂ ಬಾಗು
ಕಿರುಗಾಸನಿತ್ತವಗೆ ತಿರುಗಿ ಚಿನ್ನವ ನೀಡು
ಪ್ರಾಣವಂ ಕಾಯ್ದವಗೆ ಪ್ರಾಣದಾನವ ಮಾಡು
ಕಿರು ನೆರವಿಗೂ ಹಿರಿಯ ಸೇವೆಯ ಸಲಿಸುವುದು
ಪ್ರಾಜ್ಞರಾದವರ ನುಡಿಯಂತೆಯೇ ಅವರ ನಡೆ
ಜ್ಞಾನಿಗಳು ಮಾನವರ ಭೇದಗಳನೆಣಿಸದೆಯೆ
ಕೇಡಿಗುಂ ಸಂತಸದಿ ಶುಭವನೆಸಗುವರು

ಸೌಜನ್ಯ : ಜೆ.ವಿ. ನಾರಾಯಣಮೂರ್ತಿ ಅವರ ಗಾಂಧೀಜಿ ಅವರ "ಸರ್ವಧರ್ಮ ಸಮಭಾವ" ಪುಸ್ತಕದಿಂದ ಆಯ್ಕೆ ಮಾಡಿಕೊಳ್ಳಲಾಗಿದೆ. ಗಾಂಧಿ ಅವರ ತಂದೆ ಮನೆಯ ದಾದಿ 'ರಂಭಾ' ಅವರು ಬಾಲಕ ಮೋಹನನಿಗೆ ಹೇಳಿಕೊಡುತ್ತಿದ್ದ ಗೀತೆ.

# ರಾಮ(ಣ) ರಾಜ್ಯ!

– ಆಂಜನೇಯ ಡಿ.ಕೆ.

ಕನಸ ಕಂಡ ಪೆಮ್ಮರದ ಕನಸ ಕಂಡ
ರಾಮರಾಜ್ಯವಾಗುವ ಬಯಕೆ ಕಂಡ
ಕೆಂಪಂಗಿಗಳ ವಿರುದ್ಧ ಸಿಂಹನಾದ

ಶಾಂತಿಯೆಂಬ ಮಂತ್ರ ಕೈಯಲ್ಲಿಡಿದ
ಅಶಾಂತಿಯಿಂದ ಬಂದವರ ಉರುಳಿಸಿದ
ಪ್ರಜಾ ಸಮೂಹವ ಮನ ಸೆಳೆದ
ರೊಚ್ಚಿಗೆದ್ದವ ಹೋರಾಟಕ್ಕೆ ಇಳಿದ

ಉಪ್ಪಿನ ಮೇಲೆ ವಿಧಿಸಿದ ಕರವ
ವಿರೋಧಿಸಿ ಸತ್ಯಾಗ್ರಹವ ಮಾಡಿದ
ಸಬರಮತಿಯಿಂದ ದಂಡಿವರೆಗೆ ನಡೆದ
ನಿಬಂಧನೆ ಮುರಿದ ಕೊನೆಗೆ ಜಯಿಸಿದ

ರಾಮರಾಜ್ಯವಿಂದು ಜಂಗುಹಿಡಿದಿಹದು
ಸತ್ಯ, ಅಹಿಂಸೆಯ ಕಾಣದಾಗಿಹುದಿಂದು
ಬ್ರಿಟಿಷರನ್ನು ಓಡಿಸಿದರು ಸ್ವಾತಂತ್ರ್ಯದಂದು
ಎಲ್ಲರ ಮನದಲಿ ಉಳಿದ ಅಜರಾಮರವಿಂದು

ಇಂದಿನ ಕಾಲದಿ ಅಂದಿನ ಮಹಾತ್ಮರಲ್ಲಿ
ಎಲ್ಲರ ತಲೆತೆಗೆದು ಬದುಕುವವರಿಲ್ಲಿ
ತಂತ್ರ ಬರೀ ಸುಳ್ಳಿನ ಮಂತ್ರವಿರುವುದಿಲ್ಲಿ
ನಮ್ಮ ಜನಗಳಿಗೆ ಒಳಿತು ಬರುವುದೆಲ್ಲಿ?

# ಗಾಂಧೀಜಿ

– ದೇವದಾರ

ಸತ್ಯಕ್ಕೆಸೆದ ಸವಾಲು ಈತ
ಯೌವನಸ್ಥ ಬತ್ತಲಿನ ನಡುವೆ
ದೇಹ ಬಾಡಿಸಿ ಸಿಗಿದು ಎಳೆ ಎಳೆಯಾಗಿ
ಎಳೆದಾಗ ಸುಖವು ಸಹವಾಸವಾಗಿ
ಉಪವಾಸ ಕೆಡವಿದ್ದಾನೆ ಕೊಡವಿ

ಜನಸ್ತೋಮ ಎಳದ ತೇರಿದು
ಹೊಸತು ಉದ್ಭವಿಸಿದ್ದಲ್ಲ
ಅಪಾರ ಹಳತೂ ಅಲ್ಲ
ಅಲಂಕಾರವದು ಅಪ್ಪಟ
ಆತನದ್ದೆ ವಿಶೇಷ ಪಾಕ

---

ಧಾರವಾಡ – ಹುಬ್ಬಳ್ಳಿಗಳಲ್ಲಿ, ಕೃಷ್ಣಾಬಾಯಿ ಪಂಜೇಕರ, ಉಮಾಬಾಯಿ ಕುಂದಾಪುರರ ನಾಯಕತ್ವದಲ್ಲಿ ಅಹಲ್ಯಾ ಬಾಯಿ ಕಬ್ಬುರ, ಕಮಲಬಾಯಿ, ರಧಾಬಾಯಿ ದಿವಾಕರ, ಶಾಂತಾಬಾಯಿ ಕರಮರ್ಕರರು ಸಾವಿರಾರು ಭಗಿನಿಯರೊಂದಿಗೆ ಪ್ರಭಾತಫೇರಿಗಳನ್ನು ಹೊರಡಿಸುತ್ತಿದ್ದರು. ಪ್ರಭಾತಫೇರಿ ಮಾಡುವಾಗ ಭಗಿನಿಯರು ಕೈಯಲ್ಲಿ ರಾಷ್ಟ್ರಧ್ವಜ ಹಿಡಿದು ಈ ಹಾಡು ಹಾಡುತ್ತಿದ್ದರು.

ಭಾರತ ಮಹಿಳೆಯರೇ ಏಳಿರಿ ಬೀರುತ ಜಗದಲ್ಲಿ
ಭಾರತ ತೇಜದ ವೀರತೆ ತೋರುತ ಪರತಂತ್ರವ ದೂಡಿ
ಗಾಂಧೀ ಮೋಹನನು ಮುದದಿಂ ಬಂದಿಹನು ತಾನು
ಅಂದದಲಿ ಹಿಂದೀ ಜನತೆಯ ಬಂಧನ ಬಿಡಿಸುದಕ
ಸತ್ಯವ ಸಾರುತಲಿ ಸತ್ಯದ ಮರ್ಮವ ಬೀರುತಲಿ
ಸತ್ಯಮೂರ್ತಿ ತಾ ಸತ್ಯವ ತೋರುವ ಸತ್ಯಾಗ್ರಹಿಯಾದ
ಸನ್ನುತ ಕಾರ್ಯಕೆ ದೇಹವ ಸವರುತ ಸುಜನರು ಹೊರಟಿಹರು

ಸೌಜನ್ಯ : ಡಾ. ಜಿ.ಎ. ಬಿರಾದಾರ ಅವರ 'ಮುಂಬಯಿ ಕರ್ನಾಟಕದಲ್ಲಿ ಸವಿನಯ ಕಾನೂನುಭಂಗ ಚಳವಳಿ' ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ

# ಶಾಂತಿದೂತ

– ಗಣಪತಿ ಗೋ. ಚಲವಾದಿ

ದೇಶಕ್ಕೆ ಮಹಾತ್ಮನೆಂಬ ಬಿರುದು
ಗಾಂಧೀಜಿ ಅವರು ಪಡೆದುಕೊಂಡ ಗೌರವ
ದೇಶಕ್ಕಾಗಿ ಮುಡಿಪಾಗಿಟ್ಟ ತನ್ನುಸಿರು
ಕರಮಚಂದ ಗಾಂಧಿ ಇವರ ಮೂಲ ಹೆಸರು

ಬಾಲತನದಿ ಇವನು ಹಣವ ಕದ್ದು ಒಯ್ಯುವನು
ತುಂಟಾಟದಿ ಮನೆ ಮಂದಿಯ ಬೆರಗು ಮಾಡಿದವ
ಸತ್ಯ ಹರಿಶ್ಚಂದ್ರ ನಾಟಕ ನೋಡಿ ಬದಲಾದವನು
ತನ್ನ ತಪ್ಪು ಒಪ್ಪುಗಳನ್ನು ಒಪ್ಪಿಕೊಂಡ ನಿಜ ಮಹಾತ್ಮ

ದೇಶ ವಿದೇಶಗಳಲ್ಲಿ ಶಿಕ್ಷಣ ಪಡೆಯುತ್ತಾ
ಹಗಲಿರುಳು ದೇಶ ಸೇವೆಯಲ್ಲಿ ಸುಖವ ಕಾಣುತ್ತಾ
ಬ್ರಿಟಿಷ್ ಮುಕ್ತ ಭಾರತಕ್ಕೆ ಉಪಾಯ ಹುಡುಕುತ್ತಾ
ದೇಶದ ಮಹಾನ್ ಭಕ್ತನಾಗಿ ಹೆಸರಾದ ಪುಣ್ಯಾತ್ಮ

ಸ್ವತಂತ್ರ ಭಾರತಕ್ಕೆ ರಕ್ತ ಕ್ರಾಂತಿ ತಿರಸ್ಕರಿಸಿ
ಅಹಿಂಸೆ ಮೂಲಕ ಸ್ವತಂತ್ರ ಪಡೆದುಕೊಳ್ಳಲು ಹಂಬಲಿಸಿ
ಉಗ್ರಗಾಮಿಗಳ ಮನಸ್ಸು ನಿಗ್ರಹಿಸಿ
ಸ್ವಾತಂತ್ರಕ್ಕಾಗಿ ಎಲ್ಲರಿಗೂ ಶಾಂತಿ ಪಸರಿಸಿದ ದಿವ್ಯಾತ್ಮ

ಅಸಹಕಾರ ಚಳುವಳಿ ಹುಟ್ಟು ಹಾಕಿ
ಹಗಲಿರುಳು ಬ್ರಿಟಿಷರ ನಿದ್ದೆಗೆಡಿಸಿ
ಉಪವಾಸ ವನವಾಸ ಅನುಭವಿಸಿ
ಭಾರತ ದೇಶಕೆ ಸ್ವಾತಂತ್ರ್ಯ ಕೊಡಿಸಿದ ಶಾಂತಿದೂತ

# ಕಸ್ತೂರಬಾರವರು

– ಎಸ್. ವೆಂಕಟರಮಣಯ್ಯ

ಸೂರ್ಯನ ಕಿರಣಕೆ ಚಂದಿರ ಬೆಳಗುವಂತೆ
ಭುವಿಯ ಆಸರೆಗೆ ಗಿಡಮರ ಜಲಚರ ನಕ್ಕು ನಲಿಯುವಂತೆ
ಮನುಜ ಸಂಕುಲ ಪ್ರಾಣಿ ಸಂಕುಲ ಸಂತಸದಿಂದಿರುವಂತೆ
ಈ ಜಗದೊಳು ತನ್ನತನ ಬೀರುತ ಸಾಗಿದೆ
ಕಸ್ತೂರಬಾ ಅವರ ಬಾಲ್ಯ ನಡತೆಯ ಲಾಲಿತ್ಯ
ತಂದೆ ತಾಯಿ ಮೃದು ಸ್ವಭಾವದ ಚಾರಿತ್ರ್ಯ
ನಿಷ್ಠೆ ಭಕ್ತಿ ಏಕಾಗ್ರತೆಗಳ ಸವಿ ಹೆಜ್ಜೇನ ಹನಿಗಳು
ಬಾಲ್ಯದಲ್ಲೇ ರೂಢಿಸಿಕೊಂಡ ಅಮೂಲ್ಯ ರತ್ನಗಳು
ರಾಮ ಕೃಷ್ಣರೆಂದರೆ ಶಿವನೆಂದರೆ ಪಂಚಪ್ರಾಣ
ಅಮರ ಭಕ್ತಿಯಾಳದಲಿ ದೇವನಾಮ ಸಂಚಲನ
ಏಕತೆಗಳ ಮಿಲನದಲಿ ಏಕಮೇವ ಹಣತೆ ದೀಪವಾಗಿ
ಸುತ್ತುವರಿಯಿತು ವಿಶ್ವಕೆ ಸೂರ್ಯ ರಶ್ಮಿ ಹರಿಸಲು
ಭಾರತೀಯರ ವಿಶ್ವತೀಯರ
ಮನದಲ್ಲಿ ಶಾಂತಿ ಅಹಿಂಸೆ ತುಂಬಲು
ಕಸ್ತೂರಬಾ ಮನದ ಮೇಲೆ ಗಾಢ ಪರಿಣಾಮದ ಪಣ
ಗಾಂಧೀಜಿ ಜೀವನದ ಉದ್ದಗಲಕ್ಕೂ ಸಾಗಿದ ಪಯಣ
ಬ್ರಿಟಿಷರ ದಬ್ಬಾಳಿಕೆಗೆ ಗಾಂಧೀಜಿ ದಂಪತಿಗಳ
ಮಹಾಭಾರತ ಯಾನ
ಕಸ್ತೂರಬಾ ಅವರ ಸರಳತೆ
ಮಮತೆ ದಯೆ ಪ್ರಾಮಾಣಿಕತೆ
ಜಗದೇಳಿಗೆಯಲ್ಲಿ ಭಾರತೀಯರ ಜೀವನ
ಸದಾ ಹಚ್ಚಹಸನಾಗಲು

# ಬುದ್ಧ ಬಸವ ಗಾಂಧೀಜಿ

– ಯೋಗೇಶ್ ಹೆಚ್.

ಹುಟ್ಟಿ ಬರಲಿ ಬುದ್ಧ ಬಸವ ಗಾಂಧಿ ಮತ್ತೊಮ್ಮೆ
ವಿಶ್ವ ಮಾನವತೆಯ ತತ್ವ ಸಾರಲು ನಾಡಿಗೆ
ಕ್ರೌರ್ಯ ಹಿಂಸೆ ನಾಶಗೈದು ಶಾಂತಿ ನೆಲೆಸಲೆಂದು
ಜಗಕೆ ಹರಸೆ ಹುಟ್ಟಿ ಬರಲಿ ಮತ್ತೊಮ್ಮೆ

ಬುದ್ಧ ಬಸವ ಗಾಂಧೀ ಮತ್ತೊಮ್ಮೆ ನಾಡಿಗೆ
ಧರ್ಮ ಧರ್ಮವೆ ಹುಚ್ಚೆದ್ದು ಕಿತ್ತಾಡಿ
ದೇವನೊಬ್ಬನೆಂಬುದಾ ಮರೆತು
ಮನುಜಮತದ ದೂರ ದೂಡಿ
ಕೊರಳ ಕೊಯ್ದು ಪಾಪವೆಸಗಿ
ಹಿಂಸೆ ರುದ್ರ ನರ್ತನ ಗೈವ ಮುನ್ನ
ಶಾಂತಿ ನೆಲಸೆಲೆಂದು ಹುಟ್ಟಿ ಬರಲಿ ಮತ್ತೊಮ್ಮೆ

ಬುದ್ಧ ಬಸವ ಗಾಂಧೀ ಮತ್ತೊಮ್ಮೆ ನಾಡಿಗೆ
ಶಾಂತಿ ಮಂತ್ರವ ಮರೆತ ನಾಡಿನಲ್ಲಿ
ತಿಳಿಗೇಡಿ ಮನುಜರ ಕಾಡಿನಲ್ಲಿ
ಸತ್ಯ ಅಹಿಂಸೆಯ ಶಾಂತಿ ದೀವಿಗೆಯ ತೋರಲೊಮ್ಮೆ
ಹುಟ್ಟಿ ಬರಲಿ ಮತ್ತೊಮ್ಮೆ
ಬುದ್ಧ ಬಸವ ಗಾಂಧೀ ನಾಡಿಗೆ

# ಪ್ರೀತಿಯ ಬಾಪೂ

– ಅವಿನಾಶ್ ಕೆ.ಎಸ್.

ಪ್ರೀತಿಯ ಬಾಪೂ ಅಳಿಸದು, ಅಮರವದು
ನೀ ಒತ್ತಿದ ಛಾಪು !
ಸತ್ಯದ ಹಾದಿಯ ಹಿಡಿದು ನುಡಿದಂತೆ ನಡೆದೆ
ಶಾಂತಿ–ಅಹಿಂಸೆಯಿಂದಲೆ
ವಸಾಹತು ಸಾಮ್ರಾಜ್ಯ ಕೆಡೆವಿದೆ
ಬೋಧಿಸಿದ ತತ್ವಗಳ ಸ್ವತಃ ಆಚರಿಸಿ
ಆತ್ಮ ಸಂಯಮಿಯಾದೆ
ಬಾಪೂ, ಸರಿ ದಾರಿಯ ತೋರುತ ದೀವಿಗೆಯಾದೆ

ಪ್ರೀತಿಯ ಬಾಪೂ ಕೆಡವದು, ಕಳಶವದು
ನೀ ತಿಳಿಸಿದೆ ಮಾತು
ಸ್ವಚ್ಛತೆ ಸರಳತೆ ಆಧ್ಯಾತ್ಮಿಕ ಸಂಪನ್ನತೆ
ಸಾಧನಗಳಿಂದ ಸಮಾಜ ಪರಿವರ್ತನೆಗೆ ನಾಂದಿ ಹಾಡಿದೆ
ಮಾನವನೆದೆಯಲಿ ದೇವರ ಕಂಡೆ
ಮನುಕುಲ ಸೇವೆಯ ನಿತ್ಯವೂ ಉಂಡೆ
ಬಾಪೂ, ನಿರ್ಗತಿಕರ ಬಾಳನು ಬೆಳಗಿ ಮಹಾತ್ಮನಾದೆ

ಪ್ರೀತಿಯ ಬಾಪೂ ಮರೆಯದು, ಮೌಲ್ಯವದು
ನೀ ನೀಡಿದ ಕಾಣ್ಕೆ
ಸಣ್ಣದು ಸುಂದರ ಎಂಬುದ ತಿಳಿಸುತ
ಸ್ವದೇಶಿ ಕರ್ಮವ ಓರೆಗೆ ಹಚ್ಚುತಾ
ದೇಶದ ಪ್ರಗತಿಗೆ ಭದ್ರ ಬುನಾದಿಯ ಹಾಕಿದೆ
ಬಾಪೂ, ರಾಷ್ಟ್ರದ ಹಿತಕೆ ಜೀವವ ತೇಯುತ
ರಾಷ್ಟ್ರಪಿತನಾದಿ

## ಮತ್ತೆ ದಂಡಿಯಾತ್ರೆ

– ಕೆ.ಜಿ. ಕೃಷ್ಣಾನಂದ

ಭಾರತದಲ್ಲೂ ಬಹಳಷ್ಟು ಮಂದಿ
ಗಾಂಧೀಜಿ ಸತ್ತಿದ್ದಾರೆಂದೇ ಭಾವಿಸಿ
ನಿಶ್ಚಿಂತರಾಗಿದ್ದರು ಆದರೆ ....
ಅವರು ಪ್ರವಾಸದಲ್ಲಿದ್ದಾರೆ..!

ಒಮ್ಮೆ ಗಾಳಿಯಂತೆ... ಒಮ್ಮೆ ನೀರಿನಂತೆ
ಮುಂಜಾನೆಯ ಮಂಜಿನಂತೆ
ಕಂಡೂ ಕಾಣದಂತೆ ಸಾಗಿ ಮುನ್ನೆಡೆದಿದ್ದಾರೆ ಕೋಲೂರಿ

ಧರ್ಮ ಪಾಲನೆಯ ಅಫೀಮಿನಡಿಯಲ್ಲಿ ದಾಸ್ಯರಾಗಿದ್ದವರೆಲ್ಲ
ಹಂಗು ತೊರೆದು ನಡೆದಿದ್ದಾರೆ ಸ್ವಾತಂತ್ರ್ಯದತ್ತ
ಬರಿಗೈದಾಸನ ಹಿಂದೆ ಜನರ ದಂಡು
ಮತ್ತೆ ಸಾಗಿದೆ ದಂಡಿಯಾತ್ರೆ

ಮರಳುದಂಡೆಯಗುಂಟ ಗಾಂಧಿ ಹೆಜ್ಜೆಯ ಗುರುತು
ಪ್ರಭುತ್ವ ಖಂಡಿಸಿ ರಸ್ತೆಗಿಳಿದವರ ಕೈಯಲ್ಲಿ ಕೆಂಗುಲಾಬಿ
ಮೈಕೊಡವಿದ ಮಂದಿಯ ಮುಂದೆ
ನರಳಿ ಸರ್ವಾಧಿಕಾರ ದೇಶ ಹಾಹಾಕಾರ
ಕೋವಿ ಹಿಡಿದವನ ಕೈ ಮೇಲು ಬಂದು ಕೂತಿದೆ ಪಾರಿವಾಳ

ಹಲವು ದಿನದ ಹಿಂದ ಟ್ಯೂನಿಷಿಯಾದಲ್ಲಿದ್ದ ಅವರು
ಮತ್ತೆ ಕೈರೋದ ತೆಹ್ರಿರ್ ವೃತ್ತದಲ್ಲಿ ಕಾರ್ಯ ಮುಗಿಸಿ
ಸಾಗಿ ಹೋಗಿದ್ದಾರೆ.. ಅಲ್ಜೀರಿಯಾ ... ಲಿಬಿಯಾ ದಾಟಿ
ನಡೆದಿದೆ ಸ್ವಾತಂತ್ರ್ಯ ಮಂಥನ ಸಾಗಿದೆ ಹಗ್ಗ ಜಗ್ಗಾಟ
ಅತ್ತ ಗಾಂಧಿ ಇತ್ತ ಜನ ನಡುವೆ ಬಸವಳಿದ ದುರುಳ ಸರ್ವಾಧಿಕಾರ

ಈ ಗಾಂಧಿ ಬಂದಿದ್ದೆಲ್ಲಿಂದ
ಜನಮನದೊಳಗೆ ನಿಂತಿದ್ದೆಲ್ಲಿಂದ
ಇಡೀ ಅರಬ್ ದೇಶ ಹೊಂಬೆಳಕಲ್ಲಿ
ಮಿಂದೆದ್ದ ತವಕದಲ್ಲಿದ್ದರೆ
ಅಮೆರಿಕ ಆತಂಕದಲ್ಲಿದೆ
ಜಗತ್ತು ವಿಸ್ಮಯದಲ್ಲಿ
ಅದೇ ಭಾರತದಲ್ಲಿ
ಖಾದಿ ತೊಟ್ಟ ಖೂಳರು ತಳಮಳದಲ್ಲಿದ್ದಾರೆ

ಆತ ಮಧ್ಯ ಪ್ರಾಚ್ಯ ಪ್ರವಾಸ ಮುಗಿಸಿ
ಭಾರತಕ್ಕೆ ಬಂದು ಬಿಟ್ಟರೆ
ಈ ಜನರ ಮನಸ್ಸಿಗೆ ಮತ್ತೆ ದಂಡಿಯಿಟ್ಟರೆ

(ಅಮರ ಬಾಪು ಚಿಂತನ ಮಾಸಿಕ – ಮಾರ್ಚ್ 2013)

---

ಹಿಂದೂಸ್ಥಾನ ಖಜಾನಿ ಖಾಲಿ ಮಾಡಿ
ಇಂಗ್ಲೆಂಡಿಗೆ ಒಯ್ಯುತಾರ ಓಡೋಡಿ
ಬ್ರಿಟಿಷ್ ಪಾರ್ಲಿಮೆಂಟಿನೊಳು ಕೂಡಿ
ಕಾಯ್ದೆ ತಗಿತಾರ ಬಹಳ ಅಡ್ನಾಡಿ

ಮಳೆ ಹೋಗಿ ಬೆಳೆ ಇಲ್ಲ ಅನ್ನುವಂಥ ರೈತಗ
ಬಿರಾಡ ಬಿಡುವುದಿಲ್ಲ ಸರಕಾರ
ತೆರಿಗೆ ಕೊಟ್ಟ ಬಾಳ ಮರಗುತ ಕುಂತಾರ
ಮನಿಯಾಗ ಉಳಿಯಲಿಲ್ಲ ಬಂಗಾರ

ಸೌಜನ್ಯ : ಹೊಸತು ಜೂನ್ 2017 ಪತ್ರಿಕೆಯಲ್ಲಿ ಶ್ವೇತಾ ಎಂ.ಬಿ.
ಅವರ "ಜನಪದ ಸಂಗೀತ ಮತ್ತು ರಾಷ್ಟ್ರೀಯ ಚಳುವಳಿಗಳು ಎಂಬ
ಲೇಖನದಿಂದ ಆಯ್ದುಕೊಳ್ಳಲಾಗಿದೆ

# ಮಹಾತ್ಮ ಗಾಂಧೀಜಿ

– ಸುಮ ಬೆಳಗೆರೆ

ಖಾದಿ ಪಂಚೆ ತಲೆಯ ಮೇಲೆ ಭಾವೈಕ್ಯದ ಟೊಪ್ಪಿಗೆ
ಕನ್ನಡಕದ ಹಿಂದೆ ಮಿಂಚುಗಣ್ಣು
ಅಹಿಂಸಾ ಮಾರ್ಗ ಮೃದು ನಡೆನುಡಿ
ಹೃದಯದಿಂದ ಹೃದಯಕ್ಕೆ
ಜನಮನ ತಣಿಸಿದ ತತ್ವ ತುಂಗೆ
ವಿಶ್ವಮಾನವ ಧರ್ಮದ ಮಾನವರೂಪಿ ಅವರೇ
ರಾಷ್ಟ್ರಪಿತ ಮಹಾತ್ಮ ಗಾಂಧೀಜಿ
ಅಹಿಂಸಾ ಮಾರ್ಗದಿಂದ ಬ್ರಿಟಿಷರನು
ಮಟ್ಟಹಾಕಿ ಸ್ವಾತಂತ್ರ್ಯ ತಂದವರು
ಎಂಥಹ ಪ್ರಸಂಗದಲ್ಲೂ ಧೃತಿಗೆಡೆದ
ದಿವ್ಯ ಮೌನಿ ಸ್ವಾತಂತ್ರ್ಯ ಸಂಗ್ರಾಮದ ಹೋರಾಟಗಾರ
ದೇಶಕ್ಕೆ ಶಕ್ತಿ ತುಂಬಿದ ಧೀರ
ಎಂದೂ ಮರೆಯದ ಮಹಾನುಭಾವರು
ಸೋಲರಿಯದ ಸರದಾರರು
ವ್ಯಕ್ತಿತ್ವ ಪುಟಕ್ಕಿಟ್ಟ ಚಿನ್ನ
ದಶದಿಕ್ಕಿಗೂ ಹರಡಿದ ಅವರ ಕೀರ್ತಿ
ದೂರ ದೃಷ್ಟಿಯೇ ಅವರ ಕಾಯಕ
ಪ್ರಬುದ್ಧತೆಯಲಿ ಬುದ್ಧ ವೈರಾಗ್ಯದಲಿ ಅಲ್ಲಮ
ವಿಶ್ವಕ್ಕೆ ಧಾತರು ರಾಷ್ಟ್ರಪ್ರೇಮಿ ಗುಂಡೇಟಿಗೆ ಬಲಿಯಾದರೂ
ಇತಿಹಾಸದ ಪುಟದಲಿ ಸುವರ್ಣಾಕ್ಷರದಲಿ
ದಾಖಲಾದ ಮಹನೀಯರು ಇವರೇ ನಮ್ಮ ರಾಷ್ಟ್ರಪಿತ
ಮಹಾತ್ಮ ಗಾಂಧೀಜಿ ರಾಷ್ಟ್ರಕ್ಕಾಗಿಯೇ ಹುತಾತ್ಮ ವೀರ

# ಗಾಂಧೀ ತಾತ

– ಪಿ. ನಾಗರಾಜ

ಬಾ ಬಾ ತಾತ ಗಾಂಧೀ ತಾತ
ನಮಗೆ, ಸ್ವಾತಂತ್ರ್ಯ
ತಂದು ಕೊಟ್ಟೆ ತಾತ
ಭಾರತದಲ್ಲಿ ಮತ್ತೆ
ಹುಟ್ಟು ಬಾ ಬಾ
ಸತ್ಯಾಗ್ರಹ ಉಪವಾಸ
ಇದ್ದರೂ ನಿನಗೆ
ನಮ್ಮನ್ನು ಆಡಿಸಿ
ನಲಿಸಿದ ತಾತಾ
ಭಾರತದಲ್ಲಿ ಮತ್ತೆ ಹುಟ್ಟಿ ಬಾ ಬಾ
ಎಷ್ಟೇ ಕಷ್ಟ ಬಂದರೂ
ನಿಮಗೆ ಸತ್ಯವನ್ನೇ
ನುಡಿಯಿರಿ ಎಂದ ತಾತ
ಕಡೆಯ ತನಕ ಹೋರಾಟ ಮಾಡಿ
ಪರಕೀಯರನ್ನು ಓಡಿಸಿ ತಾತಾ
ಜನರಿಂದ ಮಹಾತ್ಮ ಎಂದು
ಕರೆಯಿಸಿಕೊಂಡು ಎಲ್ಲರಿಗೂ
ರಾಷ್ಟ್ರಪಿತ ಆಗಿದ್ದ ತಾತಾ
ವರುಷ ನೂರೈವತ್ತಾದರೂ
ನಿನಗೆ ಸದಾ ನೆನಪಲ್ಲಿ
ಉಳಿಯುವ ಗಾಂಧೀ ತಾತ
ಭಾರತದಲ್ಲಿ ಮತ್ತೆ ಹುಟ್ಟಿ ಬಾ ಬಾ

# ಗಾಂಧಿ

– ಸಕ್ಕರ ಪಾಂಡುರಂಗಪ್ಪ ಚಕ್ರವರ್ತಿ

ಗಾಂಧಿ ಗಾಂಧಿ ಗಾಂಧಿ ಇವರು
ಶಾಂತಿ ಧೂತ ಗಾಂಧಿ ಇವರು

ಕಸ್ತೂರಿಬಾ ಪತಿ ಇವರು
ಖಾದಿ ಉಡುಪು ಧರಿಸಿದವರು

ಅಸ್ಪೃಶ್ಯತೆಯ ತೊಡೆದು ಹಾಕಿ
ಸಮಾನತೆಯ ಸಾರಿದವರು

ಸ್ವಾತಂತ್ರ್ಯದ ನಾಂದಿ ಹಾಡಿ
ಉಪ್ಪಿನ ಸತ್ಯಾಗ್ರಹ ಮಾಡಿದವರು

ಆಂಗ್ಲರ ಮನವ ಗೆದ್ದು ದೇಶಕೆ ಸ್ವಾತಂತ್ರ್ಯವ
ತಂದು ಕೊಟ್ಟು ರಾಷ್ಟ್ರಪಿತ ಆದವರು

ನೋಟು ನೋಟಿನಲ್ಲಿ ರಾರಾಜಿಸುತಿಹರು
ಇವರೇ ಗಾಂಧಿ ಗಾಂಧಿ ಗಾಂಧಿ ಇವರು

---

ಗಾಢ ನಿದ್ರೆಯಿಂದ ಎಚ್ಚೆತ್ತುಕೋ
ಮೂಢ ದೇವರ ಸ್ತುತಿ ಮಾಡು
ನಾಳೆಯದನ್ನು ಇಂದು ಮಾಡು
ಇಂದಿನದ್ದನ್ನು ಈಗ ಮಾಡಿಬಿಡು

ಸೌಜನ್ಯ : IBID9, ಮೇ 1032
ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಮುಸ್ಲಿಂ ಮಹಿಳೆಯರ ಕೊಡುಗೆ
ಪುಸ್ತಕದಿಂದ – ಪುಟ 17

# ರಾಷ್ಟ್ರಪಿತ ಗಾಂಧಿ

– ಡಾ. ಎನ್.ಟಿ. ಅನಿಲ್

ಬಾಪು ಬಾಪು ರಾಷ್ಟ್ರಪಿತ ಬಾಪು
ಸ್ವತಂತ್ರ ಸ್ವಚ್ಛ ಭಾರತದ ಕನಸು ಕಂಡ ಬಾಪು
ಅದಕ್ಕಾಗಿ ಅನವರತ ಶ್ರಮಿಸಿದ ಬಾಪು
ದೇಶಾಭಿಮಾನದ ನಾಡಿಮಿಡಿತ ಹೆಚ್ಚಿಸಿದ ಬಾಪು
ಚಳುವಳಿ, ಸತ್ಯಾಗ್ರಹದ ಸೂತ್ರದಾರಿಯಾದ ಬಾಪು
ಜೈಲುಹಕ್ಕಿಯಾದ ಬಾಪು
ಬಹುರೂಪಿಯಾದ ಬಾಪು
ನೂಲುವವ, ಲೇಖಕ, ವೈದ್ಯ, ರೈತ
ಬಾಪು ಬಾಪು ನಮ್ಮೆಲ್ಲರ ಪ್ರೀತಿಯ ಬಾಪು
ಶಿಕ್ಷಣ ಸಮಾನತೆಯ ದೀಪ ಹಚ್ಚಿದ ಬಾಪು
ಸತ್ಯಕ್ಕಿಂತ ದೇವರಿಲ್ಲ ಎಂದ ಬಾಪು
ನುಡಿದಂತೆ ನಡೆದ ಬಾಪು
ಶಾಂತಿಯೇ ಮನುಕುಲದ ದೊಡ್ಡ ಆಯುಧ ಎಂದ ಬಾಪು
ಅದರಿಂದಲೇ ಆಗಸದತ್ತೆರಕ್ಕೇರಿದ ಬಾಪು
ಮಾನವತೆಯೇ ಮಾನವಜನ್ಮದ ಮಹತ್ವವೆಂದು ಸಾರಿದ ಬಾಪು
ಸರಳ, ಸಜ್ಜನಿಕೆಗೆ ಹೆಸರಾದ ಬಾಪು
ಉಸಿರಿರುವವರಿಗೆ ದೇಶಸೇವೆ ಮಾಡಿದ ಬಾಪು
ಸೆನಪಾಗಿ ಉಳಿದ ಬಾಪು, ಮತ್ತೆ ಹುಟ್ಟಿ ಬನ್ನಿ ಬಾಪು

# ಮತ್ತೆ ಬಾ ಪೃಥ್ವಿಗೆ

– ಡಾ. ಮದನಕುಮಾರ ಎ.ಆರ್.

ಸ್ವಾತಂತ್ರ್ಯದ ಭಾಷ್ಯ ಬರೆದ ಭಾರತವಿಧಾತನೆ
ಹೇಗೆ ತಾನೆ ಕಡೆದು ನಿಲಿಸಲಿ
ನಿನ್ನ ಪವಿತ್ರ ಮೂರ್ತಿಯ
ಈ ಅಕ್ಷರದ ಉಳಿಯಲಿ

ಉಪವಾಸ, ಸತ್ಯಾಗ್ರಹ, ಶಾಂತಿಮಂತ್ರಗಳೇ
ನಿನ್ನ ಹೋರಾಟಕೆ ಸದಾ ಶ್ರೀರಕ್ಷೆ
ಜೊತೆಗೆ ಬಂದ ಜನಸಾಗರಕೆ
ದಾರಿ ತೋರಿದ ಧ್ರುವನಕ್ಷತ್ರ

ಫಿರಂಗಿ ಗುಂಡುಗಳ ಸದ್ದು ನಿನ್ನೆದುರು ನಿಶ್ಯಬ್ದ
ಅಳೆತ್ತರ ಅಲೆಗಳಬ್ಬರದ ನಡುವೆಯೂ
ಸ್ವಾತಂತ್ರ್ಯದ ನೌಕೆಯ ದಡ ಸೇರಿಸಿದೆ
ತ್ರಿವರ್ಣ ಧ್ವಜ ಹಾರಿಸಿದೆ.

ಧಮನಿ ಧಮನಿಗಳಲಿ ಸ್ವಾತಂತ್ರ್ಯದ ಸಂಚಾರ
ನೀನಾದೆ ನವಯುಗದ ಹರಿಕಾರ
ರಾಮನ ನಾಮದವನೇ
ತಂದ ನಿನಗೆ ಸಂಚಕಾರ

ಸ್ವಾತಂತ್ರ್ಯದ ನಿನ್ನ ಕನಸು ನನಸಾಗಲಿಲ್ಲ
ಸಮಾನತೆ, ಶಾಂತಿ ಮೈದೋರಲಿಲ್ಲ
ಬಗಲಿನ ಮುಳ್ಳುಗಳೇ ಖಡ್ಗವಾಗಿ
ಬಿಸಿರಕ್ತದೋಕುಳಿಯ ಚಲ್ಲಾಟ

ಮನೆಗೆ ಬಂದಾಕೆಗೆ ತಾಯಾಗಲು ಬಿಡಲಿಲ್ಲ
ಬಡವರ ಕಣ್ಣೊರೆಸುವ ಸೆರಗ ಸೆಳೆದ
ಕೀಚಕರೆದುರು ಮುದುಡಿ ಸೋತ ತಾಯ
ಕಾಪಾಡುವವರು ಯಾರೊ?

ಸ್ವಾತಂತ್ರ್ಯದ ದೇವತರುವಾಗಿದೆ ಬರಡು
ನ್ಯಾಯ ನೀತಿಗಳ ಸಾಡಾಗಿದೆ
ಹಿಂಸೆ ದ್ರೋಹಕೆ ತವರು
ಆರುತಲಿದೆ ಬೆಳಕು

ಆದರೇನಂತೆ? ಚಿಂತೆಯಿಲ್ಲ ನಮಗೆ
ಬಂಜೆಯಲ್ಲ ಭಾರತಾಂಬೆಯು
ಕೋಟಿ ಮಕ್ಕಳ ನಡುವೆಯು
ಮತ್ತೆ ಹುಟ್ಟಬಹುದು ಗಾಂಧಿ

ಓ ಮಾಹಾತ್ಮ, ಭುವಿಗೆ ಬೆಳಕನಿತ್ತವನೆ
ಮತ್ತೆ ಬರುವಿಯೇನು ತವರಿಗೆ?
ಹಳಿವವರು ಹಳಿಯುತಿರಲಿ
ಮತ್ತೆ ಬನ್ನಿ ನೀವು ಪೃಥ್ವಿಗೆ
ನಿಮ್ಮ ಬದುಕ ಪಯಣವು ನಮಗೆಂದೆಂದೂ
ಕೋಟಿ ಸೂರ್ಯನಂತೆ ಪ್ರಖರವು
ಹೊಸಬಾಳಿನ ಹೊಸಪಯಣಕೆ
ಬೇಕು ನಿಮ್ಮದೊಂದು ಕಿರಣವು

# ನಮ್ಮ ಮಹಾತ್ಮರು

– ಎ. ಸುಬ್ರಹ್ಮಣ್ಯ ಭಟ್, ಬಂಟ್ವಾಳ

ಸರಳತೆಯ ಗೆದ್ದವರು
ವಿರಳವಾಗಿಹರು, ನ್ಯಾಯ ಸತ್ಯದ
ಮೂರ್ತಿ ಸಜ್ಜನಿಕೆ ಇರುವ ಗುಣ
ಅರಿಯದವರಾರು?

ಹೊರಗಿರಲಿ ಒಳಗಿರಲಿ ತಾಯಿ
ಭಾರತಿಯ ಮರೆಯದಿಹ ಭಕುತ
ಇವರಿಗಿನ್ನಾರು ಸಾಟಿ?
ವೀರತನ ಶೂರತನ ಮೇರುತನ
ಜ್ಞಾನ ಸುವಿಜ್ಞಾನ ರಾಜಕೀಯದಲಿ
ಮೆರೆಯುತಲಿ ತನ್ನತನ ಸತ್ಯದಾಗ್ರಹವಿಟ್ಟ
ಧೀರತನಕಿನ್ನಾರು ಮಿಗಿಲು?

ತಪ್ಪನೊಪ್ಪುವ ಗುಣ ಒಪ್ಪುತಲಿ ನಡೆವ
ಗುಣ ದಿಟ್ಟ ಹಾದಿಯನಪ್ಪಿ
ಕೆಟ್ಟುದಕೆ ಸೊಪ್ಪು ಹಾಕದ ಕಠಿಣ ನಿಲುವಿನ
ಧೈರ್ಯವಂತರು ಇವರು

ನಗುಮೊಗದ ತೆಳುಕಾಯ।
ಮಗುವಿನಂತಹ ಮುಗುದತೆಯ ಬಿಂಬ
ಸುಗುಣ ಸುವಿಶಾರದ ಬಹುಭಾಷೆ ಬಲ್ಲಿದರು
ಸ್ವಾತಂತ್ರ್ಯ ಹೋರಾಟದಲಿ ಗೆದ್ದವರು

ಸ್ವಾರ್ಥವರಿಯದ ಜೀವ, ವೈರಿಗೂ
ಕ್ಷಮೆ ಕೊಡುವ ದೇವಭಾವದ ಮನಸು
ಎಂಥ ದೊಡ್ಡವರಿವರು

ಆತ್ಮ ಸಮರ್ಪಿತ ಮನುಜ, ಜಾತಿ
ಮೀರುತ ನೀತಿ ಸಾರಿದರಿವರು
ಸೇವೆ ಮುಡಿಪಾಗಿರಿಸಿ ಕೊನೆಯ
ಜನವನು ಬಿಡದೆ ಧ್ವನಿಯಾಗಿ ನಿಂದ
ಮಹಾನುಭಾವರಿವರು
ತಾಯಿ ಭಾರತಿ ತನುಜ, ವಿಶ್ವಪಥ
ಹಿಡಿಯುತಲಿ ಮಾನವತೆ ಮೀರಿಹುದು
ಮಾಧವತೆಗೇರಿಹುದು, ಭಾರತದ
ದೇವಸದೃಶ ಮಹಾತ್ಮನೆನಿಸಿಹರು
ನಮ್ಮ ನಾಯಕರಾಗಿಹರು

ದೇವ ಬುದ್ಧನ ತತ್ತ್ವ ಆದ್ಯಂತ
ತನಗದುವೆ ನೀತಿಸಾರ
ಜೀವಾಟ ಹೋರಾಟ ಮೇಲಾಟಗಳಲಿ
ಬೆಂಬಿಡದೆ ಹಿಡಿದ ಅಹಿಂಸೆಯೇ ಮುಳುವಾಯ್ತು
ಜೀವಸೆಲೆ ದೇವನಲಿ ಐಕ್ಯವಾಯ್ತು
ಪಾಪ ಸಜ್ಜನಗೆ ಹರಿದಿಹುದು
ಕಣ್ಣೀರಕೋಡಿ ಹೊಳೆ ಅಂದಿನಿಂದಿನವರೆಗೂ

# ಕಂಡೆಯಾ ಗಾಂಧಿ

– ಡಾ॥ ವಸುಂಧರಾ ಭೂಪತಿ

ನಿನ್ನದೇ ನಾಡಿನಿಂದ ಉದಿಸಿದ ಠಾಕುರೀಕಿನ
ಮಂಕಿಬಾತ್‌ನ ಮೋಡಿಗಾರ
ದೇಶವನ್ನಾಳುತ್ತಿರುವುದ ಕಂಡೆಯಾ ಗಾಂಧಿ

ಅಡುಗೆ ಮನೆಗೇ ನುಗ್ಗಿ ಊಟದ ಪಾತ್ರೆಯಲಿ
ಇಣುಕಿ ಅಪವಿತ್ರ ಮಾಡುವ ಪವಿತ್ರತೆಯ
ವಾರಸುದಾರರ ಕಂಡೆಯಾ ಗಾಂಧಿ

ರೈತರ ಹೆಸರಿನಲಿ ಗದ್ದುಗೆಯಲಿ ಕೂತು
ಅವರ ಬದುಕಿನ ಹೋರಾಟವ
ವ್ಯಂಗವಾಡುತಿರುವವರ ಕಂಡೆಯಾ ಗಾಂಧಿ

ನಟ್ಟಿಡುರಾತ್ರಿಯಲಿ ಒಂಟಿಹೆಣ್ಣು
ತಿರುಗಾಡಿದಾಗ ನಿಜವಾದ
ಸ್ವಾತಂತ್ರ್ಯದ ಉದಯವೆಂದು
ನುಡಿದೆ ನೀನು ಗಾಂಧಿ

ಅದೇ ಹೆಣ್ಣನ್ನು ನಾಲ್ಕು ಗೋಡೆಗಳ ನಡುವೆ
ಕೂಡಿಟ್ಟು ಸವಾರಿ ಮಾಡುತಿರುವ
ಸಂಸ್ಕೃತಿ ರಕ್ಷಕರ ಕಂಡೆಯಾ ಗಾಂಧಿ

ಬಹುತ್ವದ ಸಂಸ್ಕೃತಿಯ
ನಾಶಗೈಯುತ ಏಕರೂಪೀ
ಸಂಸ್ಕೃತಿಯ ಹೇರುವ ಹುನ್ನಾರದ
ಮುಖವಾಡ ಹೊತ್ತ ಜನರ ಕಂಡೆಯಾ ಗಾಂಧಿ

# ಭಾರತದ ಕುಲನಾರಿ ಕಸ್ತೂರಬಾ

– ಪ್ರೊ. ಲೀಲಾ ವಾಸುದೇವ್

ಕಸ್ತೂರಬಾ ಅವರ ಅಕ್ಕರೆಯ ನೆನಪು
ಕಸ್ತೂರಿ ಪರಿಮಳದಂತೆ ಕಂಪು
ಸರಳ ಜೀವನವನಪ್ಪಿ, ಸ್ವಹಿತವ ತ್ಯಜಿಸಿ
ದೇಶಕ್ಕಾಗಿ ಮಡಿದ ಮಮತಾಮಯಿ

ಅರಿವು ಮೂಡುವ ಮೊದಲೆ ಬಂದು ಗೃಹಿಣಿಯ ಪಟ್ಟ
ಮಡಿಲಲಿ ತುಂಬಿತು ಪುತ್ರರ ವ್ಯಾಮೋಹದ ಕೂಟ

ತಾಯ್ನಾಡ ಬಿಟ್ಟು ಕಟ್ಟುನಿಟ್ಟಿನ ಕೋಟೆ ಕಟ್ಟಿ
ಆಶ್ರಮ ವಾಸಿಗೆ ಆದಿರಿ ತತ್ತ್ವ ನಿಷ್ಠೆಯ ಮಾರ್ಗದರ್ಶಿ

ಸ್ವಾತಂತ್ರ್ಯ ಸಂಗ್ರಾಮದಿ ಶ್ರಮವಹಿಸಿ ಸೆಣಸಾಡಿ
ಬದುಕ ಸುಧೀರ್ಘ ಪಯಣದಿ ಯಶಸ್ವಿಯಾದ ಭಾರತ ರಮಣಿ

ತ್ಯಾಗಜೀವಿಯ ಸತಿಯಾಗಿ ನೋವಲ್ಲಿ ನಲಿವ ಕಂಡು
ದಿಟ್ಟ ಹೆಜ್ಜೆಯ ಗುರುತಲಿ ಅರಳಿಸಿದಿರಿ ಸ್ತ್ರೀಯ ಪ್ರತಿಭೆ

ಸದ್ಗೃಹಿಣಿ ಸನ್ಮಾತೆ ಬಾಪುವಿನ ಸ್ಫೂರ್ತಿದಾತೆ
ಸರಿದಿಹಿರಿ ನೇಪಥ್ಯಕೆ ಸೆರೆಮನೆಯ ವಾಸದಲೆ

ಸೌಜನ್ಯ : ಅಮರ ಬಾಪು ಚಿಂತನ ಮಾಸಿಕ – ಮಾರ್ಚ್ – ಏಪ್ರಿಲ್ 2018

# ಸಂಚಲನ

– ಈಶ್ವರ ದೈತೋಟ

ಕೈಯಲ್ಲಿ ದಂಡ ಹಿಡಿದಾಗ ದಂಡೀಯಾತ್ರೆ ಮುಂದಾಳು
ತ್ರಿವರ್ಣದಡಿಯಲ್ಲಿ ಸ್ವತಂತ್ರಾಡಳಿತ ಹೋರಾಟದ ಸೇನಾನಿ
ತಕಲಿ, ಚರಕ ಖಾದಿಯಭಿಮಾನದೆಡೆಯಲ್ಲಿ ಸರಳ ಬಿಳಿ ಮಿಂಚು
ಲೇಖನಿ ಕೈತೆತ್ತಿದರೆ ಸ್ವತಂತ್ರ ದೇಶಾಭಿಮಾನಿ
ಬ್ರಿಟಿಷರ ನಡುಗಿಸುವ ಜನಸಾಗರದ ಕೇಂದ್ರಬಿಂದು
ಅಭ್ಯುದಯ ಪತ್ರಿಕೋದ್ಯಮ ಪ್ರವರ್ಧಕರು ನಮ್ಮ ಗಾಂಧೀಜಿ

ಕಾನೂನು ಕುಳಿತು ಕರಿಕೋಟು ಧರಿಸಿ ವಕೀಲರಾದವರು
ಗುಜರಾತಿನ ಪೋರಬಂದರದ ಮೋಹನದಾಸ
ಉದ್ಯೋಗ ನಿಮಿತ್ತ ದಕ್ಷಿಣ ಆಫ್ರಿಕಾದತ್ತ ತೆರಳಿದ ಬಳಿಕ
ಬಿಳಿಯರಾಫ್ರಿಕದ ದಬ್ಬಾಳಿಕೆ ವಿರುದ್ಧ ಸೆಟೆದು ಕರಿಪತಾಕೆ ಹಿಡಿದರು
ಸಜ್ಜನ ಭಾರತೀಯ ವ್ಯಾಪಾರಿಗಳು, ಸ್ಥಳೀಯ ಸರಳ ಮನಸ್ಸಿನ
ಕರಿಯರ ಮೇಲಣ ದಬ್ಬಾಳಿಕೆ ಸಹಿಸದೆ ಪ್ರತಿಭಟಿಸಲು
ಇಂಡಿಯನ್ ಒಪೀನಿಯನ್ ಪತ್ರಿಕೆ ಸ್ಥಾಪಿಸಿ ಮುನ್ನಡೆದರು

ಕಳಕಳಿಯ ಕರೆ ಬಂದಾಗ ಮಾತೃಭೂಮಿಗೆ ಮರಳಿ
ಸೆಟೆದು ನಿಂತು, ಬರಿಕಾಲೂರಿ ನಡೆದು ಸ್ವತಂತ್ರ ಸೇನಾನಿಯಾದರು
ಬ್ರಿಟಿಷರ ದಬ್ಬಾಳಿಕೆಗೆ ಧ್ವನಿ ಎತ್ತಿ ಪ್ರತಿಭಟಿಸಲು ಶುರು ಹಚ್ಚಿದರು
ತಕಲಿ, ಚರಕ ಹಿಡಿದು ಮಣ್ಣಿನಲ್ಲರಳಿದ ಪೊದೆ ಹತ್ತಿಯ
ಜೊತೆ, ಜೊತೆಗೆ ಲೇಖನಿ ಬಿಡದೆ ಬರೆದರು

ದೇಶಪ್ರೇಮ, ಹರಿಜನೋದ್ಧಾರ, ಮಹಿಳಾ ಪುನರುತ್ಥಾನ
ಸರ್ವ ಸಮಾನತೆ, ಸ್ವತಂತ್ರ ಹೋರಾಟದ ಸಂದೇಶವನ್ನು
ಮನೆ, ಮನೆಗಳಿಗೆ ಬಿಕ್ಕಿ ದಾಖಲಿಸುವ ಜರ್ನಲಿಸ್ಟ್ ಆದರು
ಗುಜರಾತಿ, ಹಿಂದಿ, ಇಂಗ್ಲೀಷ್ ತ್ರಿಭಾಷ ಸೂತ್ರದಲಿ
ಪತ್ರಿಕೆಗಳ ಸಂಪಾದಕರಾಗಿ ದಾಪುಗಾಲಿಟ್ಟರು
ಪಾದಯಾತ್ರೆ, ಉಪವಾಸ ಅಹಿಂಸಾ ಸತ್ಯಾಗ್ರಹವೆಂದು ಹಠ ಹಿಡಿದರು

ಚಳವಳಿಯನ್ನು ಹರಡಿ ಬ್ರಿಟಿಷರನ್ನು ಬೆಚ್ಚಿಸದರು, ಮೈನಡುಗಿಸಿದರು
ದೇಶಾದ್ಯಂತ ಸಂಚಲದಲೆ ಹರಡಿದರು
ಬ್ರಿಟಿಷರನ್ನೋಡಿಸಲು ಸ್ವಾತಂತ್ರ್ಯ ಪ್ರೇಮಿಗಳನ್ನೆಚ್ಚರಿಸಲು
ಪಂಚಬೆರಳುಗಳ ನಡುವಣ ಭದ್ರತೆಯ ಲೇಖನಿಯನ್ನು
ಕಳಕಳಿಯಿಂದ ಹಿಡಿದು ಅಭ್ಯುದಯದ ಭಾಷ್ಯ ಬರೆದೇ ಬಿಟ್ಟರು
ನಮ್ಮ ದೇಶದ ತಾತ-ಜಗತ್ತಿಗೇ ಸಂದೇಶ ಸಾರಿದರು ಗಾಂಧೀಜಿ

# ಅಜರಾಮರ

– ಇಂದಿರಾ ಕೃಷ್ಣಪ್ಪ

ಯಾರೋ ಬೆತ್ತಲೆ ಎಂದು
ತಾನೇ ಅರೆಬೆತ್ತಲೆಯಾಗಿರಲು
ತೀರ್ಮಾನಿಸಿದ

ಯಾರೋ ಮಾಡುವ
ಶೌಚ ಸ್ವಚ್ಚ ಕೆಲಸಗಳ
ತನ್ನಿಂದಲೇ ಮೊದಲುಗೊಂಡು
ಹೆಂಡತಿ ಮಕ್ಕಳು ಮೊದಲು
ಮಾಡಬೇಕೆಂದು ಆರಂಭಿಸಿದ

ಯಾರೋ ವಿದೇಶಕ್ಕೆ ಓದಲು
ಹೋಗುವವರಿಗೆ
ಸಹಾಯ ಮಾಡುವ ಈತ
ಹಡೆದ ಮಗನ ವಿದ್ಯಾಭ್ಯಾಸಕ್ಕೆ
ಕ್ಯಾರೆ ಎನ್ನಲಿಲ್ಲ

ಹೀಗೆ ಉದ್ದಕ್ಕೂ ಲೆಕ್ಕ ಮಾಡಿದರೆ
ಅರೆಹುಚ್ಚನ ಪಟ್ಟ ಕಟ್ಟಿ ನೇತಾಕಬೇಕು
ಆದರೆ ಈತ ಕೃಪಣನಾದದ್ದು,
ಕಠಿಣನಾದದ್ದು
ಇನ್ನೊಬ್ಬರ ಹಸಿವು,
ಅವಮಾನಗಳಿಗೆ

ತನಗೆ ಎಲ್ಲ ಸೌಲಭ್ಯಗಳು
ಕಾಲಬುಡದಲ್ಲಿ ಬಿದ್ದು
ಸಾಲುಗಟ್ಟಿದ್ದರೂ ವಿಚಲಿತನಾಗದೆ
ಧ್ಯಾನಸ್ಥ ನಡೆಯಲಿ
ನಿರಾಕರಿಸೋ ಧೀರನಾದ

ಬದುಕೆಂದರೆ ಬಳಸಿ
ಬೀಸೋ ಪಾಳೆಯಲ್ಲ
ಬಳಲಿ ಬೆಂಡಾದ
ಕಷ್ಟಗಳ ಕುಂಡದಲಿ
ಉರಿದು ಹೈರಾಣಾದ
ದೈವಗಳಿಗೆ ಉಸಿರಾಗುವುದು
ಬಸಿರಾಗುವುದು

ಕಡೆಗೊಮ್ಮೆ ನಳನಳಿಸೋ
ಕಂದನಂತೆ ಹೊಸ ಯುಗದ
ಬದುಕನೀಸಲು

ಅವನು ಇವನು ಎಲ್ಲಾ
ಪೊರೆ ಕಳಚಿ
ಹೋರಾಟಗಳಲ್ಲಿ ಮೆರೆಯಬೇಕು
ಆಗಲಾದರೂ ಅವನ
ಪಿಸುಮಾತುಗಳು
ನಮ್ಮ ಮೈಮನಗಳಿಗೆ
ತಾಗಬಹುದು
ಜಗವನಾವರಿಸಿದ
ಕತ್ತಲು ಕಳೆಯಬಹುದು

# ಮಹಾತ್ಮ

– ಗಂಗಾಧರ ಚಿತ್ತಾಲ

ನಿನ್ನ ನೆತ್ತರು ನೆಲಕು ಚೆಲ್ಲಿ ದಂದು
ಮಣ್ಣು ನಡುಗಿತು, ಹಗಲ–ಹೂ ಬಾಡಿತು.
ನರನು ಕೆರಳುವ ಹುಂಬ, ಬಾಳು ಯೂಪಸ್ತಂಭ,
ಉತ್ತಮರ ಬಲಿ ಇಲ್ಲಿ – ಬಾನಾಡಿತು.

ಮನುಕುಲದ ರಕ್ತಮಯ ಇತಿಹಾಸ ಕೂಗಿತ್ತು
ನೆಲವು ನಂದನವಾಗಲೇನು ಬೇಕು?
ತಿಳಿವು ತುಂಬಿದ ಕಣ್ಣು, ಒಲವು ತುಂಬಿದ ಎದೆಯು
ಛಲವನರಿಯದ ಬದುಕು, ಇಷ್ಟೇ ಸಾಕು.

ಅಂತೆ ತವಕದಿ ಬಂದೆ ಮನದ ಮಮತೆಯತಂದೆ
ಹಗೆಯ ಕಾಳೋರಗವ ತವಿಪೆನೆಂದ
ಇತ್ತ ಹಾಲಾಹಲವು ಅತ್ತ ಕೋಲಾಹಲವು
ಅಮೃತಹಾಸವ ಬೀರಿ ನಡೆದೆ ಮುಂದೆ.

ಬತ್ತಿ ದೆದೆಗಳಲು ತಿಳಿವಿನ ತೇವು ಒಡೆದಿತ್ತು.
ಶಾಂತಿ–ಸಮರಸಕ ಇದು ಮೊದಲೆನಿಸಿತು.
ಕಲ್ಲೆದೆಯ ಸೀಮೆಯಲು ಹೂ–ಕುಸುರು, ಆಹಾ ಇದು
ಬರುವ ಭಾಗ್ಯದ ಯುಗದ ತೊದಲೆನಿಸಿತು.

ನರನ ಕಾಡಿನ ನಡತೆ ಇನ್ನೂ ಮುಗಿದಿರಲಿಲ್ಲ.
ನಿನ್ನ ಬೇಟೆಗೆ ತಾಯಿ–ಮಣ್ ನಡುಗಿತು.
ನರನು ಕೆರಳುವ ಹುಂಬ, ಬಾಳು ಯೂಪಸ್ತಂಭ,
ಇಂಥ ಬಲಿ ಇನ್ನೇ ಸೋ ! ಬಾನ್ ಗುಡುಗಿತು.

# ಗಾಂಧೀಜಿ ನೀ ಇರಬೇಕಿತ್ತು

– ಕೃಷ್ಣ ಹಾನ್‌ಬಾಳ್

ಗಾಂಧೀಜಿ ನೀ ಇಂದು ಇರಬೇಕಿತ್ತು
ಸ್ವಾತಂತ್ರ್ಯಕ್ಕಾಗಿ ಹೋರಾಡಿದೆ ನೀನಂದು
ಸ್ವದೇಶಕ್ಕಾಗಿ ವಿದೇಶಿಯ ಸುಡಿಸಿದೆ
ನಮ್ಮ ಉಪ್ಪಿಗಾಗಿ ಸತ್ಯಾಗ್ರಹ ಮಾಡಿ ಉಳಿಸಿದೆ
ತುಂಡು ಬಟ್ಟೆ ಉಟ್ಟು ವಿದೇಶಿ ಸೂಟನು ಕಳಚಿದೆ
ನಾಡು ನುಡಿಗಾಗಿ ನೀ ಉಪವಾಸ ಕೂತೆ
ಬಡಕಲು ಮೈಯ ತೋರಿ
ಜಗವನ್ನೇ ನಿನ್ನತ್ತ ತಿರುಗಿಸಿದೆ
ಗಾಂಧೀಜಿ ನೀ ಇಂದು ಇರಬೇಕಿತ್ತು
ಕ್ರಾಂತಿ ಶಾಂತಿ ತ್ಯಾಗದಿ ಬಂದ ಸ್ವಾತಂತ್ರ್ಯ
ಇಂದು ಪಟ್ಟದಲ್ಲು ಕೂತು ಮೆರೆಯುತಿದೆ
ಬಡವರು ಬಡವರಾಗಿಯೇ ಇದ್ದಾರೆ
ಶಿಕ್ಷಣ ಇನ್ನೂ ಸಮಾನತೆ ಪಡೆದಿಲ್ಲ
ಲಂಚ ರಸ್ತೆ ಬದಿಯಲ್ಲಿ ರಾರಾಜಿಸುತ್ತಿವೆ
ಕೇಳ ಹೋದವರ ಬಟ್ಟೆ ಕಳಚಿ ಬೆತ್ತಲೆ ಮಾಡುತಿಹರು
ಅಬಲೆಯರು ಇನ್ನೂ ನಡುರಾತ್ರಿ
ರಸ್ತೆಯಲಿಳಿಯುವಂತಿಲ್ಲ
ರಾಮರಾಜ್ಯದ ಕಸನು ಇನ್ನೂ ಹುಸಿಯಾಗಿದೆಯಲ್ಲ
ಗಾಂಧೀಜಿ ನೀ ಬರಬೇಕು ಮತ್ತೆ
ಈ ಅವ್ಯವಸ್ಥೆಯ ಸರಿಮಾಡಲು
ನೀ ಮತ್ತೆ ಬರಲೇಬೇಕು

# ಮತ್ತೆ ಜನಿಸಿ ಬಾ ಗಾಂಧಿ

– ಎಂ.ಡಿ. ಗೋಗೇರಿ

ನೆನೆಸುವದು ಜಗವೆಲ್ಲ ಜನಿಸಿ ಬಾರಯ್ಯ ತಂದೆ
ದೀನ ದಲಿತರು ನಿನ್ನ ಬೆನ್ನ ಹಿಂದೆ
ಬಡವ ಬಲ್ಲಿದರೆಂಬ ಮೇಲು ಕೀಳುಗಳೆಂಬ
ಕೊಳೆಯ ಬೆಳಗಲು ಮುಂದೆ ಕಾತರಿಸಿ ಬಂದೆ

ಅಹಿಂಸೆ ನಿನ್ನಯ ಉಸಿರು ನ್ಯಾಯ ಅನ್ನವೇ ನೀರು
ಆತ್ಮಶುದ್ಧಿಗೆ ಸತ್ಯ ನಿತ್ಯ ದೇವರು
ಅನ್ಯಾಯ ಅಧಿಕಾರ ಸುಳ್ಳು ಆಡಂಬರ
ಕನಲಿ ಕಂಗಾಲಾದೆ ನೋಡಿ ಬಡವರ

ದಕ್ಷಿಣ ಆಫ್ರಿಕೆಯಲ್ಲಿ ದಾಸ್ಯ ದಳ್ಳುರಿಯಲ್ಲಿ
ಸುಟ್ಟು ಸುಲಿದರು ದುಷ್ಟ ಬಿಳಿಯರಲ್ಲಿ
ಸಾವಿರಾರು ಕೂಲಿ ಜನರ ಬೆನ್ನು ಕಟ್ಟಿ
ಗುಲಾಮಗಿರಿಯನ್ನು ಮೆಟ್ಟಿ ನಿಂತೆ ಎದೆತಟ್ಟಿ.

ಪಾರತಂತ್ರ್ಯದ ಬಲೆಗೆ ಸಿಲುಕಿರಲು ಭಾರತವು
ನಿನ್ನ ಬರುವನೆ ಅಹಿಂಸೆ ದಂಡವ ಪಿಡಿದು
ಸ್ವಾತಂತ್ರ್ಯವನೆ ಇತ್ತೆ ಬಾಳು ತೆತ್ತು.

ಹಿಂದು ಮುಸ್ಲಿಂಮರನು ಒಂದೇ ಮನೆಯವರೆಂದಿ
ಅಂತೆ ನಡೆಯಲು ನಿನ್ನ ಪ್ರಾಣ ತೆಯ್ದಿ
ಜಾತಿ ಜ್ವಾಲೆಯ ಪರಡಿ ಮುಗ್ಧ ಜನ ಹುರುಪಳಿಸೆ
ಹಗಲಿರುಳು ಬೇಡುತ್ತಾ ಶಾಂತಿ ತಂದೆ

ದಲಿತರ ಏಳಿಗೆಗೆ ಮುಡುಪಿಟ್ಟೆ, ನಿನ್ನ ಹರಣ
ಉಕ್ಕಿ ಬರುತಿತ್ತಪ್ಪ ಅಂತಃಕರಣ
ಜಗದಗಲ ಮುಗಿಲಗಲ ನಿನ್ನೊಲವು ಚಾಚಿರಲು
ಗೋಡ್ಸೆ ಗುಂಡಿಗೆ ಮಾತ್ರ ಬರಲಿಲ್ಲ ಕರುಣೆ.

# ನನ್ನ ಸಂಶೋಧನೆ ಹಾಗೂ ನಿಜ

– ಚಂದನ ಡಿ.ಓ.

ಭಾರತೀಯ ಸ್ವಾತಂತ್ರ್ಯ ಚಳುವಳಿ
ಭಾರತೀಯ ಅಸಹಕಾರ ಚಳುವಳಿ
ಕೈಮಗ್ಗದ ಖಾದಿ ಬಟ್ಟೆಯ ಕೌತುಕ
ಭಾರತದ ನೀಲಿ ನಕ್ಷೆಯ ಧೀಮಂತ ನಾಯಕ

ಮಹಾತ್ಮ ಗಾಂಧೀಜಿ, ಅಸಹಕಾರ ಚಳುವಳಿ
ಗಾಂಧಿ ಅವರು ಪೋರಬಂದರ್‌ನಲ್ಲಿ ಜನಿಸಿದರು
ನ್ಯಾಷನಲ್ ಕಾಂಗ್ರೆಸ್‌ನಲ್ಲಿ ಪಾಲ್ಗೊಂಡರು
ನ್ಯೂಯಾರ್ಕ್‌ನ ಯೂನಿಯನ್ ಸ್ಕೇರ್‌ನಲ್ಲಿ ಪ್ರತಿಮೆ

1892ರಲ್ಲಿ ಅವರು ಉಪವಾಸ ಸತ್ಯಾಗ್ರಹ ಕೈಗೊಂಡರು
1947ರಂದು ಸ್ವಾತಂತ್ರ್ಯ ತಂದುಕೊಟ್ಟರು ಭರತ ಖಂಡಕ್ಕೆ

ಇವರ ಸಾಧನೆ ಅಪಾರ
ಇವರು ನಮ್ಮ ಹೆಮ್ಮೆ, ದೇಶಕ್ಕೆ ಕೀರ್ತಿ
ಗಾಂಧೀಜಿ ಮೊಟ್ಟಮೊದಲ ಸತ್ಯಾಗ್ರಹ
'ಗಾಂಧಿ' ಎಂಬುವುದೇ ಗೌರವದ ಸಂಕೇತ
ಮಹಾತ್ಮರಲ್ಲಿ ಮಹಾತ್ಮ ಗಾಂಧಿ ಎಂದಿಗೂ ಅಮರ
ಸ್ವಚ್ಛ ಭಾರತದ ಕನಸುಗಾರ ಗಾಂಧಿ

# ಮಹಾತ್ಮ ಗಾಂಧಿ

– ಬಾಲಾಜಿ ಟಿ.ಆರ್.

ಭಾರತಮಾತೆಯ ಹೆಮ್ಮೆಯ ಸುತ
ಅವನೇ ನಮ್ಮರಾಷ್ಟ್ರಪಿತ

ಪೋರಬಂದರಿನ ಮೋಹನದಾಸ
ಮಕ್ಕಳಿಗೆಲ್ಲಾ ಗಾಂಧಿತಾತ
ರವೀಂದ್ರಕರೆದರು ಮಹಾತ್ಮನೆಂದು
ಆತ್ಮೀಯರಿಗೆಲ್ಲಾ ಬಾಪೂಜಿಆದರು

ಸರ್ವರಿಗೂ ಸಮಬಾಳು
ಸರ್ವರಿಗೂ ಸಮಪಾಲು
ಅವರ ಈ ಧ್ಯೇಯವಾಕ್ಯ
ನಮಗದುವೇ ವೇದವಾಕ್ಯ

ಶಾಂತಿಯಿಂದಲೇಆಂಗ್ಲರ ಹೊಡೆದೋಡಿಸಿದ।
ಸ್ವತಂತ್ರ ಭಾರತವ ನಮಗೆ ಕೊಡಿಸಿದ
ಕರಮಚಂದ ಗಾಂದೀಜೀಗೆ ಜೈ ಎನ್ನುವಾ
ಅವರ ಪಾದಗಳಿಗೆ ಶಿರಬಾಗಿ ನಮಿಸುವಾ
ಮಹಾತ್ಮರಿಗೆ ಜೈ ಎನ್ನುವಾ
ಅವರ ಮಾರ್ಗದಲಿ ನಾವು ನಡೆಯುವ

# ಗಾಂಧೀಜಿ

– ದುಗ್ಗೇನಹಳ್ಳಿ ಸಿದ್ಧೇಶ

ಕತ್ತಲೂರಿಗೆ ದೀಪ ಹಿಡಿದು ಬಂದ
ಊರಿಗೆ ದೀಪವಾದೆ
ಸಾಮಾನ್ಯರಲ್ಲಿ ಸಾಮಾನ್ಯವಾಗಿ
ಅಸಮಾನ್ಯನಾಗಿ ಬೆಳೆದು ಸಂತನಾದೆ

ಸಣ್ಣ ಮಕ್ಕಳಿಗೆ ತಾತನಾದೆ
ದೇಶಕ್ಕೆ ಅಪ್ಪನಾದೆ
ಜಗತ್ತಿಗೆ ಶಾಂತಿಧೂತನಾಗಿ
ಅಹಿಂಸಾ ಶಿಖರವೇ ಆದೆ

ರಾಮ ಶಿವ ಕೃಷ್ಣನನ್ನೂ ಅಪ್ಪಿದೆ
ಅಲ್ಲಾ ಏಸೂವನ್ನೂ ಒಪ್ಪಿದೆ
ಎಲ್ಲರೂ ನಮ್ಮವರೆಂದು ತಬ್ಬಿ
ಪ್ರೇಮ ಮೂರ್ತಿಯಾದೆ

ನುಡಿದಂತೆ ನಡೆದೆ
ನಡೆದಂತೆ ನುಡಿದೆ
ಇದನರಿಯದ ಪಾಪಿ ಹದ್ದು
ನಿನ್ನ ಹೊತ್ತೊಯ್ದಾಗ ಮತ್ತೆ ದೇಶಕ್ಕೆ
ಗ್ರಹಣ ಬಂತಲ್ಲೋ ಕರ್ಮಯೋಗಿ

# ಓ ಸದ್ಗುರುವೇ ನಿನಗೆ ನಮನ

– ಡಾ. ಎಂ.ಕೆ. ಮಂಜುನಾಥ

ಅಜ್ಞಾನ ಅಳಿಸಿ ಸುಜ್ಞಾನ ದೀವಿಗೆ ಬೆಳಗಿಸುವವ
ಅಕ್ಷರವೆಂಬ ದಿವ್ಯಮಂತ್ರವ ಕಲಿಸಿದವ
ಮನದಲ್ಲಿನ ಅಂಧಕಾರವ ಅಳಿಸಿದವ
ಗುರುವೇ ನಿನಗೆ ಯಾರು ಸರಿಸಾಟಿ

ವಿದ್ಯೆ ಬೇಡಿದವರಿಗೆ ಕರುಣೆ ತೋರುವವ
ಅಸಡ್ಡೆ ತೋರುವವರ ಜ್ಞಾನದಂಡದಿಂದ ತಿದ್ದುವವ
ಸಮಸ್ಯೆಗಳ ಜಾಣ್ಮೆಯಿಂದ ಪರಿಹರಿಸುವವ
ಮಹಾಗುರುವೇ ನಿನಗೆ ನೀನೇ ಸರಿಸಾಟಿ

ಕಾಯಾ ವಾಚಾ ಮನಸಾ ವಿದ್ಯೆಯ ಧಾರೆಯೆರೆಯುವವ
ಅಜ್ಞಾತ ವಿಷಯಗಳ ಅರಿವು ಮೂಡಿಸುವವ
ಗುರುವಿಲ್ಲದಿದ್ದರೆ ಗುರಿಸಾಧನೆ ಅಸಾಧ್ಯ
ಗುರುವೊಬ್ಬ ಜೊತೆಗಿದ್ದರೆ ನಮ್ಮ ಬದುಕೇ ಪಾವನ

ಕನಸನ್ನ ಸಾಕಾರಗೊಳಿಸುವ ದಿವ್ಯಮೂರ್ತಿ
ಉಜ್ವಲ ಭವಿಷ್ಯ ನಿರ್ಮಿಸುವ ಮಾರ್ಗದರ್ಶಿ
ಸಮಾಜದ ಅಂಕುಡೊಂಕು ನಿವಾರಿಸುವ ಸೂಕ್ಷ್ಮದರ್ಶಿ
ಓ ಸದ್ಗುರುವೆ ನಿನಗೆ ನನ್ನ ಕೋಟಿ ಕೋಟಿ ನಮನ

---

ಜಗತ್ತನ್ನು ಬದಲಾಯಿಸಬೇಕು ಎಂದು ಬಯಸುವ ನಾವು ಮೊದಲು ಬದಲಾಗಬೇಕು

– ಮಹಾತ್ಮ ಗಾಂಧಿ

# ಗಾಂಧಿ ಮಹಿಮೆ

– ಅನುಷ ಟಿ.ಇ.

ಕರಮ ಚಂದ್ರ ಗಾಂಧಿ ಎನ್ನುವುದು ನಿನ್ನ ಹೆಸರು
ಎಲ್ಲರ ಮನದಲ್ಲಿ ನೀನೆಂದಿಗೂ ಅಮರ
ಶಾಂತಿಯುತವಾಗಿ ಮಾಡಿದೆ ಸ್ವಾತಂತ್ರ್ಯದ ಹೋರಾಟ
ಅದರಿಂದಾದರು ದೇಶದ ಜನರು ಬಂಧಮುಕ್ತರು

ಕೋಟಿ ಕೋಟಿ ಕದ್ದ ಕದೀಮರು
ಮಂತ್ರಿಗಳಾಗಿ ದರ್ಪದಿಂದ ಮೆರೆದಿಹರು
ನ್ಯಾಯ ನೀತಿ ಹಾದಿ ಹಿಡಿದವರು
ಮಸಣದಲ್ಲಿ ಮಣ್ಣಾಗಿ ಹೋದರು
ಗೋಡೆ ಗೋಡೆಗೂ ಅಲಂಕಾರ
ಭಾವ ಚಿತ್ರ ನಿನ್ನದು
ಮೇಜಿನ ಕೆಳಗಿನ ವ್ಯವಹಾರ
ದೇವರೇ ಬಂದರೂ ನಿಲ್ಲಿಸಲಾಗದು

ದೂರದ ಊರಿನ ರಸ್ತೆಗಳಿಗೂ
ನಿನ್ನ ಹೆಸರನ್ನೇ ಇಡುವರು
ನಿನ್ನ ಆದರ್ಶಗಳ ಬೆಳಕಲ್ಲಿ
ಯಾರು ಇಲ್ಲಿ ನಡೆಯರು
ಸತ್ಯ ಅಹಿಂಸೆ ಶಾಂತಿ ಎಂದೇ
ಮಹಾತ್ಮ ನೀನು, ಮಡಿದು ಹೋದೆ
ದಾರಿ ತಪ್ಪಿರುವ ದೇಶಕ್ಕೆ ದಿಕ್ಕು ತೋರಿಸಲು
ಮತ್ತೆ ನೀನು ಹುಟ್ಟಿ ಬರಬೇಕು

# ಅಜರಾಮರ ಗಾಂಧಿ

– ರೇಖ ಬಿ.ಕೆ.

ನೀ ಮಾಸಿಹೋಗದ ಸ್ವಪ್ನವೇ
ಯಾವಾಗಲೂ ಮಿನುಗುವ ನಕ್ಷತ್ರವೇ
ಎಂದೆಂದಿಗೂ ಹಾರಿ ಹೋಗದ ದೀಪವೇ
ವರ್ಣವನ್ನೇ ನಾಚಿಸೋ ಕಾಮನಬಿಲ್ಲೇ

ಮೊಗೆದಷ್ಟು ಮುಗಿಯದ ಅಪಾರ ಗಣಿ ನೀನು
ಜೀವಕೋಶ ಹುಡುಕುವ ಸೂಕ್ಷ್ಮದರ್ಶಕ ನೀನು
ನಮ್ಮ ಜೀವನಾದರ್ಶಗಳಿಗೆ ದಿಕ್ಸೂಚಿ ನೀನು

ದುರ್ಗುಣಗಳ ಓಡಿಸೋ ದೈವಶಕ್ತನೇ
ನಿಸ್ವಾರ್ಥಕತೆಯಿಂದ ಮೆರೆದ ದೇಶಭಕ್ತನೇ
ಕರುಣ ರಸದಲ್ಲಿ ಬಂಧಿ ಮಾಡಿದ ನವಶಕ್ತನೇ
ಸೂರ್ಯ ಮುಳುಗದ ಬ್ರಿಟಿಷ್
ಸಾಮ್ರಾಜ್ಯವನ್ನೇ ಮಣಿಸಿದ ವೀರಯುಕ್ತನೇ

ಸತ್ಯ ನಿಷ್ಠೆಯನ್ನೇ ಮೈಗೂಡಿಸಿಕೊಂಡಿರೋ ಕಲಿ
ನರರ ಸೇವೆಯನ್ನು ಮಾಡಿದ ಮಹಾನ್ ಕಲಿ
ಅಹಿಂಸೆ, ಶಾಂತಿಯ ದಿವ್ಯಾಸ್ತ್ರಗಳಿಂದ ಭಾರತ ಗೆದ್ದ ಸಾಹಸಕಲಿ
ಸ್ವಾತಂತ್ರ್ಯವೆಂಬ ಸುಗಂಧವನ್ನು ಹೆಚ್ಚಿಸಿದ ಬಾಹುಬಲಿ

ಒಬ್ಬ ಮನುಷ್ಯನ ಅತ್ಯದ್ಭುತ ಶಕ್ತಿ ನೀ
ನವಣವನ್ನೇ ನಮ್ಮದಾಗಿಸಿದ ರುಚಿ ನೀ
ಸಾಧಕರಿಗೆ ಆಶಾಕಿರಣವೇ ಆದ ರಾಷ್ಟ್ರಪಿತ ನೀ

# ನನ್ನ ತಂದೆ

– ಪ್ರತಿಭ ಇ.

ಬಡತನದ ಹಾದಿಯಲ್ಲಿ
ಬದುಕಿನ ತೇರನೆಳೆದು
ತಪ್ಪದಂತೆ ತಪವ ಮಾಡಿದ
ಯತಿಯು ನನ್ನ ತಂದೆ

ಹಸಿವ ತಿಂದು ನೊಂದರೂನು
ಕಂದ ಚೆಮದ ಇರಲು ಅದುವೇ
ತನ್ನ ಬದುಕಿನಿಂದ
ಎಂದವನು ನನ್ನ ತಂದೆ

ಇನಿತು ಕಷ್ಟ ಬರದ ಹಾಗೆ
ಕಣ್ಣ ರೆಪ್ಪೆ ಸಲುಹಿದಂತೆ
ಸಾಕಿ ಸಲುಹಿ ಸುಖದಿ
ಬೆಳೆಸಿದವನು ನನ್ನ ತಂದೆ

ಎಲ್ಲದಕ್ಕೂ ಹೆಗಲು ಕೊಟ್ಟು
ಮಕ್ಕಳ ಕನಸು ನನಸು
ಮಾಡಿದವನು ನನ್ನ ತಂದೆ

ಕಷ್ಟಕಾಲದಲ್ಲೂ ಅಳದೆ
ನೋವನ್ನೆಲ್ಲ ಮರೆತು ನಗುತ
ಎಲ್ಲರನ್ನು ನಗಿಸಿದವನು
ನನ್ನ ಪ್ರೀತಿಯ ತಂದೆ

# ಗಾಂಧಿ ಫೋಟೋ ಆಲ್ಬಮ್

– ಜ.ನಾ. ತೇಜಶ್ರೀ

ಹೂಮನಸ್ಸನ್ನರರಳಿಸುವ ಜೀವತಂತ್ರ ಗೊತ್ತಿತ್ತು ನನ್ನಪ್ಪನಿಗೆ,
ಗಾಂಧೀ ಆಲ್ಬಮ್ಮನ್ನು ಕೈಯೊಳಗಿಟ್ಟು ಅವನು ಅಂದು
ಜೀವವನು ಜೀವದ ಜೊತೆ ಬೆಸುಗೆ ಹಾಕುತ್ತ
ಚರಿತ್ರೆಯ ಮೆಕ್ಕಲುಮಣ್ಣ ಹುಗಿದು ನನ್ನೆದೆಯೊಳಗೆ
ಮಣ್ಣಿಗೆ ಮಣ್ಣನ್ನು ಕಸಿಮಾಡಿದ್ದ
ಆ ಆಲ್ಬಮ್ಮಿನ ಜೊತೆಗೇ ಕಳೆದದ್ದು ನನ್ನ ಬಾಲ್ಯ, ತಾರುಣ್ಯ
ಗಟ್ಟಿರಟ್ಟಿನ ಹೊದಿಕೆಯ ಅಗಲ ಪುಸ್ತಕವದು
ಬಾಲ್ಯ ಎಳೆರಟ್ಟೆಗೆ ತುಸುಭಾರವಾಗಿದ್ದ ಅದು
ದಿನಕಳೆದಂತೆ ತೋಳ ಕಸುವಿಗೆ ಮಣಿದ ಹೊತ್ತಿಗೆ

ತೆರೆವ ಮುನ್ನ ಒಳಪುಟ
ಕಣ್ಣನ್ನು ಕಟ್ಟಿಹಾಕುವ ಚಿತ್ರದ ಮುಖಪುಟ ಅದಕ್ಕೆ
ಚರಕದಿಂದ ನೂಲು ತೆಗೆಯುತ್ತಲಿರುವ ಗಾಂಧಿ ತಾತ
ಎಷ್ಟು ತದೇಕ ಅವನ ಕಣ್ಣು, ಚೂರೇ ಮುಂಚಾಚಿತ ತುಟಿ
ವೀರಾಸನದಲ್ಲಿ ದೃಢ ಕಾಲು, ತನ್ಮಯ ದೇಹ
ಇಡೀ ಒಡಲು ತಾನೇ ಚರಕವಾದಂತ ತಾದಾತ್ಮ್ಯ

ತಡವದೆ, ಮುಟ್ಟದೆ ಆ ಬೈಯ ಮುಂದೆ
ಹೋಗಲೊಲ್ಲದು ಮನಸ್ಸು,
ನೇವರಿಸಿದರೆ ಹಗೂರ ಬೆರಳಲ್ಲಿ
ಅವನ ಕೈಯೊಳಗಿನ ನೂಲಿನೆಳೆಯನ್ನು
ಮಿಸುಕಿದಂತೆನಿಸುತ್ತಿತ್ತು ನನ್ನ ಎದೆ ನರತಂತು

ತಿರುಗಿಸಿದರೆ ಪುಸ್ತಕದ ರಟ್ಟು
ಒಳಗಿನೊಂದೊಂದು ಚಿತ್ರದೊಳಗೆ ಅಷ್ಟೊಂದು ಜೀವ!
ಪುಟ್ಟಮಗು ಗಾಂಧಿ, ಅಪ್ಪ-ಅಮ್ಮನ ಮುದ್ದಿನ ಪೋರ,

ದೃಢಕಂಗಳ ಯುವಕ, ಕನಸುಗಳ ಬಿತ್ತುವ ಕಣ್ಣಿನ ತಾರುಣ್ಯ,
ಹೆಣ್ಣಿಗೆ ಗಂಡ, ಮಕ್ಕಳ ಅಪ್ಪ, ಹೋರಾಟದ ಕಿಚ್ಚು,
ರೈಲು, ಹಡಗು, ನಡೆದಲ್ಲೆಲ್ಲ ದಾರಿ, ಬಿತ್ತಿದಷ್ಟೂ ಮೊಳಕೆ,
ಬೆಳೆದದ್ದೆಲ್ಲ ಹುಲುಸು
ಎಷ್ಟೆಷ್ಟು ಗಾಂಧಿ ಅಷ್ಟಷ್ಟು ಜೀವಸಂಚಾರ

ಯಾವ ಚಿತ್ರಕ್ಕೂ ಅಡಿಟಿಪ್ಪಣಿಗಳಿಲ್ಲ
ಅಷ್ಟು ಪರಿಪೂರ್ಣ ಒಂದೊಂದೂ ಚೌಕಟ್ಟೂ,
ಕಟ್ಟುಬಿಚ್ಚಿ ನಗುತ್ತದೆ ಚಿತ್ರದೊಳಗಿಂದ ಉಕ್ಕುಕಡಲು
ಮೇರೆಯಿರದ ತೀರದೆಡೆಗೆ ಪ್ರತಿ ಜೀವವನೂ ಮುನ್ನಡೆಸುತ್ತ

ಎಲ್ಲ ಚೆನ್ನಾಗಿತ್ತು, ಏನಾಯಿತು ಕೊನೆಯ ಪುಟದಲ್ಲಿ?
ಗಾಂಧಿ ತಾತಾ! ನಿನ್ನೆದೆಯಿಂದ ಒಸರುತ್ತಿದೆ ರಕ್ತ!
ಸ್ಪಷ್ಟ ಬಂದೂಕಿನ ಮೊನೆಗುರುತು ಎದೆ ಮೇಲೆ...
ಮುಚ್ಚಿದ ಕಣ್ಣುರೆಪ್ಪೆಯ ಮೇಲೆ ಎಷ್ಟೊಂದು ದಣಿವು,
ತುಟಿಯಲ್ಲಿ ಎಂದಿನ ನಿರಾತಂಕ

ಪ್ರತಿ ಬಾರಿಯೂ ನೇವರಿಸುತ್ತಿತ್ತು ನನ್ನ ಪುಟ್ಟ ಕೈ ನಿನ್ನೆದೆಯನ್ನು,
ಕಪ್ಪುಬಿಳುಪು ಚಿತ್ರದೊಳಗೆ ಕಪ್ಪಾಗಿ ಕಾಣುತ್ತಿದೆ
ಹೆಪ್ಪುಗಟ್ಟಿದ ಎದೆ ಮೇಲಣ ರಕ್ತ,
ನನ್ನ ಕೈ ಮಗುಚಿ ಅಂಗೈ ನೋಡಿಕೊಳ್ಳುವ
ಧೈರ್ಯವೇ ಬಾರದು ಮನಸ್ಸಿಗೆ,
ಕಂಪಿಪಿಸುತ್ತಿದೆ ಬೆರಳು ಪುಟ ಮುಚ್ಚಲು

ತೆರೆದೇ ಇದೆ ಗಾಂಧೀ ಆಲ್ಬಮ್ ನನ್ನ ಕಣ್ಣೊಳಗೆ,
ರಕ್ತದ ಕಲೆಯಂಟಿಸಿಕೊಂಡು ಬೆಳೆದ ಅಂಗೈಯೊಳಗೆ,
ಸದಾ ನೋಯುವ ಎದೆಯೊಳಗೆ

# ನಮ್ಮ ಮಹಾತ್ಮ

– ಎಸ್. ವಿಜಯಗುರುರಾಜ

ಗುಜರಾತಿನ ಸುಪುತ್ರ ಕಸ್ತೂರ್‌ಬಾರ ಬಾಳಮಿತ್ರ
ಆಫ್ರಿಕನ್ ಹಕ್ಕುಗಳಿಗಾಗಿ ಹೋರಾಡಿ
ಅಜೇಯನಾದ ಬ್ಯಾರಿಸ್ಟರ್
ಮೇಲು ಕೀಳಿನ ಕತ್ತಲೆಯ ಕಳೆದು
ಐಕಮತ್ಯ ಸಾಧಿಸಿದ ಸಾಧಕ
ಸಾಬರಮತಿ ಆಶ್ರಮದಿ ನೆಲಸಿ
ಚರಕದಿ ನೂಲು ನೇಯ್ದ ಗುರಿಕಾರ
ಮಹೋನ್ನತ ಧ್ಯೇಯಗಳ ಹರಿಕಾರ
ಉಪ್ಪಿನ ಸತ್ಯಾಗ್ರಹದಿ ದಂಡೀಯಾತ್ರೆಯ
ಪಾದ ಸವೆಸಿದ ದಂಡನಾಯಕ
ಉಪವಾಸ ಸತ್ಯಾಗ್ರಹಗಳ ಕೈಗೊಂಡು
ಹರಿಜನ ಅಸ್ಪೃಶ್ಯತೆಗಳ ನಿವಾರಿಸಿ
ಮದ್ಯಪಾನ ಚಳುವಳಿಗಳ ಮುನ್ನೆಡಿಸಿದ ಮಹಾತ್ಮ
ಕಸ್ತೂರ್‌ಬಾ ಆಶ್ರಮದ ಆಶ್ರಯಧಾತೆ
ಅನಾಥೆ ಲಕ್ಷ್ಮಿಯ ಲಾಲಿಸಿದ ಮಹಾಮಾತೆ
ಸೇವಾಗ್ರಾಮದ ಕರ್ಮಭೂಮಿಯಲಿ
ಕುಷ್ಠರೋಗಿಗಳ ಪಾಲಿಸಿದ ಶುಶ್ರೂಶಕಿ
ಖಾದಿಯ ಒರಟಿನಲಿ ಮೃದು ಮನಸ ಸಾಧ್ವಿ
ಧರ್ಮ ತ್ಯಾಗಗಳ ಸೇವಾ ಸಂಘರ್ಷಗಳಲಿ
ಬಾಪುವಿನ ಬಲಗೈ ಆದ ಬಾ
ಭಾರತಾಂಬೆಯ ಸೆರೆಯ ಬಿಡಿಸಲು ಬ್ರಿಟೀಷರ
ಕಪಿಮುಷ್ಠಿ ಸಡಿಸಲಿಸಲು ಸೆರೆಮನೆಯೇ ಮನೆಯಾಗಿಸಿದ
ಬಾಪೂ ಬಾ ರ ಜೀವನಯಾನ ಸ್ವಾತಂತ್ರ್ಯ ತಂದಿತ್ತು
ಸ್ವಾತಂತ್ರ್ಯ ಗೀತೆ ಹಾಡಿ ಹೇ ರಾಮ್ ಹೇ ರಾಮ್
ಎನುತ ಅಮರನಾದ ನಮ್ಮ ಮಹಾತ್ಮ

# ಗಾಂಧಿ ನಿಶ್ಚಿತ ! ಅನಿಶ್ಚಿತ !

– ಎಲ್. ನರಸಿಂಹಯ್ಯ, ತೊಂಡೋಟಿ, ತುಮಕೂರು

ಗಾಂಧೀಜಿ ಮಾತೃಭೂಮಿಗೆ ಹಿಂದಿರುಗಿ
ನೂರು ವರ್ಷವಾಯಿತೆಂದು ನಿಶ್ಚಿತ
ದೇಶದೆಲ್ಲೆಡೆ ಸಂಚಲನ ಮೂಡಿಸಿ
ಸ್ವಾತಂತ್ರ್ಯ ಸಾಧಕರೆನಿಸಿದ್ದೂ ನಿಶ್ಚಿತ
ಆದರೆ, ಆ ಸಾಧಕನ ನಡೆ–ನುಡಿಗಳು ಅದೆಷ್ಟು
ನಮ್ಮಲ್ಲಿ ಇಳಿದು ಉಳಿದಿವೆಯೆಂಬುದು ಮಾತ್ರ ಅನಿಶ್ಚಿತ!

ಗಾಂಧೀ ಈ ದೇಶದಲ್ಲಿ ಹುಟ್ಟಿ ಬೆಳೆದುದು
ಚಾರಿತ್ರಿಕ ಘಟನೆಯೆಂಬುದು ನಿಶ್ಚಿತ
ಸತ್ಯ–ಅಹಿಂಸೆಗಳ ಹಾದಿಯಲ್ಲಿ ನಡೆದ ಅವರು
ಪ್ರಕ್ರಿಯೆಗಳ ಪ್ರವರ್ತಕರಾದುದೂ ನಿಶ್ಚಿತ
ಆದರೆ, ಅವರು ಬಾಳಿ ತೋರಿದ ಮಾರ್ಗ–ಮೌಲ್ಯಗಳು
ನಮ್ಮಲ್ಲಿಯೂ ಉಸಿರಾಡುತ್ತಿವೆ ಎಂಬುದು ಮಾತ್ರ ಅನಿಶ್ಚಿತ!

ಗಾಂಧೀ ಎಂದಾಕ್ಷಣ, ಹೊಗಳಲೆಂದೇ
ಇಂದಿಗೂ ವೇದಿಕೆ ಸಿದ್ಧವೆಂಬುದು ನಿಶ್ಚಿತ
ಸದ್ಗುಣಗಳ ದೊಡ್ಡಮಾಲೆಯನ್ನವರ ಕೊರಳಿಗೆ ಹಾಕುವುದಂತೂ
ನಿಶ್ಚಿತ! ಆದರೆ, ಆ ಗುಣಗಳಲ್ಲಿ ಸ್ವಲ್ಪ ನಮಗೂ ಇರಲೆಂಬುದು
ನೆನಪಿಸಿಕೊಳ್ಳುವುದು ಮಾತ್ರ ಅನಿಶ್ಚಿತ!

ತತ್ತ್ವರಹಿತ ರಾಜಕೀಯ 'ಪಾಪ' ಎಂದ ಆ ಗಾಂಧೀ (ಇದ್ದಿದ್ದರೆ)
ನೋಯುತ್ತಿದ್ದರೆಂಬುದು ನಿಶ್ಚಿತ, ಅಸಮ ಸಹನೆ–ಪ್ರೀತಿಗಳ ಅವರು
ಈಗ ಉಪವಾಸ ಮಾಡುತ್ತಿರಲಿಲ್ಲವೆಂಬುದೂ ನಿಶ್ಚಿತ, ಬದಲಾಗಿ
ತಾಳಿಕೊಂಡು ಬಾಳಲಾಗದೆ ನಿಂತೆಡೆ, ಉಸಿರು ಕಟ್ಟಿ
ಬೀಳದಿರುತ್ತಿರಲಿಲ್ಲವೆಂಬುದು ಮಾತ್ರ ಅನಿಶ್ಚಿತ!

ಸೌಜನ್ಯ : ಅಮರ ಬಾಪು ಚಿಂತನ ಮಾಸಿಕ – ಮಾರ್ಚ್ – ಏಪ್ರಿಲ್ 2016

# ಹೇ ರಾಮ್

– ಚ.ಶ್ರೀ

ಹುಟ್ಟಿದ್ದು ಬೆಳೆದದ್ದು ಸಿರಿತನದ ಮಡಿಲಲ್ಲಿ
ಪ್ರೀತಿಯ ಪೋಷಕರ ಆರೈಕೆ
ಅನ್ಯ ಸಮಾಜದ ಹಿತೈಷಿಗಳಿಂದ ಸಾಗರೋತ್ತರ ಜ್ಞಾನಾರ್ಜನೆಗೆ
ಯಾರಿಗೂ ಬಗ್ಗದೆ, ಜಗ್ಗದೆ ನಡೆದಾಗ ಅಮ್ಮನ ಕಟ್ಟಪ್ಪಣೆ
ಎಲ್ಲರಂತೆ ನಾನು ಎಂದು, ಸ್ನೇಹಿತನ ಮಾತಿಗೆ ಮರುಳಾಗಿ
ಬಿದ್ದ ಗೊಂದಲದಲ್ಲಿ ಮದ್ಯ, ಮಾಂಸ, ಮಾನಿನಿಯರ ಸಂಗದಿಂದ
ಭೀಮಾರಿಯಾಗಿ ಪಾಶ್ಚಾತ್ಯ ಸಂಸ್ಕೃತಿ ವೇಷಗಳಿಗೆ ಮರುಳಾಗಿ
ತೊಳಲಾಟದಿಂದ ಬಸವಳಿದು, ಎಲ್ಲರಂತೆ ನಾನೆಂದು ಜೋರಾಗಿ
ಬೀಗಲು ಹೋಗಿ ಮಾತನಾಡದೆ ಅವಮಾನಿತನಾಗಿ
ವಯಸ್ಸಿನ ಹುಚ್ಚಾಟದಲ್ಲಿ ಕಲಿಯಬೇಕೆಂಬ
ಹಂಬಲದಲ್ಲಿ ಎದ್ದು ಬಿದ್ದು ಹೊರಬಂದೆ
ಸಾಗರೋತ್ತರ ಪದವಿಯ, ಘನತೆಯಿಂದಲೇ ಇಳಿದು
ಗೊತ್ತಿಲ್ಲದ ನಾಡಲ್ಲಿ ಬಿಳಿಯರ ಆರ್ಭಟ
ಇಲ್ಲಿ ಎಲ್ಲರಂತೆ ನಾವಿಲ್ಲವೆಂದು ತಿಳಿಯಲು ಬಹುದಿನಗಳು ಬೇಕಾಗಲಿಲ್ಲ
ಕಗ್ಗತ್ತಲಿನ ಖಂಡದಲಿ ಅರಿಯದ ಅವಮಾನಕ್ಕೆ ಅಂಜಿ ಸೆಟೆದು ನಿಂತೆ,
ಇದು ವಿಶ್ವದ ಇತಿಹಾಸ ಪುಟಗಳ ಇಣುಕು ನೋಟ
ತಾಳಿ ಸ್ವಲ್ಪ ತಾಳಿ ಎಂದು ಹುಟ್ಟಿದ ಧರ್ಮದಲ್ಲಿ
ಏನಿಲ್ಲವೆಂದು ಸಾರಿದೇ.... ಶತ್ರುಗಳ ಪಾಳೆಯದಲ್ಲೂ
ತಬ್ಬಿ ಮುದ್ದಾಡಿದಾಗ ಆ ಶತ್ರುಗಳಿಗೆ ತಬ್ಬಿಬ್ಬು, ಅವರೆಲ್ಲ ಮನುಜರೇ
ಗುರಿ ಬೇರೆಯೆಂದಾಗ ಮಾತ್ರ ನಮಗೆ ತಿಳಿಯಿತು..
ಸರಿ ತಪ್ಪು ಹುಡುಕುತ್ತಾ ಅರ್ಧಾಂಗಿ ಮಕ್ಕಳು, ಮರಿಗಳ
ಭವಿಷ್ಯ ಯೋಚಿಸುವಾಗ ನಿನ್ನ ಕಣ್ಣಂಚಿನ ನೀರಲ್ಲೂ
ಯಾವ ಕಾಲಕ್ಕೂ ಎಂದೆಂದಿಗೂ ಯಾರಿಗೂ ಸಿಗದ ತಪ್ಪುಗಳು
ಇದರಿಂದಲೇ ನೀ ವಿಶ್ವ ಮಾನವನಾದೆ

ಬೀಗುತ್ತಾ, ಬಲಿಯುತ್ತಾ ಬಂದ ಬ್ರಿಟಿಷರ
ಜಂಘಾಬಲವನ್ನು ಕಿತ್ತೊಗೆದು
ತಲ ತಲಾಂತರದಿಂದ ಬಂದ ಶೋಷಿತರ
ಏಳಿಗೆಗೆ ಹಗಲಿರುಳು, ಯೋಚಿಸಿ ಇಚ್ಛಿಸಿ
ಎಲ್ಲಾ ಶ್ರಮಿಕ, ವರ್ಗದವರ ಸಮಾಜಕ್ಕಾಗಿ ಸಮರ್ಪಿಸಿದೆ
ಎಲ್ಲರೂ ಒಂದೇ, ಒಂದೇ ಎಂದು ಸಾರಿ ಸಾರಿ
ಹೇಳಿದರೂ.. ಒಪ್ಪಲಿಲ್ಲವಲ್ಲ
ಇತಿಹಾಸ ಪುಟದಲಿ ಇಣುಕಿದಾಗ ತೆರೆಯುವುದು ಕಣ್ಣು
ಮಾಡಿದ ಮೋಸವೆಂದು ನಿನಗೆ ತಿಳಿದಾಗ
ಪ್ರಾಣಕ್ಕೂ ಅಂಜದೇ ಆಡಿದಂತೆಯೇ ನೀನು ಮಾಡಿದಾಗ
ಸರಿ ಸರಿ ಎಂದು ಒಪ್ಪಿದರು ಅವರು ಮಾಡಿದ ಕೆಡುಕಿಗೆ
ಇನ್ನು ಬೆಲೆಯಿಲ್ಲವೆಂದು ನೀ ಸುಮ್ಮನಿದ್ದರು
ಈಗಲೂ ನಿನ್ನ ವಿಶಾಲ ವ್ಯಾಪ್ತಿಯ ಮನಸು ಮನನವಿಲ್ಲ
ಹುಟ್ಟುವಾಗಲೇ ವಿಶ್ವ ಬೆಳಕಿನ ಮಗುವಾಗಿ ಬಂದೇ, ತಿಳಿಯದೇ
ನಿನಗೆ ಗೊತ್ತಾಗುತ್ತಿದ್ದ, ಎಲ್ಲ ಊರು ಕೇರಿಗಳ ಪೂರ್ವಿಕರ
ಸುಸಂಸ್ಕೃತರ ಜನ ಜೀವನದ ದಾರಿ ಸಾವಿರಾರು ವರ್ಷಗಳು
ಕಲಿತ ಪಾಠ ತಪ್ಪಬಾರದೆಂದುಪರಿಸರದ, ಪುಣ್ಯಕೋಟಿಯ
ಪಂಚೇಂದ್ರಿಯಗಳ, ಸೊಬಗನ್ನು ಕಂಡು ಮನುಷ್ಯನು
ಈ ಲೋಕದಲ್ಲಿರುವ ಪ್ರಜ್ಞಾಜೀವಿ ಇದು ಜಗದ ನಿಯಮ
ಯಾರು ಮೇಲು, ಕೀಳಿಲ್ಲ ನಾವೆಲ್ಲರೂ ಒಂದೇ
ನಾವೆಲ್ಲರೂ ಒಂದೇ ಎಂದು ಎಷ್ಟೇ ಹೇಳಿದರೂ
ನೀ ನನ್ನವನಲ್ಲ ನೀ ನನ್ನವನಲ್ಲ ನೀ ನನ್ನವನಲ್ಲ
ಒಂದೊಂದು ವರ್ಗದವರು ದೂರ ಮಾಡುತ್ತಾ ಬಂದರು
ನೀ ಬೇಡಿದೇ ಇವರಿಗೆ ಬುದ್ಧಿ ಕೊಡು ಎಂದು
ಆ ದೇವರಿಗೆ ಮೊರೆ ಇಡುವ ಸಮಯದಲ್ಲಿ ನೀ ಪ್ರಾಣ ಬಿಡುವಾಗ
ಹೇಳಿದೆ ಹೇ ರಾಮ್
ಇದು ಭರತ ಖಂಡದ ಇತಿಹಾಸ ಪುಟಗಳಲ್ಲಿ ಹಾಸು ಹೊಕ್ಕಾಯಿತು

ಸೌಜನ್ಯ : ಅಮರ ಬಾಪು ಚಿಂತನ ಮಾಸಿಕ – ಮಾರ್ಚ್ 2014

# ಗಾಂಧೀಜಿ

– ವಿನಾಯಕ

ಅಹುದಿಳೆಯ ಪರಮಾಭಿಮಾನಿಯಿವ,
ಇಳೆಯಣುಗನು ಬಾನ್ ನೋಡುತಿರಲು
ಬಂದಿಲ್ಲಿ ಪ್ರಾರಂಭಿಸಿದ ತನ್ನ ಬಾಳ ಯಾತ್ರೆ
ಧೃವತಾರೆ ಮೂಡಿತಿರಲು
ಹಾಳಾದ ನಂದನಕೆ ಆಗವನು ಬಂದೊದಗಿದ
ಗೆಯ್ಯುತ ಪುನರ್ ನಾಮಕರಣ
ವಸ್ತುಗಳಿಗೆಲ್ಲ ಹೊಸ ಚಂದವನು ತಂದನವನು
ಬೆರಗು ಪಡುತಿರಲು ಹರಣ
ನಿಶಾಚರರ ಮಧ್ಯದಲಿ ಎಳೆಯನಿವ ದೇವಕುವರ
ಕಿರುಬೆರಳಿನಿಂದೆತ್ತಿದ
ಬೆಳಕಿನಾ ಬುಗ್ಗೆಗಳ ಮೇಲ್ ಬಿದ್ದ ಪರ್ವತವನು
ಅಮೃತ ಬೀಜವ ಬಿತ್ತಿದ
ಜಡಜೀವವ್ಯೂಹ ಸುತ್ತಿರುವೀ ಪ್ರಪಂಚದಲ್ಲಿ
ತೋರಿದನು ಚೈತನ್ಯವ
ಉದಿಸಿತ್ತು ನಕ್ಷತ್ರದೊಲು ದಕ್ಷವಿರುವ ಕಾಂತಿ
ಅನಂತ ಪ್ರೀತಿಯ ವೈಭವ
ಬೇಕಾರಿ, ಬಲಿ ಚರ್ಮ, ಬರಿ ಎಲುಬು
ಆದರಿವನು ರಾಷ್ಟ್ರರುಧಿರದ ಆಗರ
ಪಂಚೆಯುಟ್ಟಿಹ ರೈತ ನಮ್ಮ ತಲೆಮಾರಿಗಿವನು
ಬುದ್ಧ, ಕೃಪಾಸಾಗರ ಸಪ್ತರ್ಷಿ ಮಂಡಲಗಳಾಚೆ

ದಂಡೀಯಾತ್ರೆಗೆ ಕೇಳಿ ನಕ್ಷತ್ರಗಾನ
ನಡೆದಿರುವ ಹಿರಿಯನಿವ ವ್ಯಾಧನನು ಸಾದುಗೊಳಿಸಿ
ಮುಗಿಲ ಗಂಗೆಯಲಿ ಸ್ನಾನ
ಕಾಲಲವಣಾಂಬುಧಿಯ ಕ್ಷಾರಜಲಗೆಯ್ಯುತುಪ್ಪ
ದೇವಗಣದೂಟಕೆಂದು
ಒಯ್ದನಮರಾವತಿಗೆ ಜೀವಿತದ ಸಾರದಂತೆ
ಋಷಿ, ಕ್ರಾಂತಿಪುರಪನಿಂದು
ಕರೆಯವನ ಓ ತಮ್ಮ ! ಓ ಅಣ್ಣ ! ಕರೆ ಅವನನು
ತವಕಿಸಿದೆ ಲೋಕವಿಲ್ಲಿ !
ನಮಗಿರುವದವನಾಚು ಸೃಷ್ಟಿಗೇ ಬಂತು ಪೇಚು
ಹೋದರೇನಾಯ್ತು ಮೈ ಚೆಲ್ಲಿ?
ಕರೆ! ನಮ್ಮ ಶಿಲಾಹೃದಯಗಳು ಸೂರ್ಯಕಾಂತದಂತೆ
ಅವನುದಯವಿರೆ ದ್ರವಿಸಲಿ !
ಜ್ಯೋತಿದೂಮ್ರದ ವಲಯ ನಕ್ಷತ್ರವಾಗುವಂತೆ
ಪುಣ್ಯವಿದು ಪಲ್ಲವಿಸಲಿ !
ಕರೆಯುವನ ಓ ತಮ್ಮ ! ಓ ಅಣ್ಣ ! ಕರೆ ಅವನನು !
ಕಣ್ತುಂಬ ನಮ್ಮ ನಡುವೆ
ಸುರುಳಿಸುತ್ತಿಡಬೇಡ ಬರೆ ದಂತಕಥೆಯ ಮಾಡಿ
ಬರಿನಾಮಶೇಷದೊಡನೆ

ಸೌಜನ್ಯ : ಅಮರ ಬಾಪು ಚಿಂತನ ಮಾಸಿಕ – ಮೇ 2014

# ಗಾಂಧಿ ತಾತ

– ಧನಲಕ್ಷ್ಮೀ ಹೆಚ್., ಮಂಡ್ಯ

ಗುಜರಾತಿನಲ್ಲಿ ಜನಿಸಿದಾತ
ಅಕ್ಟೋಬರ್ 2 ರಂದು ಹುಟ್ಟಿದಾತ
ತಪ್ಪಿಗೆ ಶಿಕ್ಷೆ ಬೇಡಿದಾತ
ಹೇಳಿದಂತೆ ನಡೆದುಕೊಂಡಾತ
ಅವರೇ ನಮ್ಮ ಗಾಂಧಿ ತಾತ

ಕೆಟ್ಟ ಚಟಗಳನ್ನು ತಿರಸ್ಕರಿಸಿದಾತ
ತತ್ತ್ವ ಮೌಲ್ಯಗಳನ್ನು ಅಳವಡಿಸಿಕೊಂಡಾತ
ಸರ್ವೋದಯ ಕಲ್ಪನೆ ಪ್ರತಿಪಾದಿಸಿದಾತ
ಗ್ರಾಮರಾಜ್ಯ ಕನಸುಕಂಡಾತ
ಅವರೇ ನಮ್ಮ ಗಾಂಧಿ ತಾತ

ಸಹವಾಸದಿಂದ ಕೆಟ್ಟು ಸ್ವಬುದ್ಧಿಯಿಂದ ಸರಿಯಾದಾತ
ವರ್ಣಭೇದ ನೀತಿ ವಿರೋಧಿಸಿದಾತ
ಅಹಿಂಸೆಯ ಅಸ್ತ್ರದಾತ
ಸರಳತೆಗೆ ಒತ್ತು ಕೊಟ್ಟಾತ
ಅವರೇ ನಮ್ಮ ಗಾಂಧಿ ತಾತ

ಏಕದಶ ಸೂತ್ರಗಳನ್ನು ಪ್ರತಿಪಾದಿಸಿದಾತ
ಸ್ವಾತಂತ್ರ್ಯಕ್ಕೆ ಹೋರಾಡಿ ತಂದುಕೊಟ್ಟಾತ
ಮಹಾತ್ಮರೆನಿಸಿಕೊಂಡಾತ
ಮತಾಂಧ ಯುವಕನ ಗುಂಡಿಗೆ ಬಲಿಯಾದಾತ
ಅವರೇ ನಮ್ಮ ಗಾಂಧಿ ತಾತ

ಸೌಜನ್ಯ : ಅಮರ ಬಾಪು ಚಿಂತನ ಮಾಸಿಕ – ಅಕ್ಟೋಬರ್ – ನವೆಂಬರ್ 2013

# ನಿಜದ ಮುಖಗಳು

– ಬಂದಗದ್ದೆ ರಾಧಾಕೃಷ್ಣ

ಅವರ ಅರೆ ಬೆತ್ತಲೆ ವೇಷ ಅಂದರೆ
ಆವತ್ತಿನ ದೇಶದ ಸ್ಥಿತಿ ಮುಂಡಾಸಿನ ಬಟ್ಟೆ ಅತಿ
ಒಂದು ಮುಂಡಸಿಗೆ ಬಹುಟೋಪಿ ಎಂಬ ಲೆಕ್ಕಾಚಾರದಲ್ಲೇ
ಹುಟ್ಟಿತು ಗಾಂಧೀ ಟೋಪಿ
ಭಾರತೀಯತೆಗೆ ಸಂಕೇತವೇ ಆಯ್ತು
ಚಳವಳಿಗೆ, ದೇಶಬಕುತಿಗೆ, ಶ್ರದ್ಧೆಗೆ
ಉದರ ನಿಮಿತ್ತಕ್ಕೆ ಕೊನೆಗೆ ಹೇಗೆಲ್ಲಾ ಆಗಿಯೋಯ್ತು
ಅವರು ಮಾಡಿದ್ದು ದಿನಕ್ಕೆ ಹದಿನೆಂಟು ಗಂಟೆ ಕೆಲಸ
ನಮ್ಮದು ಎರಡು ಗಂಟೆ, ವಾರಕ್ಕೆ ಐದು ದಿನ
ಕೆಲವರಿಗೆ ಅದೂ ಇಲ್ಲ ಇದು ಇವತ್ತಿನ ದೇಶದ ಸ್ಥಿತಿ
ಯಾವ ಶಕ್ತಿಯೇ ಏನು ಭಕ್ತಿಯೋ
ದೇಶ–ಕಾಲ ಬಂತು ಕಣಾ ಇಲ್ಲಿ ತನಕ
ಪಂಚಭೂತಗಳಿಗೀಗ ಸಿಟ್ಟು ಕಣಾ ಪರಿಣಾಮ ಪ್ರಕೃತಿ ವಿಕೋಪ
ನರರ ಬುದ್ಧಿಯೂ ಅತಿ ಅತಿಯಾಗಿ
ಮುಂದಿನ ದಾರಿ ಕಲ್ಲು ಮುಳ್ಳಿನ ಪ್ರತಾಪ
ಉಡಲು ಬಟ್ಟೆಯಿದೆ ಅನ್ನಭಾಗ್ಯವಿದೆ ಕಣಾ ಈಗ
ಏನು ಮಾಡೋದು? ಅತಿಬುದ್ಧಿಯೇ ರೋಗ
ಸ್ವಾತಂತ್ರ್ಯ ಚಳವಳಿಯ ಕಷ್ಟ ಕಾರ್ಪಣ್ಯ ಮಾಸಿದೆ
ಅಭಿವೃದ್ಧಿಯ ಯೋಗ.. ಜೇಬಿಗೆ ಹೊಸರಾಗ
ಅರೆಬೆತ್ತಲೇಕಯ್ಯ" ಊಟವಿರಲಿ, ಬಟ್ಟೆಯಿರಲಿ
ಸ್ವಾತಂತ್ರ್ಯ ಕಷ್ಟ ಕಾರ್ಪಣ್ಯದ ಅರಿವು
ಇದರಿಂದೊದಗಿ ಬರುವ ಸುಖವು
ಈ ದೇಶದ ನಿಜವಾದ ಮುಖಗಳು

ಸೌಜನ್ಯ : ಅಮರ ಬಾಪು ಚಿಂತನ ಮಾಸಿಕ – ಸೆಪ್ಟಂಬರ್ 2013

# ಸರ್ವೋದಯದ ಕನಸಿಗನತ್ತ

– ಎಲ್. ನರಸಿಂಹಯ್ಯ, ತೊಂಡೋಟಿ, ತುಮಕೂರು

ಆವೊತ್ತು ಆ ಜನವರಿ ಮೂವತ್ತು
ಆ ಪ್ರಚೋದಿತ ದೇಶೀಯ ಉಡಾಳ
ಗಾಂಧಿಗೆ ಕೈಯನೂ ಮುಗಿದ
ಗಾಂಧಿಗೆ ಗುಂಡನೂ ಹಾರಿಸಿದ !

ಹಾರಿ ತೂರಿದ ಆ ಗುಂಡು
ಗಾಂಧಿಯ ಬಿಸಿ ರಕ್ತವ ಚಿಮ್ಮಿಸಿತು
ಜೊತೆಗೆ – ಸತ್ಯ ಸಂಧತೆಯ
ವಚನಪಾಲನೆ, ಸ್ಥಿಯ ಪ್ರಜ್ಞತ್ವಗಳ
ನಡುಗಿಸಿ ನೆಮ್ಮದಿ ಕೆಡಿಸಿತೆಂದು
ಹರಿಶ್ಚಂದರ ದಶರಥ ನಂದನ
ಯದುನಂದನರು ಮರುಗಿ ಕಣ್ಣೀರಿಟ್ಟರು !

ಮೈಲಿಗೆ ಮನಸ್ಸಿನ ಆ
ಮಡಿವಂತರ ಕೈಗೊಂಬೆ
ಆ ಬಿಸಿ ರಕ್ತದ ಯುವಕ
ಉಡಾಯಿಸಿದ ಎರಡನೆ ಗುಂಡು
ಗಾಂಧಿಯ ಆ ದೇಹವನುರುಳಿಸಿ
ತ್ಯಾಗ, ದಯೆ, ಪ್ರೀತಿಗಳ
ಉಸಿರು ಕಟ್ಟಿಸಿ ತಬ್ಬಿಬ್ಬಾಗಿಸಿತೆಂದು
ಗಾಂಗೇಯ ಬುದ್ಧ ದೇವ
ಏಸುಸ್ವಾಮಿ ದಿಗ್ಭ್ರಾಂತರಾಗಿ ನೊಂದರು

ಕೊಲೆಯ ಕೆಸರಿನಿಂದಲೇ
ಹೆಸರು ಮಾಡಲೊಪ್ಪಿದ್ದ ಉನ್ನತ್ತ
ಸಿಡಿಸಿ ಮೂರನೆ ಗುಂಡು
ಹೊರಬಿದ್ದ "ಹೇ ರಾಮ್"ನೊಂದಿಗೆ
ಭ್ರಾತೃತ್ವ ಕಾಯಕತತ್ತ್ವ
ಸಮನ್ವಯ ಭಾವನೆಗಳ
ಬೇರುಗಳ ಅಲ್ಲಾಡಿಸಿ, ಬಾಡಿಸಿತೆಂದು
ಪೈಗಂಬರ, ಬಸವಣ್ಣ, ರಾಮಕೃಷ್ಣರು
ತಲೆತಗ್ಗಿಸಿ ನೋವನುಂಡುರು !

ಆ ಹಿಂಸಾರಾಧಕರ ಹುಚ್ಚಿಗೆ ಅಹಿಂಸಾರಾಧಕ
ಸರಳ ಜೀವನದ ಸಂತ
ನಡೆ-ನುಡಿಯ ಸಮನ್ವಯ ಶ್ರೀಮಂತ
ಮಾನವ ಕೋಟಿಯ ಮೇರುಮೂರ್ತಿ
"ಹೇ-ರಾಮ" ಎಂದು ಉಸುರುತ್ತ
ಸುತ್ತಲಿದ್ದವರ ನೋಡುತ್ತ
"ನೀವು... ಈ ರಾಷ್ಟ್ರದ ವಾರಸುದಾರರು
ಸ್ವಾತಂತ್ರ್ಯದ ಹಾದಿಯಲಿ ಹೊರಟವರು
ಸರ್ವೋದಯದ ಗರಿಯನು
ನೀವು ಮುಟ್ಟಬೇಕಿದೆ
ಮುಟ್ಟಿರಿ.. ನಿಮ್ಮ ಆತ್ಮ ಸಾಕ್ಷಿ!
ಎಂಬ ತನ್ನ ಮೌನಾಶಯ ಬಿಚ್ಚಿಟ್ಟು
ಕಣ್ಮುಚ್ಚಿದ ಚಿರನಿದ್ದೆಗೆ ಜಾರಿದ!

ಸೌಜನ್ಯ : ಅಮರ ಬಾಪು ಚಿಂತನ - ಜನವರಿ - ಫೆಬ್ರವರಿ 2018

# ಮತ್ತೊಮ್ಮೆ ಹುಟ್ಟಿ ಬಾ..!

– ಮರಿದೇವರ ಸಿದ್ದಪ್ಪ ಮೇಷ್ಟ್ರು, ಚೌಡಾಪುರ, ಬಳ್ಳಾರಿ

ಅಮರ ಬಾಪು, ಮಹಾತ್ಮ ಗಾಂಧೀತಾತ
ಮತ್ತೊಮ್ಮೆ ಮಗದೊಮ್ಮೆ ಜನ್ಮತಾಳಿ ಹುಟ್ಟಿ ಬಾ...!
ಸ್ವಾತಂತ್ರ್ಯ ಭಾರತದ ಭಾವಿ ಮಕ್ಕಳ, ಮೆರಗು ಮೂರುತಿ
ನಿರ್ದೇಶನ ಆದರ್ಶ ಮಾದರಿಯ ಮಹಾತ್ಮ ಗಾಂಧೀ ತಾತ !
ಅಹಿಂಸೆ, ಸತ್ಯಾ, ನ್ಯಾಯ, ನಿಷ್ಠೆ ತೋರಿ ಶಿಸ್ತು, ಶಾಂತಿ,
ಮಾರ್ಗದ ಸಮಾಜ ಪರಿಪಾಲಕ, ಉಪವಾಸ, ಸತ್ಯಾಗ್ರಹ,
ಆಚರಣೆಯ ಚಳುವಳಿ ಹೂಡಿ ವಿಶ್ವಕ್ಕೆ ಶಾಂತಿ, ಮಾನವೀಯತೆ
ತೋರಿದ ಗಾಂಧೀ ತಾತ

ಗ್ರಾಮ ಸ್ವರಾಜ್ಯ, ಪರಿಸರ ಸ್ವಚ್ಛ ಮೂಲೋದ್ಯೋಗ
ಸ್ವಾವಲಂಬನೆ ಬದುಕು, ಕನಸು ಕಂಡ ಧೀಮಂತ ನಾಯಕ
ವಿನೂತನ ನಡೆತೋರಿ, ಸ್ವಾಭಿಮಾನ ಸಹಕಾರ ಮೂರುತಿ
ಬಾಪು ಚಿಂತನ ಅರಿವಿನ ಜ್ಯೋತಿ ಪ್ರಕಾಶಿಸಿದೆ ಪುನಃ ಹುಟ್ಟು ಬಂದಾ
ವಿದೇಶಿ ಬಟ್ಟೆ ಬಹಿಷ್ಕಾರ ಸ್ವದೇಶಿ ಖಾದಿಯ ಸ್ವೀಕಾರ
ಅರೆಧೋತರ ಪಂಚೆ, ಕೊರಳ ಹೆಗಲ ಶಲ್ಯೆ ಧರಿಸಿ
ನೂಲು ಚರಕ ಹಿಡಿದ ಯುಗಪುರುಷ ಚೈತನ್ಯ ಮೂರುತಿ
ಪ್ರಾಮಾಣಿಕ, ಸದ್ಗುಣ ವ್ಯಕ್ತಿತ್ವದ ಮಹಾತ್ಮ ಗಾಂಧೀತಾತ

ಭ್ರಷ್ಟಾ, ನೀಚ, ಹಿಂಸೆ, ಅನ್ಯಾಯ ತೋರಿದ ಪರಂಗಿಯರ
ಕುತಂತ್ರ ಅಪ್ರಾಮಾಣಿಕರ ವಿರುದ್ಧ ಸಿಡಿದೆದ್ದು, ಚಳುವಳಿ ರೂಪಿಸಿದ
ರಾಷ್ಟ್ರಪಿತ ಮಹಾತ್ಮನೆಂದು ಬಿರುದು ಭಾವ ಪಡೆದ ಗಾಂಧೀ ತಾತ!
ಹಿಂದೂ ಮುಸ್ಲಿಂ, ಕ್ರೈಸ್ತ ಬೌದ್ಧ ಧರ್ಮಗಳ ಒಂದ್ಗೂಡಿಸಿ
ಸರ್ವೋದಯ ಪ್ರಾರ್ಥನೆ ಜಾತ್ಯಾತೀತ ಗಾಂಧೀ ತಾತ
ಹಂತಕರ ತಂತ್ರ ವಿರುದ್ಧ ಸತತ ಹೋರಾಟ
ಹಂತಕರ ಗುಂಡು ದಾಳಿಗೆ ತುತ್ತಾದ ಮಹಾತ್ಮ ಗಾಂಧೀ ತಾತ

ಸೌಜನ್ಯ : ಅಮರ ಬಾಪು ಚಿಂತನ ಮಾಸಿಕ – ಜುಲೈ – ಆಗಸ್ಟ್ 2019

# ಗಾಂಧಿ ತಾತ

– ಸುಸ್ಮಿತ ಎನ್.

ನಮ್ಮೆಲ್ಲರ ಪ್ರೀತಿಯ ಗಾಂಧಿ ತಾತ
ಹೋದೆ ನಮ್ಮೆಲ್ಲರ ಮಾಡಿ ಅನಾಥ
ಹಿಡಿದೆ ನೀ ಅಹಿಂಸೆಯ ಮಹಾಸ್ತ್ರ
ಸದಾ ಮೊಳಗಿಸಿದೆ ಶಾಂತಿ ಮಂತ್ರ

ಎಲ್ಲರಲೂ ತಂಬಿದೆ ನೀ ನವಚೈತನ್ಯ
ಅದರಿಂದಲೇ ನೀನಾದೆ ವಿಶ್ವಕೆ ಅನನ್ಯ
ಮುರಿದೆ ನೀ ಬ್ರಿಟಿಷರ ಎಲ್ಲ ಕುತಂತ್ರ
ತಂದುಕೊಟ್ಟೆ ಭಾರತಮಾತೆಗೆ ಸ್ವಾತಂತ್ರ್ಯ

ನಿತ್ಯ ಅರೆಹೊಟ್ಟೆ, ಆಗಾಗ ಉಪವಾಸ
ಆದರೂ ಮೊಗದಲ್ಲಿತ್ತು ಮಂದಹಾಸ
ಅನುಭವಿಸಿದೆ ನೀನೇ ಕಷ್ಟದ ಜೀವನ
ಆದರೂ ಕೊಟ್ಟೆ ನಮಗೆ ಸುಖಜೀವನ

ನಾವೆಲ್ಲರೂ ನಮಿಸುತ ನೆನೆಯುವೆವು
ದೇಶಕೆ ನೀ ಮಾಡಿದ ಸೇವೆಯಲ್ಲವ
ಓ ತಾತಾ ಬೇಡುವೆವು ನಿನ್ನನೊಂದು
ನಮ್ಮೆಲ್ಲರ ಹರಸಿ ಆಶೀರ್ವದಿಸೆಂದು

ಸೌಜನ್ಯ : ಅಮರ ಬಾಪು ಚಿಂತನ – ಮಾರ್ಚ್ – ಏಪ್ರಿಲ್ 2017

# ಮಹಾತ್ಮನ ನೆನೆದು

– ಶ್ರೀಲತಾ ಜಿ.ಎಸ್.

ದೇಶದದಾಸ್ಯ ವಿಮೋಚನೆಗಾಗಿ ಯಾಗ,
ಯಜ್ಞ ಹೋಮ ಹವನ
ಪರಿಣಾಮ ಪೋರ ಬಂದರಿನಲ್ಲಿ
ಧೀರ ಸಾತ್ವಿಕ ಮೋಹನದಾಸನ ಜನನ

ಅಜ್ಜ ಉತ್ತಮಚಂದ್ರರ ನಡೆನುಡಿ
ತಂದೆ ಕರಮಚಂದರ ಸ್ಫೂರ್ತಿಯ ಅಡಿ
ಸಾಧ್ವಿ ಪುತಲೀಬಾಯಿಯ ಮಮತೆಯ ಸೆಲೆ
ದಾರಿ ದೀಪವಾಗಿತ್ತು ಮೋಹನನ ಮನದಲ್ಲೇ

ಸಾಗರದಾಚೆದಾಟಿ ವಿದೇಶದಲ್ಲಿ ವಕೀಲಿ ಉದ್ಯೋಗ
ಆದರೂ ಮನದಲ್ಲಿ ಭಾರತದದಾಸ್ಯದ ಬಿಡುಗಡೆಯ ಆ ವೇಗ
ಕಡೆಗೂ ನಾಡಿನಡೆಗೆ ಧೀರನ ಪುನರಾಗಮನ
ಪಾರತಂತ್ರ್ಯದ ನಾಶಕ್ಕೆ ನಾಯಕನ ಪಣ

ಅರೆಬೆತ್ತಲೆ ಫಕೀರನೆನಿಸಿದರೂ ಇಂಗದಛಲ
ಸೂರ್ಯ ಮುಳುಗದ ಸಾಮ್ರಾಜ್ಯಕ್ಕೆ ಸೆಡ್ಡು
ಅಸಹಕಾರ, ಸ್ವದೇಶೀ, ದಂಡಿಯಾತ್ರೆ
ಚಲೇಜಾವ್ ಚಳುವಳಿಯ ಸರಮಾಲೆ
ಯುದ್ಧವಿಲ್ಲದ ಬಲಿದಾನದ ಸತ್ಯ ಅಹಿಂಸೆ ಸತ್ಯಾಗ್ರಹಗಳ ಕಹಳೆ

ಎಲ್ಲರಿಗೂ ಸಮಪಾಲು ಸಮಬಾಳಿನ ಸೂತ್ರ
ಮಾಡು ಇಲ್ಲವೇ ಮಡಿ ಎಂಬ ಧ್ಯೇಯದ ಮಂತ್ರ

ಸಬರಮತಿ ವಾರ್ಧಾಗಳಲ್ಲಿ ಆಶ್ರಮಗಳ ಸ್ಥಾಪನೆ
ಚರಕದ ಚಕ್ರದಡಿಯಲ್ಲಿ ಖಾದಿಯ ಸ್ವಾವಲಂಬನೆಯ ಮನನ

ಸರ್ವೋದಯದ ಸೂತ್ರದಾರ ಅಹಿಂಸಾಮೂರ್ತಿ ಮಹಾತ್ಮಗಾಂಧಿ
ಸ್ವಾತಂತ್ರ್ಯದ ಕನಸುಗಾರರಿಗೆ ಇಂಗದ ಸ್ಫೂರ್ತಿಯ ಸಿರಿಯ ನಿಧಿ
ಗಾಂಧಿಯುಗದ ಪರಿಣಾಮ ಭಾರತಕ್ಕೆ ಸ್ವಾತಂತ್ರ್ಯದ ಸಿಹಿ
ಗ್ರಾಮೋದ್ಧಾರ ಹರಿಜನೋದ್ಧಾರಕ್ಕೆ ಭಾರತೀಯರೆಲ್ಲರ ಮನದ ಸಹಿ

ಓ ಮಹಾತ್ಮಾ ನೀನಿಲ್ಲದ ದೇಶ ಇಂದಾಗಿದೆ ಬರಡು ನೆಲ
ಭ್ರಷ್ಟಾಚಾರ, ಅತ್ಯಾಚಾರ, ಕೊಲೆ, ಸುಲಿಗೆಗಳ
ಪಾಪದ ವಾಸಸ್ಥಳವಾಗಿದೆ
ರಾಷ್ಟ್ರಪಿತ ಅಗತ್ಯವಿದೆ ನಿನ್ನ ತತ್ವಗಳೆಡೆ ನಮ್ಮಯ ಗಮನ
ಮತ್ತೊಮ್ಮೆ ಬರಲಾರೆಯಾ ನೀಡಲು ನಮಗೆ ನೈತಿಕ ಬಲದ ಜನನ

ಸೌಜನ್ಯ : ಅಮರ ಬಾಪು ಚಿಂತನ ಮಾಸಿಕ – ನವೆಂಬರ್ – ಡಿಸೆಂಬರ್ 2018

---

ತಪ್ಪುಗಳನ್ನು ಒಪ್ಪಿಕೊಳ್ಳುವುದರಿಂದ ಮನಸ್ಸು
ಶುದ್ಧವಾಗುವದರೊಂದಿಗೆ ಪ್ರಕಾಶಮಯವೂ ಆಗುತ್ತದೆ.

ನಿನ್ನ ಕ್ರಿಯೆಗಳಿಗೆ ಏನು ಫಲ ಸಿಗುತ್ತದೆ ಎನ್ನುವುದು ನಿನಗೆ
ತಿಳಿಯದೇ ಇರಬಹುದು. ಆದರೆ ನೀನು ಏನನ್ನೂ ಮಾಡದಿದ್ದರೆ
ಯಾವ ಫಲವೂ ಸಿಗುವುದಿಲ್ಲ ಅಲ್ಲವೆ

– **ಮಹಾತ್ಮ ಗಾಂಧಿ**

# ಜನವರಿ ಮೂವತ್ತು

– ಅರ್ಮಾಂಡೋ ಮೆನೆಝಿಸ್

ಕನ್ನಡಾನುವಾದ : ಕೀರ್ತಿನಾಥ ಕುರ್ತಕೋಟಿ

ಮೌನ-ಮೇಘದ ಮುಸುಕು ಜಗಕೆಲ್ಲ ಬಿದ್ದಿತ್ತು
ಗಾಳಿ ತಟ್ಟನೆ ತಡೆದು ನಿಂತುಬಿಟ್ಟಂತೆ
ಸಂಸಾರ ಸರ್ಪದೊಲು ಮತ್ತೊಮ್ಮೆ ತಿರುಗುತ್ತ
ಸೃಷ್ಟಿಕರ್ತನ ಒಡಲ ಹುತ್ತ ಹೊಕ್ಕಂತೆ
ಜಗದ ಕೊನೆಯಂಚಿಗೇ ಬಂದು ಸೇರಿ
ನಿಂತವೊಲು ಪಥಿಕ ಹೆಜ್ಜೆಗೇ ಹೆದರಿ

ಚಿಕ್ಕೆ ಬಾನಂಗಳಗಿ ಮೈಸುಟ್ಟುಕೊಂಡಿತ್ತು
ಕಾಳರಾತ್ರಿಯೋಳಿಲ್ಲವಾಯ್ತು ಜಗವು
ಕಾಲವ್ಯಾಧನು ಬಿಟ್ಟ ಮೃತ್ಯುಬಾಣದ ಗುರಿಗೆ
ರಕ್ತಸಿಂಚಿತವಾಯ್ತು ಸೃಷ್ಟಿಮುಖವು
ನೂರು ದನಿ ಚೀರಿದವು ಅದನು ನೋಡಿ
ನೂರು ಎದೆ ನರಳಿದವು ಅದರ ಜೋಡಿ

ಸತ್ಯದರ್ಪಣ ನಡೆದ ಸ್ವಾತಂತ್ರ್ಯ ಸಿರಿಗೈಯ
ಹೊಳೆವ ಖಡ್ಗವು ಬಿತ್ತು ಚೂರಾಗಿ
ಜಗದ ಸುಖದುಃಖಗಳ ಉಸಿರೊಳೊಂದಾಗಿಸಿದ
ಆತ್ಮ ಪ್ರಭೆ ಬಾಡಿತ್ತು, ಮಬ್ಬು ಮಂಕಾಗಿ
ನಿರ್ಲಿಪ್ತ ಪಂಕಜವು, ನಿಶ್ಚಲದ ದೀಪ
ಯಾವ ಕೈ ಕೆಡಿಸಿತ್ತೊ ಈ ವಿಮಲ ರೂಪ

ದೇವಶಕ್ತಿಯ ಕೇಂದ್ರದಿಂದ ಪ್ರಾಣವ ಪಡೆದ
ಬಾಳುವೆಯ ನೆವದಲ್ಲಿ ಪ್ರಾರ್ಥನೆಯ ಸಲಿಸಿ
ಜೀವಿತದ ಹೋರಾಟ ಅವನ ಸೇವೆಯೆ ಎಂದು
ಬಿದ್ದು ಅಗಲು ಅವನ ಹೆಸರನ್ನು ನಿಲಿಸಿ
ಬಿದ್ದ ಯೇಸುವು. ಇಂಥ ಯುಗದ ಗ್ಲಾನಿಯಲಿ
ಕಂಡು ದೈವದ ಸೂತ್ರ ಧರ್ಮ ಪತನದಲಿ

ಇವನ ಕೊಂದಾ ಕೈಯು ಬಾಳನುಣ್ಣುವುದೆಂತು?
ಕೈಯ ಹೊಲೆ ಮೈಲಿಗೆಯ ಕಳೆವುದೆಂತು?
ಮಡದಿಮಕ್ಕಳ ಗಲ್ಲ ನೇವರಿಸಬಹುದೆಂತು?
ಬೆಳೆವಬಾಳಿಗೆ ಹರಕೆಯೀವುದೆಂತು?
ದೇವಕೃಪೆ ಬೇಡುತ್ತ ಕಾಯ್ವುದೆಂತು?
ಮಂದುಕಟ್ಟಿದ ಪಾಪ, ಪರಿತಾಪವೇನಿದಕೆ?
ಚಿತೆಗೆ ಬೆಂಕಿಯ ಬೇಯದಂಥ ಕರುಳು ತಾಳಿಕೊಳ್ಳುವದೆಂತು
ಬಿದ್ದಿರಲು ಮೈಮೇಲೆ ಜಗವ ಕಂಗೆಡಿಸುವೀ ಕಪ್ಪು ನೆರಳು?
ಕರುಣೆಯೆಂಬುದು ಕಲಿಯದಂಥ ಜೀವ
ಅರಿಸಿರಲು ಬಿಸುಡಬಹುದಿತ್ತು ಸಾವ?
ಆದರೂ ಬದುಕಿರಲಿ ಹಾಳಾದ ಮರುಭೂಮಿ ಕಡಲಕೊನೆ
ತೀರಗಳ ತುಳಿಸುತಿರಲಿ 'ಕೇನ'ನಾನುಗ ಕೊಲೆಯ
ಸುಖವದೇನೆಂಬುದನು ಕೊಲೆಗಡುಕ ಹೃದಯಕ್ಕೆ ಕೇಳುತಿರಲಿ
ಗಾಳಿಮಳೆಗಳಿಗೆಲ್ಲ ಅರಚುತಿರಲಿ ತನ್ನ ಹಮ್ಮೆಯನಲ್ಲಿ ಕೊಚ್ಚುತಿಲಿ!
ಹೌದು ಅವ ಬದುಕಿರಲಿ, ನಮ್ಮ ಒಡಹುಟ್ಟಿದವ
ಕೊಲೆಗಡುಕನಾದರೂ ನಮ್ಮ ಬಂದು
ಕುಲದ ಕೆನ್ನೀರಿನ ಕಲಮಲವನೆಬ್ಬಿಸಿದನೆಂದು ಬಲ್ಲರು
ಅಣ್ಣತಮ್ಮಂದಿರಿಂದು ನಮ್ಮ ಪುಣ್ಯದ ತಲೆಗು ಬಂತು ಆ ಪಾಪ
ನಮ್ಮ ಎದೆಗಳಿಗೆಲ್ಲ ಇಹುದು ಪರಿತಾಪ
ಯುಗಯುಗದ ನಿಗಳಗಳು ಕಳಚಿಬಿದ್ದವು ತಂದೆ
ಬಂಧ ಮುಕ್ತಿಯ ಹಿಗ್ಗು ತುಂಬುತಿಹುದು
ನಾಡ ತಂದೆಯಾಗಿ, ಆರ್ತರಿಗೆ ಸಖನಾಗಿ ನಿನ್ನ ಪುಣ್ಯವೆ
ನಾಡ ಕಾಯುತಿಹುದು ನಿನ್ನ ಬಲಿದಾನವೇ ಹರಕೆಯಾಗಿಲಿ!
ನಿನ್ನ ಕನಸಿಗೆ ನಾಡು ಹದವಾಗಿ ಬರಲಿ
ವ್ಯಕ್ತರೂಪದಿ ಹೊಳೆದು ಅವ್ಯಕ್ತವಾಗಿರುವ ಅರಿವಿನಾಚೆಗೆ
ನಿಂತ ನಿಲವೆ ಒಲವೆ, ಮೈಯ ಸಿಪ್ಪೆಯ ಕಳೆದುಕೊಂಡ
ಕರುಣೆಯ ತಿರುಳೆ, ನಮ್ಮ ತಿರುಳನು ಮುಟ್ಟು ದಿವ್ಯಬಲವೆ
ನಿನ್ನ ನಗೆಯೊಳು ಭುವನ ದೀಪ್ತವಾಗಿರಲಿ
ಚರಚಕ್ರದ ಹಾಗೆ ತಿರುಗುತಿರಲಿ!!

ಅಮರಬಾಪು ಚಿಂತನ ಜನವರಿ–ಫೆಬ್ರವರಿ 2016 ಪತ್ರಿಕೆಯಿಂದ ಆಯ್ದುಕೊಳ್ಳಲಾಗಿದೆ.

# ಮೋಹನ

– ಶ್ವೇತಾ ಎನ್

ಅವನೆಂದೂ ಮಹಾತ್ಮನೆಂಬುದ ಬೇಡಿದವನಲ್ಲ
ಪೋರ ಬಂದರಿನಲ್ಲಿ ಜನಿಸಿ
ಜಗ ಮೆಚ್ಚಿಸಿ ಪೋರನಾದವ
ಎಷ್ಟೋ ಮನೆ ಮನಗಳಲಿ ನೆಲೆನಿಂತು ನಕ್ಕವ..

ಆಗೋ, ಅವನೆ ಅವನೇ ಆ ಮೋಹನ
ದೇಶವೇ ತಲೆದೂಗಿದ ಕೊಳಲ ನುಡಿಸಿದವ
ತನ್ನೊಡನೆ ಹೆಜ್ಜೆ ಇಡಿಸಿದವ...

ಬಾಂಬು ಬಂದೂಕುಗಳ ಎದುರು
ಶಾಂತಿ ಅಸ್ತ್ರ ಹಿಡಿದು ಮೌನ ರಾಗ ಹಾಡಿದವ
ತುಂಡು ಬಟ್ಟೆ ಉಟ್ಟು ದೇಶ ಪ್ರೇಮ ತಿಳಿಸಿದವ...

ಬೀಜವಾಗಿ ಮತಿಯ ತುಂಬಿ
ಸಬರಮತಿ ಬೆಳೆಸಿದವ
ನೂರು ಪ್ರಶ್ನೆ ಎದಿರು ದಿಟ್ಟ ನಿಲುವು ನೀಡಿದವ
ಅವನೇ ಆ ಮೋಹನ...

ಇಂದಿಗೂ ಎಲ್ಲೆಲ್ಲೂ ಅವನದೇ ಜೇಂಕಾರ
ಪುಸ್ತಕದ ಪುಟ ಪುಟಗಳಲಿ
ಆಫೀಸಿನ ಗೋಡೆ ಗೋಡೆಗಳಲಿ ದೇಶ ಪ್ರೇಮದ
ಭಾಷಣಗಳಲಿ ಇಂದಿಗೂ ಅವನದೇ ಜೇಂಕಾರ...

# ಗಾಂಧಿ ತಾತ - ಮೊಮ್ಮಗ ಕನೂ

– ಲಿಂಗಣ್ಣ ಬಂಧುಕಾರ್

ಪಾಪು – ಗಾಂಧಿತಾತ ಕೋಲನೂರಿ ಎತ್ತ ಹೊರಟೆ ನೀನು
ಬಾಪು – ಬಾರೋ ಕಂದ ನಿನ್ನ ಜೊತೆಗೆ ಆಡ ಆಡಲೇನು
ಪಾಪು – ಅಯ್ಯೋ ತಾತ ನೀನು ಕರೆಯೆ ಬಾರದಿಹನೆ ನಾನು
ಬಾಪು – ನೀನು ಬಂದರಾನೆ ಬಲವು ನನಗೆ ಬಾರದೇನು?
ಪಾಪು – ಏನು ತಾತ ನನ್ನ ಕೈಲಿ ಅಷ್ಟು ಬಲವು ಇರುವುದೆ?
ಬಾಪು – ರಾಮ–ಅಳಿಲು ಸೇವೆ ಗೈದ ಕತೆಯು ನಿನಗೆ ತಿಳಿಯದೆ?
ಪಾಪು – ಓಹೋ ಗೊತ್ತು ಕೇಳಿ ಬಲ್ಲೆ ಅಜ್ಜಿಯೊರೆದ ಕತೆಯಲಿ
ರಾಮ ಸೇತು ಕಟ್ಟುವುದಕೆ ತಂದು ಸುರಿದ ಮರಳಲಿ
ಬಾಪು – ನೋಡು ಹೇಗೆ ತನ್ನ ಸೇವೆ ಸಲಿಸಿತಲ್ಲ ಅಳಿಲು!
ನಾವು ಹಾಗೆ ಸೇವೆ ಸಲ್ಲಿಸಿ ತೊಡೆವ ತಾಯ ಅಳಲು
ಪಾಪು – ನಾನು ಮುಂದೆ ನೀನು ಹಿಂದೆ ಕೋಲ ನೀಡು ತಾತ
ದೇಶ ಸೇವೆ ದಾರಿ ತೋರಿ ಮುಂದೆ ನಡೆಸು ತಾತ
ಬಾಪು – ಹಿರಿಯ ಕಿರಿಯ ಎಂಬುದಿಲ್ಲ ಎಲ್ಲ ಜತೆಗೆ ಸಾಗುವ
ಬೆರಳ ತೋರಿ ಮೆಚ್ಚುವಂತೆ ಕೂಡಿ ಬಾಳಿ ತೋರುವ!

ಸೌಜನ್ಯ : ಅಮರ ಬಾಪು ಚಿಂತನ – ಸೆಪ್ಟಂಬರ್–ಅಕ್ಟೋಬರ್ 2019

# ಸರ್ವರೂಪಿ – ಸರ್ವವ್ಯಾಪಿ

– ಸೋಮು ಕುದರಿಹಾಳ

ಭಾರತ ಮಾತೆಯ ಮಡಿಲಲ್ಲಿ ಮಾತೆಯ ಕಷ್ಟದ ದಿನಗಳಲಿ
ಜನಿಸಿ ಬಂದವರು ಗಾಂಧೀಜಿ

ನ್ಯಾನೀತಿ ಧರ್ಮವನು ಉಳಿಸಿ ಬೆಳೆಸುವ ಸತ್ಯವನು
ಎತ್ತಿ ಹಿಡಿದವರು ಗಾಂಧೀಜಿ

ಶಾಂತಿ ಮಂತ್ರವನು ಪಠಿಸುತ್ತಾ ದೇಶಭಕ್ತಿಯನು ಬೆಳೆಸುತ್ತಾ
ಜಾಗೃತಿ ಮೂಡಿಸಿದರು ಗಾಂಧೀಜಿ

ಮಹಿಳೆಯ ಉಡುಗೆಯ ಕಷ್ಟವ ಕಂಡು ಮನದಲಿ ನೊಂದು
ತುಂಡುಡುಗೆಯುಟ್ಟು ಸರಳ ಜೀವಿಯಾದರು ಗಾಂಧೀಜಿ

ಸ್ವದೇಶ ಪ್ರೇಮದ ಹಣತೆಯಲಿ ಸ್ವಾತಂತ್ರ್ಯ ಜ್ಯೋತಿಯ ಹಚ್ಚಿ
ಬೆಳಕು ಚೆಲ್ಲಿದವರು ಗಾಂಧೀಜಿ

ಸತ್ಯಾಗ್ರಹಗಳನು ಹುಟ್ಟುಹಾಕಿ ಬ್ರಿಟೀಷರಿಗೆ ಬೆವರಿಸಿದ
ಚಳುವಳಿಕಾರ ಗಾಂಧೀಜಿ

ಅಹಿಂಸೆಯ ಆಯುಧ ಹಿಡಿದು ಜಗತ್ತಿನಲ್ಲೇ
ಮೊದಲ ಗೆಲುವು ತಂದು ಕೊಟ್ಟವರು ಗಾಂಧೀಜಿ

ಕಾಯಾ ವಾಚಾ ಮನಸಾ ದುಡಿದು ದೇಶಕಾಗಿಯೇ
ದುಡಿದು ಮಡಿದು ಅಮರರಾದರು ಗಾಂಧೀಜಿ

ಸೌಜನ್ಯ : ಕನ್ನಡಪ್ರಭ 02.10.2013

# ರಾಮಸೇವಕರ ಮೊರೆ

– ವಸಂತಕುಮಾರ ಪೆರ್ಲ

ಶ್ರೀರಾಮಚಂದ್ರನೇ, ಶ್ರೀರಾಮಚಂದ್ರನೇ ಈಗ ಎಲ್ಲಿದ್ದೀಯಾ?
ಸೊಡರು ಹಚ್ಚಿ ಹುಡುಕುತ್ತಿದ್ದೇವೆ ಎತ್ತ ಹೋದೆಯಾ?

ಮಂದಿರಕ್ಕೆ ದೌಡಾಯಿಸಿ ನೋಡಿದೆವು ಅಲ್ಲಿರಲಿಲ್ಲ
ನಿಜ ಭಜಕರನ್ನು ಕೇಳಿದೆವು ಅವರಿಗೆ ಗೊತ್ತಿರಲಿಲ್ಲ

ಮಾಯಾಜಿಂಕೆಯ ಬೆನ್ನು ಹತ್ತಿದೆಯಾ ?
ಸೀತೆಯನ್ನು ಅರಸುತ್ತ ಲಂಕೆಗೆ ಹೋದೆಯಾ
ಇಲ್ಲಿ ಲಕ್ಷ್ಮಣ ರೇಖೆ ಇರಲಿಲ್ಲ
ಸಮುದ್ರಕ್ಕೆ ಸೇತುವೆ ಕಾಣಲಿಲ್ಲ

ದಶರಥರಾಮನೇ ರಾಜಾರಾಮನೇ
ನಿನ್ನಾಣತಿಯ ಶಿರಸಾವಹಿಸಿ
ಹಿಡಿದಿದ್ದೇವೆ ಕೈಯಲ್ಲಿ ದೊಣ್ಣೆ
ಠಳಾಯಿಸುತ್ತಿದ್ದೇವೆ ಊರಿಡೀ
ಬಾಯಲ್ಲಿ ನಿನ್ನ ನಾಮದ ಮಹಿಮೆ!

ಕೋದಂಡರಾಮನೇ ದೋರ್ದಂಡರಾಮನೇ
ನೀನು ಇಲ್ಲಿ ಇರದಿದ್ದರೂ ಪರವಾಗಿಲ್ಲ
ನಿನ್ನ ನಾಮದ ಬಲವೊಂದಿದ್ದರೆ ಸಾಕು
ಪಾದುಕೆ ಇಟ್ಟು ಮಾಡುತ್ತೇವೆ ರಾಜ್ಯಭಾರ

ಕೋರಸ್ ಬೋಲೋ ಶ್ರೀರಾಮಚಂದ್ರ ಕೀ... ಜೈ!

ಸೌಜನ್ಯ : ಸಂಕ್ರಮಣ – ಮೇ – ಜೂನ್ 2004

# ಶುಭೋದಯ (ಅಕ್ಟೋಬರ್ ಎರಡು)

– ಸಿದ್ದಣ್ಣ ಮಸಳಿ

ಮುಂಜಾವು ಮುಗಿಲು ಹೊಗರೇರಿತು
ಆಕಾಶ ಮಂಟಪಕೆ ಕಿರಣ ತೋರಣ ಕಟ್ಟಿ
ಉದಯ ರವಿ ತೇಜಸ್ವಿ ಮೇಲೇರಿದ
ಸುತ್ತು ಭೂಮಂಡಲಕೆ ದಯೆದೋರಿದ
ನಸುಕಿನಲ್ಲಿಯೆ ಎದ್ದು ಹಕ್ಕಿ ಹಾಡನು ಕಟ್ಟಿ
ಶಕುನ ಹೇಳುವ  ಕೊರವಿ ಹಾಡುತಿತ್ತು
ನಿದ್ದೆ ಮಂಪರು ಕವಿದು ಮಲಗಿದ್ದ ಜಗಕೆಲ್ಲ
ಉದಯರಾಗವ ಮಾಡಿ ಎಬ್ಬಿಸಿತ್ತು.
ಏಳೊ ಗೆಳೆಯ,
ಇದೊ ನಿನಗೆ ಶುಭೋದಯ
ನೆಲದ ನರನಾಡಿಯಲಿ ಸಂತೋಷದುದಯ!

ಈ ನಾಡ ಕಥೆಯಲ್ಲಿ ಇದು ಒಂದು ಹೊಸ ಹಗಲು
ಪುಣ್ಯ ಪ್ರವಾಹದುಗಮ.
ಜನಮನದ ಜೀವನದ ಸಂಜೀವನ
ಮಳೆ ಹೋಗಿ ಬೆಳೆ ಹೋಗಿ ಇರುವ ನೆಲ ಹಾಳಾಗಿ
ಭೂಮಿ ತಳಮಳಿಸುತಿತ್ತು
ಒಂದೊಂದೆ ಹನಿಗಾಗಿ

ಮಣ್ಣ ಕಣ ಬಿಕ್ಕುತಿತ್ತು.
ಆ ಹಿಮಗಿರಿಯೆ ಕರಗಿ ನೀರಾಗಿ
ಸಮತಳಕೆ ಇಳಿದು ಬಂತು

ಮನೆಮನೆಯ ಹೊಸ್ತಿಲಕೆ ಹರಿದು ಬಂತು
ಅಲ್ಲಲ್ಲಿ ಕೂಡಿ ಕೊಳೆಯೇರಿ ಬಿದ್ದಿದ್ದ
ಕಸ ಕೊಳಚೆ ಇದರಲ್ಲಿ ಕೊಚ್ಚಿ ಹೋಯ್ತು
ಅದರ ಭವ್ಯತೆಗೆ ಧೀರ ಗಂಭೀರತೆಗೆ
ಈ ಮನಸು ಮಾರು ಹೋಯ್ತು!

ಬೆಳಕಿಲ್ಲದೀ ಮನೆಗೆ ಬೆಳಕಾಗಿ ಬಂದನಿವ
ಚಿಕ್ಕೆಯಂಗಳದಿ ಚಂದ್ರಾಮ ಚೆಲುವ!
ದಳದಳವೇರಿ ಕಳೆಯೇರಿ
ಇರುಳ ಮಲ್ಲಿಗೆಯರಳು ಬೆಳುದಿಂಗಳು.
ಅವನೊಂದು ಕಣ್ಣಿನಲಿ ಆ ಪ್ರಶಾಂತ ಪ್ಯಾಸಿಫಿಕ
ಇನ್ನೊಂದು ತುಂಬಿತ್ತು ಅಟಲಾಂಟಿಕ
ಜನಸಮುದ್ರದ ಹರ್ಷ ಉಕ್ಕೇರಿ ನಿಂತಿತೋ
ಧವಳಗಿರಿ ಕೀರ್ತಿ ಕಳಸ
ನಮ್ಮ ಉದ್ಧಾರಕ್ಕೆ ದೇಹ ಸವೆಸಿದನಿವನು
ಸ್ಥಿತಪ್ರಜ್ಞ, ಓ ಪುಣ್ಯಪುರುಷ.
ದೀನ ದಲಿತರ ಎದೆಯ ಮಾನಸದಿ ವಿಹರಿಸುವ
ಶ್ವೇತ ಪದ್ಮಸ್ನೇಹಿ ರಾಜಹಂಸ
ಅವನ ಸಹವಾಸವೋ..... ಅಸಿಧಾರಾವ್ರತ!
ಹಿಂದಿನವರಿಗೂ ಅವನ ಒಂದೊಂದು ಹೆಜ್ಜೆಗಳು
ಸುವಿಶಾಲ ರಾಜಮಾರ್ಗ.
ನಡುಹಗಲ ದೀವಟಿಗೆ ಹಿಡಿದು ನಡೆದವನಿವನು
ಕಣ್ಣಿನಲಿ ಕಂಡಿತ್ತು ಮುಂದೆ ಸ್ವರ್ಗ

ಸೌಜನ್ಯ : ಗಾಂಧಿ ಎಂಬುವ ಹೆಸರು – ಕನ್ನಡ ಪುಸ್ತಕ ಪ್ರಾಧಿಕಾರದ ಪ್ರಕಟಣೆ

# ಗಜಲ್

– ಸಿದ್ಧರಾಮ ಹೊನ್ಕಲ್

ಏಳು ದಶಕಗಳ ಕಳೆದು ಹೊಸ ಮಳೆ ಸುರಿಯಲಿಲ್ಲ ನೋಡು ಸಾಕಿ
ಭೂತಾಯಿಯ ಬಂಜೆತನ ಹಿಂಗಲೇಯಿಲ್ಲ ನೋಡು ಸಾಕಿ

ನೊಂದವರ ಮುಖದಲ್ಲಿ ನಗೆಯು ಅರಳಲಿಲ್ಲ
ಜಗಕೆ ಅನ್ನ ಹಾಕುವವನ ಬಾಯಿ ಇಂದಿಗೂ
ಸಿಹಿಯಾಗಲಿಲ್ಲ ನೋಡು ಸಾಕಿ

ಗಾಂಧಿ ಕಂಡ ಗ್ರಾಮೀಣ ಭಾರತದ ಕನಸುಗಳೆಲ್ಲ
ಜಾರಿ ಕಡಲ ಪಾಲಾವು ಈ ಮಣ್ಣಲಿ
ಹಳ್ಳಿಗಳೆಲ್ಲ ಗುಳೆ ಎದ್ದು
ಸುಖವೆಂಬುದೇ ಸುಳಿಯಲಿಲ್ಲ ನೋಡು ಸಾಕಿ

ಕುರ್ಚಿಯ ಕನಸಿನ, ಸ್ವಾರ್ಥದ ಸೆಳವು
ದೇಶ ನಮ್ಮ ನಮ್ಮವರಲ್ಲಿಯೇ ಹರಾಜಾಯಿತು
ಅಧಿಕಾರದ ಮೋಹದಲಿ ದೇಶಿಗರಿಗೆ
ನೆಮ್ಮದಿ ಸಿಗಲಿಲ್ಲ ನೋಡು ಸಾಕಿ

'ಹೊನ್ನ ಸಿರಿ' ಜನರ ಆಶೋತ್ತರಗಳಿಗೆ ಉತ್ತರ ಎಲ್ಲಿಹುದು
ಸ್ವಾರ್ಥದ ಈ ಪಡಿಪಾಟಲಿಗೆ ಬಂಡೇಳದೇ
ಈ ದೇಶಿಗರಿಗೆ ಫಲ ದೊರಕುವದಿಲ್ಲ ನೋಡು ಸಾಕಿ

ಸೌಜನ್ಯ : ಸಿಹಿಗಾಳಿ ಮಾಸಪತ್ರಿಕೆ – ಅಕ್ಟೋಬರ್ 2013

# ಕನಸು

– ಹಿಪ್ಪರಗಿ ಸಿದ್ದರಾಮ

ಗಾಂಧಿ
ಎಂಬ ಕರಮಚಂದ
ಕರಿಯರ ಕತ್ತಲೆಯನೋಡಿಸಿದ
ಚಂದದಿಂದ ಚಂದನಾಗಿ
ಮಾನವತೆಯ ಹಕ್ಕಿನ
ಹೋರಾಟದಿಂದ
ಮಹಾತ್ಮನಾದ
ಪರದೇಶದಲಿ
ತಾ ನೋವನುಂಡು
ಸ್ವಾಭಿಮಾನದಿಂದ
ತಾಯ್ನಾಡಿನ
ಗ್ರಾಮರಾಜ್ಯದಲಿ
ರಾಮರಾಜ್ಯವೆಂಬ
ಸ್ವರಾಜ್ಯದ
ಕನಸು ಕಂಡ
ದುರಭಿಮಾನಿಗಳಿಂದ
ಹುತಾತ್ಮನಾದ

ಸೌಜನ್ಯ : ಸಿಹಿಗಾಳಿ ಮಾಸಪತ್ರಿಕೆ – ಅಕ್ಟೋಬರ್ 2013

# ಮುಗುಳ್ನಗೆ

– ಹಿಪ್ಪರಗಿ ಸಿದ್ದರಾಮ

ಅಂದು
ಜೇಬಿನ ಹಂಗಿಲ್ಲದೆ
ಜನರ ನಡುವೆ
ತುಂಡು ಪಂಜೆಯ
ಅರೆಬತ್ತಲೆ ಫಕೀರನಾಗಿ
ಬೊಚ್ಚುಬಾಯಿಯ
ಮುಗುಳ್ನಗೆಯೊಂದಿಗೆ
ಜನರ ಮನಗೆದ್ದು
ಮುನ್ನಡೆದ ಮಹಾತ್ಮ
ಮಹಾಮಾರ್ಗದಲಿ
ಇಂದು
ಮೂರ್ಖ ಮುಂದಾಳು
ನಾಡವರ ಕಂಡು
ಮುಗುಳ್ನಗುತ್ತಿರುವ
ಮಹಾತ್ಮನ ದರುಶನ
ಅನುದಿನವೂ
ಆಗುವುದು
ಎಲ್ಲರ ಜೇಬಿನಲಿರುವ
ಕರೆನ್ಸಿ ನೋಟಿನಲಿ!

ಸೌಜನ್ಯ : ಸಿಹಿಗಾಳಿ ಮಾಸಪತ್ರಿಕೆ – ಅಕ್ಟೋಬರ್ 2013

# ಮಹಾತ್ಮರ ಮಂಗಗಳು

– ಹಿಪ್ಪರಗಿ ಸಿದ್ದರಾಮ

ಮಹಾತ್ಮರ ಮಂಗಗಳು
ಮಿಸುಕಾಡುತ್ತಿಲ್ಲ ಫೋಟೋದಲಿ
ಕೂತಿವೆ ಮೇಜಿನ ಅಲಂಕಾರದಲಿ
ವೆಬ್‌ಸೈಟಿನ ಫ್ರಂಟ್‌ಪೇಜಿನ
ಪ್ರತಿಷ್ಠೆಯಲಿ
ಸ್ವಾರ್ಥಿ ಸತ್ಯಾಗ್ರಹಿಗಳ
ನಾಟಕೀಯತೆಯಲಿ
ಪಂಚರಂಗಿ ರಾಜಕಾರಣಿಗಳ
ಬ್ಯಾನರಿನಲಿ
ಸಮಾಜಸುಧಾರಕ ಸೋಗುಗಳ
ಜನರ ಸುಲಿವ ಬೇವರ್ಸಿಗಳ
ಬ್ರೋಸರ್‌ಗಳಲಿ
ನಾಯಿಕೊಡೆಗಳಂತಹ
ನಾನಾ ನಮೂನೆಗಳಲಿ
ಹಾಗೇ ಕೂತಿವೆ
ಹಾಂ....
ಬೇಸರ ಅವುಗಳಿಗಿಲ್ಲ!
ಗೊಂದಲಗೊಂಡಿವೆ ನಾವೆಲ್ಲಿದ್ದೇವೆ?
ಬಾಯಿ–ಕಿವಿ–ಕಣ್ಣುಗಳೆಂಬ
ರಸರಂಧ್ರಗಳ ಮುಚ್ಕೊಂಡಿರೋ
ಗಾಂಧಿ ಮಹಾತ್ಮರ ಮಂಗಗಳು ನಾವೇನಾ?

ಸೌಜನ್ಯ : ಸಿಹಿಗಾಳಿ ಮಾಸಪತ್ರಿಕೆ – ಅಕ್ಟೋಬರ್ 2013

# ಮತ್ತೆ ಗಾಂಧಿ ಬರುತ್ತಾರೆ

– ಡಾ. ಲೋಕೇಶ ಅಗಸನಕಟ್ಟೆ

ಯಾರೋ ಅಂದರು ಮತ್ತೆ ಗಾಂಧಿ ಬರುತ್ತಾರೆಂದು
ಎಲ್ಲ ನಿಲ್ದಾಣಗಳಿಗೂ ಬಂತು ಜೀವ
ವಿಮಾನ, ಬಸ್ಸು, ರೈಲು ನಿಲ್ದಾಣಗಳ ಮುಂದೆ
ಅರಳಿದವು ರಂಗೋಲಿ, ನಳನಳಿಸಿದವು ತಳಿರು ಹೋರಣ
ಧೂಳು ಕೊಡವಿಕೊಂಡು ತಲೆಯೇರಿದವು ಬಿಳಿ ಟೊಪ್ಪಿಗೆಗಳು
ಸರಕಿನರಮನೆಯಿಂದ ಬಂದವು ಚರಕ ಲಡಿ ನೂಲುಗಳು

ಗಾಂಧಿ ಎಲ್ಲಿಂದ ಬರಮಹುದು? ಹೇಗೆ? ಯಾರೋ ಕೇಳಿದರು
ದಕ್ಷಿಣ ಆಫ್ರಿಕೆಯಿಂದ; ನ್ಯೂಯಾರ್ಕ್‌ನಿಂದ ಚೆಚೇನಿಯಾ?
ಕಾರ್ಗಿಲ್ ನೌಖಾಲಿಯಿಂದ? ಇನ್ನ್ಯಾರೋ ಅಂದರು
ಮೊನ್ನೆ ನಾನೇ ನೋಡಿದ ಮಂಡೇಲನ ಕೈ ಕುಲುಕಿ
ಆಫ್ರಿಕೆಯಲ್ಲಿದ್ದರು! ಎಂದು
ಇನ್ನೊಬ್ಬ ಕಾರ್ಗಿಲ್ ಬೀದಿಯಲಿ ಇನ್ನೊಬ್ಬ ಕಾರ್ಗಿಲ್ ಬೀದಿಯಲಿ
ವರ್ಲ್ಡ್ ಟ್ರೇಡ್ ಸೆಂಟರ್‌ನಲ್ಲಿ ಏನೇನೋ
ಹುಡುಕುತಾ ಇರುವುದು ನಾನೇ ಕಂಡೆ
ಸಿಕ್ಕಿರಬಹುದು ಅದು. ಅವರು ಬಂದರೆ
ಅಲ್ಲಿಂದಲೇ ವಾಘಾಗಡಿಯ ದಾಟಿ ಬರಬಹುದು

ಬಿಹಾರದ ಕ್ರಿಸ್ತ ಪಾದ್ರಿಯ ಗಾಯಗಳ ಬಳಿ
ಇಸ್ಲಾಮಾಬಾದ್‌ನ ಬೀದಿಗಳಲಿ
ಲಾಡೆನ್, ಒಬಾಮಾ ಜೊತೆಯಲಿ ಕಂಡೆವೆನ್ನುವರು ಹಲವರು
ಅವರು ಬಂದರೆ ಅಲ್ಲಿಂದಲೇ ಬರಬಹುದು
ಯಾರಿಗೂ ಖಚಿತವಿಲ್ಲ ಹಾಗೆಂದೇ ಎಲ್ಲ ಮೂಲೆಗಳ
ಎಲ್ಲ ನಿಲ್ದಾಣಗಳಿಗೂ ಬಂತು ಜೀವ
ಬರಲಿ ಎಲ್ಲಿಂದಲಾದರೂ ಗಾಂಧಿ
ಎಲ್ಲ ನಿಲ್ದಾಣಗಳಲ್ಲೂ ಇರಲಿ ಗುಂಡು ನಿರೋಧಕ

ವಾಯುಪಡೆ, ಸೇನಾಪಡೆ, ಅಶ್ವ, ಶ್ವಾನದಳ
ಇರಲಿರಲಿ ಕಟ್ಟೆಚ್ಚರ, ಇದ್ದೇ ಇರಬೇಕೊಂದು ಅಂಬ್ಯುಲೆನ್ಸ್
ದೇಶದ ತುಂಬ ಮೊಳಗುವ ಸೈರನ್ನಿನ ಸದ್ದು
ಪಥ ಸಂಚಲನೆ ಬೂಟು, ಪಥ ಸಂಚಲನದ ಬೂಟು
ಸಾಲಾಗಿ ಬಂದು ನಿಲ್ಲುವ ಗೂಟಗಳ ಕಾರು
ಭಾಷಣಗಳ ಟೈಪಿಸುವ ಸದ್ದು
ವೃತ್ತಪತ್ರಿಕೆ ಚಾನಲ್‌ಗಳ ಧಾವಂತ
ಬರುವ ರೈಲುಗಳು ಬಂದವು ಬಸ್ಸುಗಳು ವಿಮಾನಗಳು
ಏರಿಳಿದು ಉಬ್ಬಸಪಟ್ಟವು ಇಣುಕಿಣುಕಿ ಹೂ ಹಿಡಿದ
ಗೋಣುಗಳು ಗೋಣಗಾಡಿದವು
ಸದ್ದಡಗುತ್ತ ಬಂದ ಪಥ ಚಂಚಲನ
ದೇಶಕ್ಕೆ ಶತಮಾನದ ದಣಿವಿನ ನಿದ್ದೆ
ಮಂಪರು ಹತ್ತಿ ಮಂದಿ ಅಲ್ಲಲ್ಲೇ ಉರುಳಿದರು
ಬಂದರು ಗಾಂಧಿ ಟಾಂಗಾದ ಮೆಟ್ಟಿಲಿಳಿದು
ಬಡವಾದ ಕುದುರೆಯ ಮೈಸವರಿ
ಅಚ್ಛಾ! ನೀನಿನ್ನು ಹಿಂದೆ ಹೋಗು
ಎಳೆಯಲಾರದು ಈ ಮುದಿ ಕುದುರೆ
ನಡೆದೇ ಹೋಗುವೆ ಎಂದು ಕುದುರೆಯ ಮೈದಡವಿದರು
ನೌಖಾಲಿ ಕಡೆ ಹೆಜ್ಜೆ ಹಾಕಿದರು
ಮೊಗ್ಗುಗಳು ಪಟಪಟ ಬಿರಿದವು
ಹಕ್ಕಿ ಪಾರಿವಾಳಗಳು ಹಾಡಿದವು
ಹಸುವಿನ ಬಂಟೆ ಕಿಣಿ ಕಿಣಿಸಿತು
ಸೂರ್ಯ ಸಂಜೆಗೆ ಇಳಿವ ಹೊತ್ತು
ಬೀಸುಗಾಲಿನ ಗಾಂಧಿ ಕಿವಿಗೆ ಕೇಳಿಸಲಿಲ್ಲ
ಭಜನೆ, ಸಂಕೀರ್ತನೆ ಸುಶ್ರಾವ್ಯ ಹಾಡು ಕೇಳಿದರೂ
ಒಡೆದ ಗ್ರಾಮೊಫೋನಿನ ಹಾಡು 'ಹೇ ರಾಮ್' ಎನ್ನುನ್ನ
ದಿಕ್ಕು ಬದಲಿಸಿ ನಡೆಯುತ್ತಾ ಹೋಗೇಬಿಟ್ಟರು ಗಾಂಧಿ
ನೌಖಾಲಿಗೋ.. ನಾಗಸಾಕಿಗೋ ಬುದ್ಧ ಗಯೆಗೋ...

ಸೌಜನ್ಯ : ಹೊಸತು ಜನವರಿ 2015 ಪತ್ರಿಕೆಯಿಂದ ಆಯ್ದುಕೊಳ್ಳಲಾಗಿದೆ

# ಮೌನ ಕಣಿವೆ

– ಕೆ.ಎನ್. ಶಿವತೀರ್ಥನ್

ಮಾತಿಗೆ ನಿಲುಕದ ಮೌನ ಕಣಿವೆ
ಮಧು ತುಳುಕುವ ಹೂಗಂಧಗಾಳಿ
ಗಿಡ ಮರ ಸ್ವರ ಸಲ್ಲಾಪ
ಕುಣಿವ ನವಿಲು ಹಾರುವ ಹಕ್ಕಿ

ಗಂಗಾ ಸಲಿಲ ಹಿಮಾಲಯ
ಕನ್ಯಾಕುಮಾರಿ ಮಡುಗಟ್ಟಿದ ಜಲ

ಮೂಡಲ ಪಡುವಲ
ಮೂಡಿ ಮುಳುಗುವ
ಕಣ್ ಮನೆಗಳ ಹಬ್ಬ !

ಕಲೆ ಸಂಸ್ಕೃತಿ ನಾಗರೀಕತೆ
ಜನ ಮನದ ಉಸಿರು
ಇತಿಹಾಸ ವಿಕಾಸ

ಅಣು ಸ್ಫೋಟ
ಹಿರೋಷಿಮಾ ನಾಗಸಾಕಿ
ಜೀವ ಮರಣ ಹೋಮ

ಸತ್ಯ ಅಹಿಂಸೆಯ ಶೋಧ
ಗಾಂಧಿ ಯಶದ ನಿಧಿ

ಸೌಜನ್ಯ : ಕೆ.ಎನ್. ಶಿವತೀರ್ಥನ್ ಅವರ ಗೆರೆಗಳು
ಕವನ ಸಂಕಲನದಿಂದ ಆಯ್ಕೆ ಮಾಡಿಕೊಳ್ಳಲಾಗಿದೆ

# ನೀ ಮೌನ ಜಂಗಮರು....

– ಡಾ. ದಿನೇಶ್ ನಾಯಕ್

ನೂರು ಗೌಜಿ–ಗದ್ದಲಗಳ
ಸಾವಿರ ವಾದ–ವಾಗ್ವಾದಗಳು ನಡುವೆಯೂ
ನಿನ್ನ ಮದು ನುಡಿಯ ನೆರಳು
ಹೊರಟಿದೆ ಮೂಕಮೆರವಣಿಗೆ
ಶಬ್ದನಾದದ ಹೆಸರ ಕೊರೆದು

ನುಡಿದ ನಿನ್ನುಡಿಗೆ ನಿಡಿದ ನನ್ನುಸಿರಿಗೆ
ಅಪಾರ್ಥದ ವಿಪರೀತ ಅರ್ಥಗಳು
ಬಸಿರು ತುಂಬ ವಿಷವ ಹೊತ್ತು
ಹೂಂಕರಿಸಲು ನೆಲದ ರಣಹದ್ದುಗಳು

ನನ್ನ ಧರ್ಮದ ಬಲವು ಅಧ್ಯಾತ್ಮದ ಕಳಚಿ ಬಿದ್ದ ಗಳಿಗೆ
ಬಯಲ ತುಂಬಾ ಕಂಪಿಸುವ ಶೋಕ ತಪ್ತ ಮಳೆದುಂಬಿಗಳು

ನೀ ಕಲಿಸಿದ ಜೀವನ ಶುಚಿ
ಬದುಕಿನ ರುಚಿಯು ಗುಡಿಸಿ ಹಾಕಿದೆ
ಬೀದಿ–ಕೇರಿಯ ಕೊಚ್ಚಿ ಕೊಳೆಯನು

ನೀ ನಿವೃತ್ತನಾದರೂ ಶತಮಾನದ ಅನುಮಾನಕ್ಕೆ
ಕುತ್ತಾದರೂ ನಿಜಪ್ರೇಮದ ಹಾದಿಯಲ್ಲಿ
ನಡೆಯುತ್ತಲೇ ಇರುವೆ ಕೋಲು ಹಿಡಿದು

ಬಾಗಿದ ಬೆನ್ನು ಇನ್ನೆಂದೂ ಮುಖ ತೋರಿಸಲಾರ
ಎಷ್ಟೇ ಅಂದರೆ ಬೆನ್ನು ಬೇಡರು ದುಂದುಮಾರರು
ಏನಾದರೂ ನೀನೇ ಮೌನಜಂಗಮನು
ನೊಂದವರಿಗೂ ನಿನ್ನ ಕೊಂದವರಿಗೂ

ಸೌಜನ್ಯ : ಹೊಸತು – ಅಕ್ಟೋಬರ್ 2019

# 'ಮೋಹನ' – ಮೋಹಕ ನಗೆ

– ಜೆ. ರಾಮಲಿಂಗೇಗೌಡ

ಗಾಂಧಿ ತಾತ ನಿನ್ನ ಮೋಹಕ ನಗೆ
ಅದೊಂಥರಾ ಬಗೆಕಣ್ಣ ನೋಟದ ನಗೆಯಮಗೆ
ಬದ್ಧ ವೈರಿಯನೂ ಬೇಸ್ತು ಬೀಳಿಸುವ ನಗೆ
ಮೂರು ಲೋಕಕೂ ಹಂಚಿ ಇನ್ನೂ ಮಿಗೆ
ನಿಷ್ಕಪಟ, ಅಪ್ಪಟ 'ದೇಸಿ' ನಿನ್ನ ನಗೆ

ಕುಹಕ ಕುಟಿಲವಳಿದ ನಗೆ
ಒಳಗಿನ ಧಗೆಯಳಿಸಿ, ಸುತ್ತೆಲ್ಲ
ತಂಪು–ಕಂಪು ಸೂಸುವ ನಗೆ
ಇನ್ನಷ್ಟು ಮತ್ತಷ್ಟು ಬೇಕೆಮಗೆ
ಆ ಬೊಚ್ಚುಬಾಯಿಯ ಬಿಚ್ಚುನಗೆ

ರಾಜಕೋಟದಿಂದ ಇಂಗ್ಲೆಂಡದವರೆಗೆ
ಮತ್ತಲ್ಲಿಂದ ಆಫ್ರಿಕಾದ ಕಗ್ಗಾಡಿಗೆ ನಿನ್ನ ನಡಿಗೆ
ಮರಳಿ ಭಾರತಕೆ ಬಂದ ನೀ ನಮಗೆ
ತಂದುದೇ ಬಂಡಿಗಟ್ಟಲೆ ಪ್ರೇಮ–ಪ್ರೀತಿ
ಜತೆಗೆ ಟನ್ನುಗಟ್ಟಲೆ ಮೋಹಕ–ಮುಗ್ಧ ನಗೆ
ನಮ್ಮ ಮನೆ–ಮನಗಳಿಗೆ ಹರುಷವಿತ್ತ ಆ ಬಗೆ

ಬಿಳಿಯರಿಂದ ದೇಶ ಬಿಡಿಸೆ, ಅನರ್ಹರಿಗದನೊಪ್ಪಿಸಿ
ಅದರ ತಪ್ಪಿಗೆ ನಾಥೂರಾಮನ ಬಿಸಿಗುಂಡ ಭುಜಿಸಿ
ಸತ್ಯ–ಅಹಿಂಸೆಯ ಉಸಿರಲಿ ಭಜಿಸಿ, ಹೇಳುತ 'ಹೇರಾಮ್'
ತೆರಳಿದ ನಿನಗಿದೋ ಪುಷ್ಪಪ ನಮನ, ಜತೆಗೆ ಹರಿಸುವೆವು
ಭರಪೂರ ಮುಗುಳು ನಗೆ! ಹನಿಗಣ್ಣಿನೊಂದಿಗೆ

ಸೌಜನ್ಯ : ಗಾಂಧಿಭವನ ವಾರ್ತಾ–ಅಕ್ಟೋಬರ್ 2019 ಪತ್ರಿಕೆಯಿಂದ
ಆಯ್ದುಕೊಳ್ಳಲಾಗಿದೆ.

# ಅಹಿಂಸಾ ಬಾಪು

– ಎ. ಕೃಷ್ಣಭಟ್ಟ

ಹಿಂಸಾ ರಭಸದ ಕಂಸನ ಬಳಗವ
ಹಿಂಸಿಸಿದವನೆ ಬಾಪೂಜಿಯೇ
ಹಿಂಸೆಯನಡಗಿಪ ಹಿಂಸೆಯ ಮೂರುತಿ
ಹಿಂಸೆಗೆ ಹೇಸಿದ ಬಾಪೂಜಿಯೇ

ಹಿಂಸೆಹ ರಭಸವ ಹಿಂಸಿಸಿದವನಿಗೆ
ಹಿಂಸೆಯು ಫಲವೇ ಬಾಪೂಜಿಯೇ
ಹಿಂಸೆಯ ಮಾಡಿದ ವಂಶದಿ ಬಳೆದವ
ಸಂಶಯ ಶೂರನೆ? ಬಾಪೂಜಿಯೇ

ಸಂಶಯ ಶೂರನ ಧ್ವಂಸಕೆ ನೀನೆಂ
ತಂಶವ ಕೊಟ್ಟೆಯೊ ಬಾಪೂಜಿಯೇ
ಹಿಂಸೆಯ ಹಿಂಸಿಪ ಹಿಂಸೆಯ ತತ್ವವು
ಹಿಂಸೆಗೆ ಬಲಿಯೆ ಬಾಪೂಜಿಯೇ

ಸತ್ಯದ ಮೂರ್ತಿಯ ಚಿತ್ತದೆ ದುರಿತವು
ಸುತ್ತಿರ ಬಲ್ಲುದೆ ಬಾಪೂಜಿಯೇ
ಸತ್ಯದ ಚಿತ್ತದಿ ಸುತ್ತಲು ನಿರ್ಮಲ
ಸುತ್ತಿದೆಯಲ್ಲವೆ ಬಾಪೂಜಿಯೇ

ಮಾನವ ತನ್ನಭಿಮಾನದ ಬಿಂಬವ
ಕಾಣುವ ನಿನ್ನೊಳು ಬಾಪೂಜಿಯೇ
ಹೀನನು ತನ್ನಯ ಹೀನಗುಣಂಗಳ
ಕಾಣುವ ನಿನ್ನೊಳು ಬಾಪೂಜಿಯೇ

ನಿರ್ಗುಣನಾದವಗೊಗ್ಗದ ಗುಣಗಳ
ನೊಗ್ಗಿಪರಲ್ಲವೆ ಬಪೂಜಿಯೇ
ಹಿಗ್ಗುವ ಕುಗ್ಗುವ ಸ್ವರ್ಗದ ನರಕದ
ಬುಗ್ಗೆಯ ನೀಂಟದ ಬಾಪೂಜಿಯೇ

ನಿರ್ಗುಣನಾದರು ಸುದ್ಗುಣಿಯೆಂಬರೆ
ದುರ್ಗುಣಿಯೆಂಬರೆ ಬಾಪೂಜಿಯೇ
ನಿರ್ಗುಣ ನೀತಿಯ ಬುಗ್ಗೆಯೊಳೆಲ್ಲಾ
ಬುಗ್ಗೆಗಳೊಗೆವವರೆ ? ಬಾಪೂಜಿಯೇ

ದುಷ್ಟರ ದೋಷವ ನೆಟ್ಟನೆ ತೋರಿಸಿ
ಕೊಟ್ಟವ ನೀನೇ ಬಾಪೂಜಿಯೇ
ಕೆಟ್ಟವರಾಗುವ ಬಟ್ಟೆಯ ಬಿಡಿಸುವ
ದಿಟ್ಟನೆ ಧೀರನೆ ಬಾಪೂಜಿಯೇ

ಕೆಡುವವರೆಲ್ಲರ ಬಿಡದುರೆ ಸಲಹುವ
ಬೆಡಗಿನ ಮಹಿಮನೆ ಬಾಪೂಜಿಯೇ
ಕೆಡುಕಿನ ಕಾಟವ ನಡೆಯಲು ಬಿಡದವ
ನೊಡೆಯನೆ ನಾಡಿಗೆ ಬಾಪೂಜಿಯೇ

ದೇವರನೊಲಿಸಿದ ಬಾವದಿ ನಲಿಯುವ
ಭಾವಿಕ ನೀನೇ ಬಾಪೂಜಿಯೇ
ಬಾವದಿ ದೇವನ ಭಾವವನೊಲಿಸಿದ
ಕೋವಿದ ನೀನೆ ಬಾಪೂಜಿಯೇ

ದೇವನನೊಲಿಸಿದ ಭಾವಾವೇಶದ
ಭಾವವು ನಿನ್ನದು ಬಾಪೂಜಿಯೇ
ಭಾವಾವೇಶದ ಭಾವವ ಬುವಿಯೊಳು
ಭಾವಿಸಿ ಬಿತ್ತಿದ ಬಾಪೂಜಿಯೇ

ಭಾವಾವೇಶದಿ ಜೀವದಯಾಮಯ
ಭಾವದಿ ಮೆರೆಯುವ ಬಾಪೂಜಿಯೇ
ಜೀವದಯಾಮಯ ಭಾವವ ಬುವಿಯೊಳ
ಗೀವವ ನೀನೇ ಬಾಪೂಜಿಯೇ

ತನುಮನ ಧನಗಳನನುದಿನ ಬೆಳಗಿನ
ಮನುಮುನಿ ಭನುವೆ ಬಾಪೂಜಿಯೇ
ಮನೆಮನೆ ಮಂದಿಯ ತನುಮನ ಧನದೊಳು
ಮನೆಯನು ಮಾಡಿದ ಬಪೂಜಿಯೇ

ತಮಗಳ ಮಮತೆಯ ಮಮಕಾರಂಗಳ
ಭ್ರಮೆಯನು ಬಿಡಿಸುವ ಬಾಪೂಜಿಯೇ
ತಮಗಳ ಭ್ರಮೆಯೊಳಗಮರಿದ ಮನುಜರ
ಭ್ರಮೆಯನು ಬಿಡಿಸುವ ಬಾಪೂಜಿಯೇ

ಆಶಾದ್ವೇಷದ ನಾಶವ ನಶಿಸುವ
ವೇಷವಿಶೇಷದ ಬಾಪೂಜಿಯೇ
ಆಶೆ ದುರಾಶೆಯು ಬೀಸಿದ ಮೋಸವ
ಘಾಸಿಪ ಕಲ್ಕ್ಯನೆ ಬಾಪೂಜಿಯೇ

ಕಾಮಕ್ರೋಧದ ತಾಸವಳಿಸುವ
ನೇಮದ ಕಲ್ಕ್ಯನೆ ಬಾಪೂಜಿಯೇ
ಭೂಮಿಯ ಭಾರದ ತಾಮಸ ತರಿಯುವ
ಪ್ರೇಮದ ಕಲ್ಕ್ಯನೆ ಬಾಪೂಜಿಯೇ

ಸೌಜನ್ಯ : ಶೇಷಾಚಲ ಪ್ರಕಾಶನದ ಬಡವರ ಬಾಪೂಜಿ ಅಥವಾ
ಗಾಂಧೀ ಗೀತೆ ಪುಸ್ತಕದಿಂದ

# ಗಾಂಧಿ ಶಕ್ತಿ

– ಡಾ.ಕೆ. ಷರೀಫಾ

ಸರಳ ಸಜ್ಜನ ತುಂಡು ಲಂಗೋಟಿಯ
ಬರೀ ಮೈಯ ಫಕೀರ
ಸತ್ಯ, ಅಹಿಂಸೆ, ಶಾಂತಿಯ
ಮಂತ್ರವ ಜಪಿಸಿದ ಸಂಜಾತ,
ಗ್ರಾಮ ಸ್ವರಾಜ್ಯದ ಬೀಜ ಮಂತ್ರದ
ಕನಸು ಕಂಡ ಕನಸುಗಾರ.
ಅಹಿಂಸೆ ಎಂಬ ಮೂರಕ್ಷರದ
ಶಾಂತಿ, ಸೌಹಾರ್ದ, ಪ್ರೀತಿಯ ಮೋಡಿ
ನಾಡಿನ ಒಳಿತನ್ನೇ ಬಯಸಿ,
ಕಳಿಸಿದೆ ಶಾಂತಿ ಸಂದೇಶ.
ತುಂಡು ಬಟ್ಟೆಯಲ್ಲಿಯೇ
ದೇಶ ಸುತ್ತಿದ ಸರದಾರ.

ಚರಕ ನೂಲುತ್ತ ನೂಲುತ್ತ
ಸರಳ ಜೀವನದ ಅಡಿಪಾಯ
ಬಾಗಿದ ಬೆನ್ನು, ಹತ್ತಿಯ ನೂಲು
ಖಾದಿ ನೂಲುತ್ತ, ನೇಯುತ್ತ
ಬದಲಾಯಿತು ಬದುಕು
ಬಿಡು ನಿನ್ನ ಚಿತ್ತಾರವೇ ಭಿನ್ನ.

ವಿಮಾನದಲ್ಲಿ ಹಾರಾಡುವ ಅವರು
ಕಿತ್ತುಕೊಂಡರು ನಿನ್ನ ಚಾಳೀಸು,
ಪೋಜು ಕೊಡುತ್ತಾರೆ ಫೋಟೊಕ್ಕೆ
ಕೈಯಲ್ಲಿ ಕಸಮರಿಗೆ ಹಿಡಿದು,
ಸ್ವಚ್ಛಭಾರತದ ಅಭಿಯಾನಕ್ಕೆ
ಕೋಟಿ ಕೋಟಿ ಸುರಿಯುತ್ತಾರೆ
ಅನ್ನ ನೀಡುವ ರೈತನಿಗಿಲ್ಲ ಪರಿಹಾರ.

ನಿನ್ನ ಕೊಂದವನು ದೇಶಭಕ್ತ
ಅವನ ಗುಡಿಕಟ್ಟುವುದು ಅಪರಾಧವಲ್ಲ
ಎಂತಹ ವಿಪರ್ಯಾಸ ನೋಡು!
ಕೊಂದವರಿಂದಲೇ ನಿನ್ನ ಜಯಂತಿ ಆಚರಣೆ
ಇದುವೇ ನಿನ್ನ ಶಕ್ತಿಯೂ ಹೌದಲ್ಲವೇ ಗಾಂಧೀ.

---

ಗದಗಿನಲ್ಲಿ ಭಗಿನಿ ಮಂಡಲದ ಪರವಾಗಿ ಕಮಲಾಬಾಯಿ ವಿಣೇಕರ, ತುಕ್ಕಾಬಾಯಿ ಗುರ್ಜರ, ಜಿಂದವ್ವಾ ಕುನ್ನಿಭಾವಿ, ಬಸವ್ವಾ ಗೌಡರ, ಶಾಂತಾಬಾಯಿ ಬೆಟಗೇರಿ, ಸುಂದರಾಬಾಯಿ ನಾಗಪ್ಪನವರ, ಗಂಗಾಬಾಯಿ ಮುಂತಾದವರು ಪ್ರತಿನಿತ್ಯ ಮುಂಜಾಗನೆ ಪ್ರಭಾತಫೇರಿಯನ್ನು ಅತ್ಯುತ್ಸಾಹದಿಂದ ಹೊರಡಿಸುತ್ತಿದ್ದರು. ಈ ಭಗಿನಿಯರು ಬೆಳಗು ಮುಂಜಾನೆ ಕೈಯಲ್ಲಿ ಧ್ವಜವನ್ನು ಹಿಡಿದು ದೇಶಭಕ್ತಿ ಗೀತೆಗಳೊಂದಿಗೆ ಸಾಗುತ್ತಿದ್ದರು.

ಭಾರತ ದೇಶ ಕೊರಗುತಿಹದು
ಕರುಣೆಯಿಂದ ಪೊರೆಯೋ ದೇವಾ
ಧರ್ಮಭೂಮಿ ಕರ್ಮ ಭೂಮಿ
ನರ್ಮವಾಯಿತು ದಾಸ್ಯದಿಂದ
ಸತ್ಯಾಗ್ರಹವು ಗಾಂಧೀ ತತ್ವಾ
ಸತ್ಯದಿಂದ ಕಾದುತಿಹೆವು ನಿತ್ಯ ನಿನ್ನ
ನಂಬಿದೆವು ಸತ್ಯದೇವಾ ಪೊರೆಯೋ ಬೇಗಾ

ಸೌಜನ್ಯ : ಡಾ. ಜೆ.ಎ. ಬಿರಾದಾರ ಅವರ ಮುಂಬಯಿ ಕರ್ನಾಟಕದಲ್ಲಿ ಸವಿನಯ ಕಾನೂನುಭಂಗ ಚಳವಳಿ ಪುಸ್ತಕದಿಂದ

# ಮತ್ತೆ ಮತ್ತೇ ಗಾಂಧಿ

– ಡಾ. ಕೆ. ಪರೀಘಾ

ಕೈಯಲ್ಲಿ ಕೋಲು ಹಿಡಿದ
ತುಂಡು ಲಂಗೋಟಿಯ ಗಾಂಧೀ
ರಥಯಾತ್ರೆಯಲ್ಲಿ ನಿನಗೆ
ಯಾವ ಅಭಿರುಚಿಯೂ ಇಲ್ಲ
ನಂತರದಲಿ ಕಳಕೊಂಡೆಯಲ್ಲ
ನಿನ್ನ ಚಾಳೀಸು ಕನ್ನಡಕ
ಗಾಂಧೀ ಮತ್ತೆ ಮತ್ತೇ ಗಾಂಧೀ

ಬಡಕಲು ದೇಹದ
ನೀಳ ಕಾಯದ, ಲಂಗೋಟಿ ಅಜ್ಜ
ಮಕ್ಕಳ ತಾತ ಸರಳ ಸಜ್ಜನ
ಈಗೀಗ ಎಲ್ಲ ಕಡೆಗೂ
ಗಾಂಧಿ ನಿನ್ನ ಕನ್ನಡಕದ್ದೇ ಮಾತು
ಹೇ ರಾಮ್ ರಾಮಾ
ಗಾಂಧೀ ಮತ್ತೆ ಮತ್ತೇ ಗಾಂಧೀ

ನಿನ್ನ ಚಾಳೀಸಿನ ಒಂದು ಕಣ್ಣು
ಸ್ವಚ್ಛ ಎಂದರೆ
ಮತ್ತೊಂದು ಕಣ್ಣು
ಭಾರತ್ ಹೇಳುತ್ತದೆ.
ನಿನ್ನ ತತ್ವಗಳ ಗಾಳಿಗೆ
ತೂರಿಯಾಗಿದೆ ಆಗಲೇ
ಅಹಿಂಸೆಯ ಸಂತ ಗಾಂಧೀ
ಮತ್ತೆ ಮತ್ತೇ ಗಾಂಧೀ

ಗಿಡುಗನ ಕೈಯಿಂದ ರಾಷ್ಟ್ರ
ಬಿಡಿಸಿ ತಂದಿದ್ದೆ ಅಂದು
ಇಂದು ಮತ್ತೇ ಕಾರ್ಪೋರೇಟ್
ಕೈಯಲ್ಲಿ ಸಿಕ್ಕು ನರಳುತ್ತಿದೆ ದೇಶ
ಕೇಳುತ್ತಿದೆ ಸ್ವಾತಂತ್ರ ಬಿಕ್ಕುತ್ತಿದೆ
ಹೇ ರಾಮ್ ರಾಮಾ
ಗಾಂಧೀ ಮತ್ತೆ ಮತ್ತೇ ಗಾಂಧೀ

ನಿನ್ನ ತತ್ವ ಸಿದ್ಧಾಂತ ಆಚರಿಸಲಿಲ್ಲ
ಚಾಳೀಸಿನಲ್ಲಿಯೇ ಇವರ ಸರ್ಕಸ್ಸು
ಕಸಿದುಕೊಂಡಿದ್ದಾರೆ ನಿನ್ನ
ಬಡವರ ಕೈಯಿಂದ
ಹಿಡಿದುಕೊಂಡಿದ್ದಾನೆ ದುಡ್ಡಿನ ಧಣಿ
ಅವರಿಗೆ ಅರಿವಾಗುತ್ತಿಲ್ಲ
ಭೋದಿಸತ್ವದ ಸತ್ವ
ಸಾಬರಮತಿಯ ಸಂತನಿಗೆ
ಒದಗಿದೆ ದು:ಸ್ಥಿತಿ
ಗಾಂಧೀ ಮತ್ತೆ ಮತ್ತೇ ಗಾಂಧೀ

ಅವರವರ ಮೂಗಿನ ನೇರಕ್ಕೇ
ಅವರವರದೇ ವ್ಯಾಖ್ಯಾನ
ಅಹಿಂಸೆಯ ಫಕೀರನಿಗೆ
ಬರಬಾರದಿತ್ತು ಈ ಸ್ಥಿತಿ
ತಪ್ಪದೇ ನೆನಪಿಸುತ್ತಾನೆ ರಾಜಕಾರಣಿ
ಮಾಡುವೆ ನಿನಗೊಂದು ಸಲಾಂ
ಇವರ ನಾಟಕ ನೋಡಿ
ಮನದಲ್ಲೇ ನಗುತ್ತಿರುವೆಯಲ್ಲಾ
ಗಾಂಧೀ ಮತ್ತೆ ಮತ್ತೇ ಗಾಂಧೀ

# ನ ಭೂತೋ ನ ಭವಿಷ್ಯತಿ

– ಪಿ. ವೆಂಕೋಬರಾವ್

ಇದೋ ಸ್ವೀಕರಿಸು ತಂದೆ, ಲೇಖಕನ ಈ ಕಾವ್ಯಾಂಜಲಿ
ಪುಷ್ಪಾಂಜಲಿಯಾಗಿ ನಿಮಗೆ ಸಮರ್ಪಿತವಾಗುತ್ತಿದೆ.

ಶಿವನ ಜಡೆಯಿಂದಿಳಿದು ಬಂದೆ ಗಂಗೆಯಂದದಿ
ನೀನಿಳಿದು ಬಂದೀ ಧರೆಗೆ ಜೀವ ನದಿಯಾಗಿ
ಗಗನ ಚುಂಬಿತ ಶುಭ್ರ ಧವಲಾದ್ರಿಯೋಪದಿ
ನೀನತಿ ಶುದ್ಧ ಪಾವನನಾಗಿಹೆ ಲೋಕಕಣ್ಮಣಿಯಾಗಿ

ತಾಮಸದಿ ಲೋಕ ಮುಳುಗಿ ಮಲಗಿರಲು
ನೀನೆರಗಿದೀ ಧರೆಗೆ ಬಾಪೂ ಆನಂತ ಬೆಳಕಾಗಿ
ತಿಮಿರರಾಶಿಯದು ಜಾರದೆ ನೀ ಇರುತಿರಲು
ನೀನವತರಿಸಿದೀ ಭೂಮಿಯಲಿ ಬಾಳಗನ್ನಡಿಯಾಗಿ

ಹರಿವ ನದಿಯದು ತಾ ಹೊಲಸು ತೊಳೆದಂತೆ
ಕಿರಣ ಬೆಳಕದು ಪಸರಿ ಬೆಳಕ ಚೆಲುವಂತೆ
ಕರಿ ಮೇಘವದು ತಾ ಮಳೆಸುರಿಸುವಂತೆ
ಧರೆಗೆರೆದು ಬಂದೆ ನೀ ಧರ್ಮಸುತನಂತೆ

ನೀನಾಡಿದಾ ನುಡಿ ಚಿರನುಡಿಯಾಯಿತೆಮಗೆ
ನೀ ಮೆಟ್ಟಿಚಾ ನೆಲ ತಪೋಭೂಮಿಯಾಯಿತೆಮಗೆ
ನೀ ಮಾಡಿದಾ ಕಾರ್ಯವದು ಆದರ್ಶವಾಯಿತೆಮಗೆ
ನಿನ್ನಾಚಾರವೆ ಸಜೀವ ಸ್ಫೂರ್ತಿ ನೀಡಿತೆಮಗೆ

ಕೊಳೆತ ಧರ್ಮವನೆಸೆತು ಹೊಸತು ಧರ್ಮವ ಹೊಸೆತು
ಮೇಳಯಿಸಿದೆ ಧರ್ಮವನು ಕಾಲಧರ್ಮವನರಿತು
ಹಳೆಯ ವಿಚಾರಧಾರೆಗೆ ಹೊಸತಿರುವಿತ್ತೆ ನೀನಿಂತು
ಬಾಳಿನುನ್ವೇಷಣೆಕುಸಿರಾದೆ ನೀ ಚೇತನವಿತ್ತು

ಪರದಾಸ್ಯ ಕಿತ್ತೊಗೆದು ಶೃಂಕಲೆಗಳ ಹರಿದು
ಭಾರತಾಂಬೆಗೆ ಸ್ವಾತಂತ್ರ್ಯೋದಕವ ಸುರಿದು
ಬೆರಗುಗೊಳಿಸಿದೆ ಮನುಕುಲವ ಹಿಂಸೆಯ ತೊರೆದು
ಹರಿಸಿದೆ ಸತ್ಯವನಿಳೆಗೆ ನೀ ಸತ್ಯಾಗ್ರಹ ಮಂತ್ರಕೊಲಿದು

ನಾಡ ನುಡಿಯಾಗಿ ಹೃದಯ ದನಿಯಾಗಿ
ಲೋಕ ಬೆಳಕಾಗಿ ಬದುಕಿಬಾಳಿದೆ ನೀ ಕಲ್ಪತರುವಾಗಿ
ಒಸಗೆಯಾಗಿತ್ತೆ ತನುವ ನೀ ಸತ್ಯಶೋಧನೆಗಾಗಿ
ಚಾರಿತ್ರ್ಯಗೀತ್ತೆ ನೀ ಜೀವನದ ಒಸಗೆಯಾಗಿ

ಬಹುಮುಖವಾಗಿ ಹರಿದೆ ಜೀವನದಲಿ ಬೆರೆದ
ಗುರುವಾದೆ ಋಷಿಯಾದೆ ಕ್ರಾಂತಿದರಶಿಯಾದೆ
ಆಚಾರವೆ ನಿನಗೆ ಮೊದಲು ಅದಕೆ ಜೀವನವನರೆದೆ
ಆಚಾರದೊರೆಗೆ ತಿಕ್ಕಿದ ಧರ್ಮವನೆ ನೀ ನುಡಿದೆ

ಭಾರತ ಸಾಂಸ್ಕೃತಿಯ ಪ್ರತಿರೂಪವೆನಿಸಿ ನೀ
ಮನುಕುಲದ ಹೃದಯಗೆದ್ದು ಅಮರನಾಗಿಹೆ ಬಾಪೂ
ಜೀವನದಿಯಲಿ ಚೇತನವಾಗಿ ಹರಿಯುತಿಹೆ ನೀ
ಮರೆಯಲೆಂತು ನಿನ್ನ ಹೃದಯದನಿಯ ಬಾಪೂ

ವಿಶ್ರಾಂತಿ ಇಲ್ಲದ ಪಯಣವನೆ ನೀ ಮಾಡಿ
ಕೊನೆಗೊಮ್ಮೆ ದೂರಸರಿದೆ ನಮ್ಮನಗಲಿ
ಹುಚ್ಚು ಲೋಕ ಕೊನೆಗೂ ಹುಚ್ಚು ವರ್ತನೆ ಮಾಡಿ
ಕುರುಡಾಯಿತು ಕಾರಿರುಳ ನಾಕ ಕ್ರಂದನದಲಿ

ಸೌಜನ್ಯ : ಪಿ. ವೆಂಕೋಬರಾವ್ ಅವರ ಗಾಂಧಿ ಚರಿತ ಮಾನಸ
ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ

# ಬಾಪು ನೆನಪಿನಲ್ಲಿ

– ಪ್ರೊ. ಸತ್ಯನಾರಾಯಣರಾವ್ ಅಣತಿ

ನಾವು ನಿನ್ನ ನೋಡುವ ಹೊತ್ತಿಗಾಗಲೇ
ಅರೆಬೆತ್ತಲಾಗಿ ಕೋಲು ಹಿಡಿದು ನಡೆದಾಡುತ್ತಿದ್ದೆ
ಇಬ್ಬರು ಹುಡುಗಿಯರ ಭುಜ ಹಿಡಿದು ಬಂದು
ಕೂತು ಪ್ರಾರ್ಥನೆ ನಡೆಸುತ್ತಿದ್ದೆ ಪ್ರವಚನ ನೀಡುತ್ತಿದ್ದೆ

ನಾನು ಚಿಕ್ಕವನಿದ್ದಾಗ ಪಿಕೆಟಿಂಗ್‌ಗೆ ಹೋಗಿ
ಈಚಲಮರಕ್ಕೆ ಕಟ್ಟಿದ್ದ ಹೆಂಡದ ಗಡಿಗೆಗಳ ಒಡೆದು
ಸಂಜೆವರೆಗೂ ಪೋಲೀಸ್ ಠಾಣೆಯಲ್ಲಿ ಕೂತು ಬಂದಿದ್ದೆ
ನೀನು ನಮ್ಮೂರಿಗೆ ಬಂದಾಗ ನೆಟ್ಟ ತೆಂಗಿನಮರಗಳ
ನೆರಳಲ್ಲಿ ನಡೆದಾಡಿ ಎಳನೀರು ಕುಡಿದಿದ್ದೇನೆ

ನೀನು ಕೂರುವ ಭಂಗಿಯಲ್ಲಿ ಕುಳಿತು ನಟಿಸಲು
ಬೆನ್ ಕಿಂಗ್‌ಸ್ಲೆ ಅದೆಷ್ಟು ದಿನ ಅಭ್ಯಾ ಮಾಡಿದ್ದ
ಕುಡಿಯುವುದು ಬಿಟ್ಟಿದ್ದ ತಿನ್ನುವುದು ಬಿಟ್ಟಿದ್ದ ನಿನ್ನಂತೆ
ಸಾತ್ವಿಕ ಆಹಾರಿಯಾಗಿ ನೀನೆ ಆಗಿಬಿಟ್ಟಿದ್ದನಂತೆ

ಬೋಧಿ ಚಂದ್ರನ ದೊಂದಿ ಹಿಡಿದು
ನಡೆದೇ ನಡೆದೆ ನೀನೇನೋ ಹಿಡಿ ಉಪ್ಪಿಗಾಗಿ
ಅವನು ಟಾಟಾ ಕಂಪನಿಯ ಅಯೋಡೈಸ್ಡ್
ಉಪ್ಪು ತಿಂದು ಕೋಲಾ ಕುಡಿದು ತಾತನೇ ಆಗಿದ್ದ
ಅವನಂತೆ ಇನ್ನೂ ಎಷ್ಟೋಜನ ನಟಿಸಿದ್ದಾರೆ
ಭರತ ಮಾತೆಯ ಸುಪುತ್ರರು

ನಮಗೆ ಅದುಬೇಕು ಇದು ಬೇಕು ಇನ್ನಷ್ಟು ಮತ್ತಷ್ಟು
ಬೇಕೇಬೇಕು ಪ್ರಕೃತಿ ಕೊಟ್ಟದಷ್ಟೇ ಸಾಕೇ? ಅಸಂಖ್ಯ
ನಮ್ಮೀ ಬಕಾಸುರ ಹೊಟ್ಟೆಗೆ ವಿಲಾಸಿನಿಯರಲಂಕಾರಕ್ಕೆ
ಆಭರಣ ಉಡಿಗೆ ತೊಡಿಗೆಗೆ ಸ್ವದೇಶಿಯಷ್ಟೇ ಸಾಕೆ?
ತಕಲಿಯಲ್ಲಿ ಹತ್ತಿ ಎಳೆ ಎಳೆ ನೂಲು
ಶಾಂತೆ ಅಹಿಂಸೆಯ ಚರಕಸಂಹಿತೆ ಸೂತ್ರ
ಸರಳ ಜೀವನ ಮಾನವ ಪರ್ಯಾವರಣ
ಸಸ್ಯ ಶಾಮಲೆ ಜೀವಸಂಕುಲ ಅನುಸಂಧಾನದಲ್ಲಿ
ಆತ್ಮ ಶುದ್ಧಿಯ ಧ್ಯಾನ ನಿರತ ಸತ್ಯ ಶೋಧಕ ಬಾಪು
ಜೀವನದಿ ಬತ್ತಿದರೇನು? ಬೆಳ್ಳಂದೂರು ಕೆರೆ ನೊರೆ ಹರಿಸಿ
ಭೀಗನಗರಿ ಯೋಗನಗರಿಗಳಲ್ಲಿ ಜಾರುತ್ತಾ ಹಾರುತ್ತಾ
ನಡೆದಂತೆ ನಟಿಸುತ್ತಾ ಹೊರಟಿದ್ದೇವೆ ಚಂದ್ರನಲ್ಲಿಗೆ
ಬಾವುಟವ ಹಾರಿಸಿ ಸ್ವದೇಶೀ ಡಿಸ್ಕವರ್ ತೇರನೆಳೆಯಲು
ಪೈಪೋಟಿಯಲ್ಲಿ ಬಿಗ್‌ಬಾಸ್‌ಗಳಿಗೆ ಸಡ್ಡುಹೊಡೆದು
ಚರಕದ ಮುಂದೆ ಕುಳಿತು ಕಟ್ಟಿಸಿದ ಗುಹೆಯಲ್ಲಿ ಧ್ಯಾನ
ಭಂಗಿಯನ್ನು ವಾಹಿನಿಗಳಲ್ಲಿ ಬಿತ್ತರಿಸಿ
ನೆರಮನೆಯವರು ತತ್ತರಿಸುವಂತೆ
ಸ್ವದೇಶಿ ಕ್ಷಿಪಣೆ ಮಿಸ್ಸೈಲ್‌ಗಳ ಹಾರಿಸುತ್ತಾ
ಗಳಹುತ್ತಿರುವ ಟ್ವಿಟರ್ ಹಕ್ಕಿಗಳು

ಸೌಜನ್ಯ : ಚಿಂತನಶೀಲ ಸಮಾಜಮುಖಿ ಮಾಸ ಪತ್ರಿಕೆಯಿಂದ ಆಯ್ದುಕೊಳ್ಳಲಾಗಿದೆ.

# ಗಾಂಧಿ ಕೊಂದವರು

– ಡಾ. ಬೈರಮಂಗಲ ರಾಮೇಗೌಡ

ಗಾಂಧಿಗೆ ಗುಂಡು ಹೊಡೆದವರು
ಗಾಂಧಿಯನ್ನಷ್ಟೇ ಕೊಲ್ಲಲಿಲ್ಲ
ಭಾರತದ ಆತ್ಮವನ್ನೇ ಕೊಂದರು.
ಬಹು ಸಂಸ್ಕೃತಿಗಳ ಭಾವೈಕ್ಯಕ್ಕೆ
ಜಾತಿ ಮತಗಳ ಪರಿಗಣನೆಯಿಲ್ಲದ ಪ್ರೀತಿಗೆ
ಸಮರಸದಿ ಬೆರೆವ ಸಂಭ್ರಮಕ್ಕೆ
ಗೋರಿ ಕಟ್ಟಲು ನಾಂದಿಯಾಯಿತು ಗುಂಡು.
ಸತ್ತು ಎಪ್ಪತ್ತು ದಾಟಿದರೂ
ಗಾಂಧಿಯ ಆತ್ಮ ದೇಶದ ಉದ್ದಗಲಗಳಲ್ಲಿ
ಕಣ್ಣೀರು ಮಿಡಿಯುತ್ತ ಅಡ್ಡಾಡುತ್ತಿದೆ
ಮೂಕ ಪಕ್ಷಿಯ ಹಾಗೆ.
ದೇಶದ ಇತಿಹಾಸ ನೆಟ್ಟಗೆ ಓದದ
ಗಾಂಧಿ ಅಂತರಾತ್ಮದ ಮಿಡಿತ ತಿಳಿಯದ
ಪುರೋಹಿತಶಾಹಿ ಅನಿಷ್ಟಗಳ
ತಲೆ ಮೇಲೆ ಹೊರುವ ವ್ರತದ
ಗೋಡ್ಸೆ ಸಂತಾನ ಈಗ ಕಿರುಚುತ್ತಿದೆ
ಅರಚುತ್ತಿದೆ ದೊಡ್ಡ ಬಾಯಲ್ಲಿ
ದುರ್ಗಂಧ ಬೀರುತ್ತ,
ಭಾರತದ ತಂದೆ ಜನರ ಪ್ರೀತಿಯ ಮಹಾತ್ಮ
ದೇಶದ್ರೋಹದ ಅಪರಾಧ ಹೊತ್ತು
ಕಟಕಟೆಯಲ್ಲಿ ನಿಂತಿದ್ದಾನೆ
ತುಟಿಗಳಲ್ಲಿ ಮಾಸದ ಮಂದಹಾಸ ತುಳುಕಿಸುತ್ತ,

ಕೊಂದವನೇ ಮಹಾನ್ ದೇಶಭಕ್ತ
ಪರಮವೀರ ಹುತಾತ್ಮ ದೇವರೇ ಆಗಿ
ಮಂದಿರಗಳಲ್ಲಿ ಪೂಜೆಗೊಳ್ಳುವುದಷ್ಟೇ ಬಾಕಿ!
ದೇಶಪ್ರೇಮ ದೇಶದ್ರೋಹದ ನಡುವಿನ ಎಳೆ
ಅತ್ಯಂತ ಸೂಕ್ಷ್ಮವಾಗಿದೆ ಈಗ,
ಇದು ಭಾರತದ ಪರಿಶುದ್ಧ ಆತ್ಮಕ್ಕೆ
ತಗುಲಿರುವ ಹೊಸ ರೋಗ!
ಗಾಂಧೀವಾದಿಗಳೆಂದು ಪ್ರಚಂಡ ಭಾಷಣ ಜಡಿದು
ಹಾರ ತುರಾಯಿಗಳ ಸನ್ಮಾನ ಭಾರದಲಿ ಮುಳುಗಿದವರು
ಗಾಂಧಿ ಜಯಂತಿಯಂದು ಗರಿಗರಿ ಟೋಪಿ ಹಾಕಿ
ಶಾಲಾ ಮಕ್ಕಳು ಹಿಡಿದ ಫೋಟೋ ಹಿಂದೆ
ವರ್ಷದಲ್ಲೊಂದು ದಿನ
ರಘುಪತಿ ರಾಘವ ರಾಜಾರಾಂ ಭಜನೆ ಹಾಡಿದವರು
ಮೆರವಣಿಗೆ ಮುಂಚೂಣಿಯಲಿ
ನೂತನ ಭಂಗಿಯ ಫೋಟೋ ಕ್ಲಿಕ್ಕಿಸಿಕೊಂಡವರು
ತತ್ವಗಳಿಗೆ ತಿಲಾಂಜಲಿ ನೀಡಿ
ಪ್ರತಿಮಾ ಪೂಜಕರಾಗಿ
ಮಹಾತ್ಮ ಗಾಂಧೀಕೀ ಜೈ ಎಂದವರು
ಸಾಧು ಸಾಧ್ವೀ ವೇಷದ ಭಯೋತ್ಪಾದಕರು
ಗಾಂಧಿಗೆ ಗೋಡ್ಸೆ ಗುಂಡಿಕ್ಕಿದ ನರನಧಮತೆಯ
ಅಣಕು ಪ್ರದರ್ಶನ ಮಾಡಿ ಸಂಭ್ರಮಿಸಿದರೂ
ಪ್ರಶ್ನಿಸದೆ ಷಂಡ ಮೌನಕ್ಕೆ ಶರಣಾದವರು
ಗಾಂಧಿಯನ್ನು ತೆರೆಮರೆಗೆ ಸರಿಸಿದ್ದಾರೆ,
ಗಾಂಧಿ ತತ್ವಗಳ ಮೇಲೆ ಚಪ್ಪಡಿ ಎಳೆದಿದ್ದಾರೆ,
ಮತ್ತೆ ಮತ್ತೆ ಗಾಂಧಿಯನ್ನು
ಕೊಲ್ಲುತ್ತಲೇ ಇದ್ದಾರೆ!

# ಓ ಗಾಂಧಿ ತಾತ

– ಸುಜ್ಞಾನಪ್ರಿಯ (ಮ. ಸುರೇಶಬಾಬು)

ರಾಮರಾಜ್ಯ ಕನಸಕಟ್ಟಿ
ಸ್ವರಾಜ್ಯ ಪಡೆದ ಮಹಾತ್ಮ
ಸ್ವರಾಜ್ಯ ಪಡೆದ ಕೆಲದಿಸಕೆ
ಆದೇ ನೀ ಹುತಾತ್ಮ

ಅಖಂಡ ಭಾರತದ ಕನಸಾಯಿತು
ನಿನ್ನ ಕಣ್ಮುಂದೆಯೇ ಭೂಗತ
ತುಂಡಾದಳು ಭಾರತಾಂಬೆ
ಪಾಕ್, ಬಾಂಗ್ಲಾ, ಭಾರತ,
ಇಂದಿಗೂ ಶಾಂತವಿಲ್ಲ
ಕಾಶ್ಮೀರದ ಕಣಿವೆ
ಬೂದಿ ಮುಸುಕಿದ ಕೆಂಡ
ಪಂಜಾಬ್‌ದ ಬವಣೆ

ಕುಡಿಯಬೇಡಿ ಎಂದೆ ನೀ
ಸೇಂದಿಯನ್ನು ಅಂದು
ಸೇಂದಿ ತೊರೆದು ಬ್ರಾಂದಿ ಹಿಡಿದು
ಮಾತು ಉಳಿಸಿಕೊಂಡೆವು
ಪ್ರಾಣಿ ಹಿಂಸೆ ಮಹಾಪಾಪ
ಅಹಿಂಸೆಯನ್ನು ಸಾರಿದೆ
ಅಹಿಂಸೆ ಬಿಟ್ಟು ಹಿಂಸಾ ಮಾರ್ಗ
ಜಗವೇ ಇಂದು ಹಿಡಿದಿದೆ

ನಿನ್ನ ಮಾತು ಉಳಿಸುವಲ್ಲಿ
ನಾವೆಂಥಾ ಸಭ್ಯರು
ನಿನ್ನೆಲ್ಲಾ ಭೋಧನೆಯಲ್ಲಿ
ಸತ್ಯಾಗ್ರಹ ಹಿಡಿದಿಹೆವು
ಆಂಗ್ಲರನ್ನು ಹೊಡೆದಟ್ಟಿ
ನೀನಂದು ಬೀಗಿದೆ
ನೋಡಿಂದು ಸ್ವರಾಜ್ಯವು
ಎತ್ತ ಸಾಗಿದೆ.

ಕುರ್ಚಿಗಾಗಿ ಕಿರುಚಾಟ
ಸೀಟಿಗಾಗಿ ತಿವಿದಾಟ ಒಂದೆಡೆ
ತುತ್ತು ಕೂಳು ಸಿಗದ ಬಾಳು
ಅನ್ನಕ್ಕಾಗಿ ಪರದಾಟ ಮತ್ತೊಂದೆಡೆ
ಹಿಂತಿರುಗಿ ಒಮ್ಮೆ ನೋಡು
ನೀ ಪಡೆದ ಭಾರತ
ಸ್ಮೃತಿ ತಪ್ಪುವುದಂತೂ ಖಚಿತ
ಓ ಗಾಂಧಿ ತಾತ

# ಯಾರಿಗಾಗಿ ಈ ಸ್ವಾತಂತ್ರ್ಯ

– ವಿನುತ ಕೆ.ಪಿ.

ಪುಣ್ಯಾತ್ಮ ಗಾಂಧೀ, ಕರ್ಮಯೋಗಿ ಗಾಂಧೀ...
ನಮಗಾಗಿ ದೇಹ ಸವೆಸಿ, ಪ್ರಾಣ ತೆತ್ತ ಗಾಂಧೀ
ಅಹಿಂಸೆಯ ಸೂತ್ರ ಕಟ್ಟಿ, ಸ್ವಾತಂತ್ರ್ಯದ ತ್ರಿವರ್ಣ ಧ್ವಜವ
ಬಾನಂಗಳದಿ ಹಾರಿ ಬಿಟ್ಟ ಗಾಂಧೀ... ಪುಣ್ಯಾತ್ಮ ಗಾಂಧೀ...
ಯುವಕರ ಮನಮುಟ್ಟಿ ಬ್ರಿಟೀಷರೆದುರು ತೊಡೆ ತಟ್ಟಿ
ಭಾರತವ ಬಿಟ್ಟು ತೊಲಗಿಸಿದಿರಿ ನಮ್ಮ ಗಾಂಧೀ...
ಮಹಾತ್ಮ ಗಾಂಧೀ, ಕರ್ಮಯೋಗಿ ಗಾಂಧೀ...

ಅಂದು ಸೆರೆ ಇದ್ದವರಲ್ಲಿ ಬ್ರಿಟೀಷರ ಗುಲಾಮರಾಗಿದ್ದವರಲ್ಲಿ
ಭಯದ ಪೊರೆ ಕಳಚಿ ಧೈರ್ಯದ ಮನೆ ಕಟ್ಟಿದರು...
ಮಾಡಿದರೆಷ್ಟೋ ಉಪವಾಸಗಳು, ಸತ್ಯಾಗ್ರಹಗಳು...
ದೇಶದಾದ್ಯಂತ ನಡೆದಾಡಿದರು ಬರಿಗಾಲಲ್ಲಿ.
ತುಂಡುಬಟ್ಟೆ ಮೈಮೇಲೆ ತೊಟ್ಟು
ಸ್ವಾತಂತ್ರ್ಯಕ್ಕಾಗಿ ತಮ್ಮ ಉಸಿರು ಬರೆದಿಟ್ಟು
ಅಮರರಾದರು ಗಾಂಧೀ, ಕರ್ಮಯೋಗಿ ಗಾಂಧೀ...

ಅವರ ಪ್ರಯತ್ನಕ್ಕೆ ಸಿಕ್ಕಿತು ಫಲ 1947ರಲ್ಲಿ
ಹತ್ತಿಸಿದರು ಸ್ವಾತಂತ್ರ್ಯ ಜ್ಯೋತಿ ಇಡೀ ಭಾರತದಲ್ಲಿ
ಆದರಿಂದು...ಆದರಿಂದು... ನನ್ನದೊಂದು ಅನುಮಾನ...
ಯಾರಿಗಾಗಿ ಈ ಸ್ವಾತಂತ್ರ್ಯ...
ಹೆಣ್ಣಿಗೋ...ಗಂಡಿಗೋ...ದಬ್ಬಾಳಿಕೆಗೋ...ಶೋಷಣೆಗೋ...
ನ್ಯಾಯಕೋ...ಅನ್ಯಾಯಕೋ...ಧರ್ಮಕೋ... ಅಧರ್ಮಕೋ...
ಹೇಳಲು ಮರೆತಿರಾ ಗಾಂಧೀ...? ನೀವು ಕಾಣಬಯಸಿದ
ಆ ರಾಮರಾಜ್ಯ ಎಂದಾಗುವುದೋ... ಕಾಣೆ...
ಹುತಾತ್ಮ ಗಾಂಧೀ, ಕರ್ಮಯೋಗಿ ಗಾಂಧೀ...!

# ಪೊರಕೆಯ ಪ್ರತೀಕದಲ್ಲಿ ಗಾಂಧಿ ಬಿಂಬ

ಪೊರಕೆಯಿರುವುದು ಪರಿಸರವನ್ನು ಗುಡಿಸಲಿಕ್ಕೆ
ಮನಸಲ್ಲಿ ಕ್ಷಮಾಗುಣವನ್ನು ಬೆಳಸಲಿಕ್ಕೆ
ಗುಡಿಸಿಕೊಳ್ಳುತ್ತಿರು ನಿನ್ನ ಮನಸನ್ನು ಪ್ರತಿ ಗಳಿಗೆ
ಕ್ಷಮೆಯೆಂಬ ಪೊರಕೆ ಇರಲಿ ಸದಾ ಎದೆಯೊಳಗೆ

ಸಬರಮತಿ ಆಶ್ರಮದ ಸಮೀಪದ ಒಂದು ಆಶ್ರಮಕ್ಕೆ ಭೇಟಿ ನೀಡಿದ್ದೆ. ಆಶ್ರಮದವರ ಮುಖ್ಯ ಕಾರ್ಯವೇ ಗ್ರಾಮಗಳಲ್ಲಿ ನೈರ್ಮಲ್ಯ ಕಾರ್ಯ ಕೈಗೊಳ್ಳುವುದು. ಅವರ ಕೆಲಸಕ್ಕೆ ಸ್ಫೂರ್ತಿಯಾಗಿರುವುದು ಗಾಂಧಿ. ಅವರು ನನಗೆ ಒಂದು ಪೊರಕೆಯನ್ನು ಉಡುಗೊರೆಯಾಗಿ ನೀಡಿದರು. ಆ ಆಶ್ರಮದ ಆವರಣಕ್ಕೆ ನೀವು ಹೆಜ್ಜೆ ಇಟ್ಟಕೂಡಲೇ ಒಂದು ಪದ್ಯ ನಿಮ್ಮನ್ನು ಸ್ವಾಗತಿಸುತ್ತದೆ. ಈ ಸಾಲುಗಳು ಗಾಂಧಿ ಬಿಂಬವಾಗಿ ಇಂದಿಗೂ ನನ್ನೊಳಗೆ ಉಳಿದಿದೆ

– ಬಿಂದುಮಾಲಿನಿ ನಾರಾಯಣಸ್ವಾಮಿ

ಸೌಜನ್ಯ : ಸುಧ ಪುರವಣಿ – ಅಕ್ಟೋಬರ್ 2018

# ಗಜಲುಗಳು

– ಜಂಬಣ್ಣ ಅಮರಚಿಂತ

ವಿಚಾರಗಳನ್ನು ಎಬ್ಬಿಸುವುದು ನಿಜವಾದ ಜ್ಞಾನ
ಮನಗಳನ್ನು ಅರಳಿಸುವುದು ನಿಜವಾದ ತಾನ

ಮಕ್ಕಳೇನೋ ನೂರು ಕೋಟಿ ಎಷ್ಟಿದ್ದರೇನಯ್ಯಾ
ಅವನತಿಗೆ ಪಟ್ಟ ಕಟ್ಟಿ ದೇಶವಾಯ್ತು ಪತನ

ಏನೆಲ್ಲಾ ಪತನವಾದರೂ ಹೋಗಲಿಲ್ಲ ಗದ್ದುಗೆ ಧ್ಯಾನ
ರಾಜ್ಯಗಳು ನಾಶವಾದರೂ ಲಂಚಕ್ಕೆ ಮೇಲು ಸ್ಥಾನ

ಬದ್ಧ, ಏಸು, ಬಸವ, ಗಾಂಧಿ ಯಾರೂ ಮೇಲಿಂದ ಬರಲಿಲ್ಲ
ನೆಲದಿಂದ ಮೇಲೆದ್ದು ತಿದ್ದಿದರು ಜನಗಣಮನ

ಯಾರು ಹೊಗಳಿದರೇನು? ತೆಗಳಿದರೆ ಆಗುವುದೇನು?
ಸೃಷ್ಟಿಗೆ ದೃಷ್ಟಿಯಾಗುವೆವು ತೆರೆದು ಆಲೋಚನಾ – ಲೋಚನ

---

ಕಣ್ಣೀರು ಹರಿಸದಿರು ಮುತ್ತು ಚೆದುರಿ ಹೋಗ್ಯಾವು
ವೇದನೆ ಹರಿಸದಿರು ಮನಸು ಬೆದರಿ ಹೋಗ್ಯಾವು

ರೆಕ್ಕೆಗಳಿದ್ದರೆ ನಾವು ಆಕಾಶಕ್ಕೆ ಹಾರಬಹುದು
ಕತ್ತರಿಸಿದ ರೆಕ್ಕೆಯಿಂದ ಗರಿ ಹಾರಿ ಹೋಗ್ಯಾವು

ವೇದನೆ ಮಡುಗಟ್ಟಿದ ಮೋಡ, ಹನಿ ಹನಿ ಉದುರಿಸಿದಂತೆ
ಚಿಪ್ಪಿನಲಿ ಹನಿ ಹನಿ ಮುತ್ತಾಗಿ ತೂರಿ ಹೋಗ್ಯಾವು

ಗಾಂಧಿಯ ಸತ್ಯಾಗ್ರಹ ಮೃದು ಬೆಳ್ಳಿಯ ಬೀಗದ ಕೈ
ಉಕ್ಕಿನಂಥ ದಾಸ್ಯದ ಜೇಲಿನ ಬೀಗ ತೆರೆದಾವು

ಗಾಂಧಿ ಮ್ಯೂಜಿಯಮ್ಮಿನಲಿ ಗಾಂಧಿ ಕನ್ನಡಕ ಕಂದೆರೆದಿದೆ
ಕುರುಡು ಕಂಗಳಿಗೆ ಅದು ದೃಷ್ಟಿದಾನ ಮಾಡುತ್ತಿದೆ
ಮೇಜಿನ ಮೇಲೊಂದು ಸದಾ ಟಿಕಿಟಿಕಿಸುವ ಗಡಿಯಾರ
ಕಾಲದ ಹೃದಯ ಬಡಿತವಾಗಿ ಗಾಂಧಿ ಎದೆ ಮಿಡಿಯುತ್ತಿದೆ
ಬಿಳಿ ಹಾಳೆಯ ಹೃದಯ ಮೇಲೆ ಪೆನ್ನೊಂದು ಕೂತಿದೆ
ಬರೆಯಲಾರದ ಭಾರತದ ಕತೆ ಬರೆಯಲು ಕಾತರಿಸಿದೆ
ಅಹಿಂಸೆಯ ಊರುಗೋಲಾಗಿ ಗಾಂಧಿ ಕೋಲು ನಿಂತಿದೆ
ಬೆನ್ನು ಬಾಗಿದ ಜೀವಿಗಳಿಗೆ ಸೆಟೆದು ನಿಲ್ಲಲು ಕಲಿಸಿದೆ
ತಿರುಗುವ ಚರಕವೊಂದು ಜೀವನ ನೂಲು ತೆಗೆಯುತ್ತಿದೆ
ಕತ್ತಲೆ ಮೈಗಳಿಗೆ ಬೆಳಕಿನುಡುಪು ನೇಯುತ್ತಿದೆ
ಗಾಂಧಿ ಹೃದಯ ಹೊಕ್ಕ ಗೋಡ್ಸೆ ಗುಂಡಾಗಿದೆ ನಿಷ್ಪ್ರಯೋಜಕ
ಗಾಂಧಿಯನು ಕೊಲ್ಲಲು ಬಂದ ಸಾವು ತನಗೆ ತಾನೇ ಸತ್ತಿದೆ

---

ನೋಡಿರಬೇಕು ಯಾರೂ ನೋಡದಂತಿರಬೇಕು
ಮೇಲಿನ ಕಣ್ಣು ಮುಚ್ಚಿ, ಒಳಗಣ್ಣು ತೆರೆದಿರಬೇಕು
ಮಾತಡಬೇಕು, ಮಾತನಾಡದಂತಿರಬೇಕು
ಶಬ್ದದಲಿ, ನಿಶ್ಯಬ್ದದ ನಾಲಿಗೆ ಚಾಚಿರಬೇಕು
ಮುಳ್ಳಿನಲಿ ನಾವು ಹೂಗೊಂಚಲಾಗಿ ಅರಳಬೇಕು
ಮುಳ್ಳಲ್ಲಿ ಗಂಧ, ಹೂವಲ್ಲಿ ತಣಿವಿತ ಅನುಭವಿಸಬೇಕು
ಸೋತರೂ ನಾವು – ನೀವು, ಸೋಲದಂತಿರಬೇಕು
ಜೀವನ ಸಮರದಿ ಹೋರುವ ಕಲಿಗಳಾಗಬೇಕು
ನಾವು ಕನ್ನಡಿಯಲ್ಲಿ ನಿತ್ಯ ಬದುಕನು ನೋಡಬೇಕು
ಸತ್ತು ಸತ್ತು ನಾವು ಬದುಕುವುದನ್ನು ಕಲೆಯಬೇಕು
ಮಾನವನಾದರೆ ಸಾಕು, ಮಹಾತ್ಮನಾಗುವುದು ಯಾರಿಗೆ ಬೇಕು
ಇದ್ದ ನೆಲವನರಿತರೆ ಸಾಕು, ಇಲ್ಲದ ಸಗ್ಗ ಯಾರಿಗೆ ಬೇಕು

ಸೌಜನ್ಯ : ಜಂಬಣ್ಣ ಅಮರಚಿಂತ ಅವರ "ಮುಳ್ಳಿನ ಬಾಯಿಯಲ್ಲಿ ಹೂ ನಾಲಿಗೆ"
ಗಜಲುಗಳ ಸಂಕಲನದಿಂದ ಆಯ್ದುಕೊಳ್ಳಲಾಗಿದೆ

# ಗಾಂಧೀಜಿ

– ಪ್ರೊ. ಲೀಲಾ ವಾಸುದೇವ್

ನೀನೊಂದು ನಕ್ಷತ್ರ ಮರೆಯಾದೆ
ನಿನ್ನ ಹೆಜ್ಜೆಯ ಗುರುತು ಮಾಸುತಿದೆ
ದನಿಯೆತ್ತಿ ಇತ್ತೆ ಭರವಸೆ ಜಗಕೆಲ್ಲ
ಬೇಕು ನಿನ್ನಂಥ ಶಿಲ್ಪಿ ಜಗಕೆಲ್ಲ

ಅಭಿಲಾಷೆ ಅರಳಿದರು ಹಣ್ಣಾಗುತ್ತಿಲ್ಲ
ಅರಿತರು ನಿನ್ನಂತರಂಗ ಸುಗ್ಗಿಯಾಗುತಿಲ್ಲ
ನೀ ನಿಟ್ಟ ಹೆಜ್ಜೆಯಲಿ ಬಗೆಬಗೆಯ ಪಯಣಿಗರು
ಬೆಂಬಲಿಗರ ಸ್ಫೂರ್ತಿ ಮುಟ್ಟಲಿಲ್ಲ ಹಿಮಾಲಯ

ನೀನೊಂದು ಸತ್ಯಾಗ್ರಹಕೆ ಹಾಡಿದೆ ನಾಂದಿ
ಒಂದೊಂದು ಮೆಟ್ಟಿಲು ಒಂದೊಂದು ಸ್ವರ
ಪ್ರಸ್ತುತ ಪ್ರಜೆಗಳಲಿ ತಿಳಿದಿಹೆವೆಂಬ ಜಂಬ
ಸಾಮಾನ್ಯರ ಕೊರಳಿಗೆ ತಪ್ಪುಗಳ ಹಾರ

ಮತ್ತೆ ಹುಟ್ಟಿ ಬಾ ಗಾಂಧಿ
ಉದ್ಧರಿಸು ನಿನ್ನ ಭಾರತೀಯರ
ಮುಂದುವರಿಸು ನಿಂತ ಪಯಣ
ವಂದಿಸುತ ಭಾರತ ಮಾತೆಯ

# ಗಾಂಧಿ

– ಡಾ ಸುರೇಶ ಸಗರದ

ಸತ್ಯದ ಸಂಘ ಮಾಡುವ ಬಯಕೆ ಬಂದಿತ್ತು
ಬಹುಜನರ ಜೊತೆ ಸಾಗುವ ಕನಸು ತುಂಬಿತ್ತು

ಬಿಳಿಯನ ಕಪ್ಪು ಬೂಟು ಎದೆಗೆ ತಾಕಿತ್ತು
ಕರಿಯತನವ ಕರಗಿಸುವ ಕಸುವ ತಂದಿತ್ತು

ದೇಶೀಯ ಅಂಧಶ್ರದ್ಧೆಯ ಗುಂಡು ತಾಗಿತ್ತು
ಕೊಲ್ಲುವವರ ಕಂಡು ಮರುಕ ಬಂದಿತ್ತು

ನೂಲ ನೇಯುವ ಚರಕ ಹೊತ್ತು ಬಂದಿತ್ತು
ಬರಿ ಮೈಯಲ್ಲೂ ಚಳುವಳಿ ಸಾಗರದತ್ತ ನಡೆದಿತ್ತು

ಅರ್ಧ ರಾತ್ರಿಯಲಿ ವಿಭಜನೆಯ ಬಳುವಳಿಯಾಗಿತ್ತು
ಹೋಗುವಾಗಲೂ ಜೀವ ಹೇ ರಾಮ್ ಎಂದಿತ್ತು

# ಮತ್ತೆ ಮತ್ತೆ ಗಾಂಧಿ ಕವನ ಸಂಕಲನದಿಂದ ಆಯ್ದುಕೊಳ್ಳಲಾದ ಕವನಗಳು

(ಸಂಪಾದಕರು : ಹೆಚ್.ಎಂ. ಗೀತ
ಪ್ರಕಾಶಕರು : ಕನ್ನಡ ಸಂಘ
ಶೇಷಾದ್ರಿಪುರಂ ಕಾಲೇಜು, ಬೆಂಗಳೂರು)

ಶೇಷಾದ್ರಿಪುರಂ ಕಾಲೇಜು, ಕನ್ನಡ ಸಂಘ ನಡೆಸಿದ ಅಂತರ ಕಾಲೇಜು ಸ್ಪರ್ಧೆಯ ಕವನಗಳು

# ಬಾ ಬಾಪೂ ಮನೆ-ಮನಗಳಲ್ಲಿ

- ಆಶಾಲಿಂಗೇಶ್ ಕುಮಾರ್

ಬಾ ಬಾಪೂ ಮನೆ-ಮನಗಳಲ್ಲಿ
ತೋರುನೀ ನಡೆದ ಹಾದಿಯನು
ದೇಶದ ಉಳಿವಿಗೆ ನೀ ಇತ್ತ ಕೊಡುಗೆ
ಮರೆಯಾಲಾದೀತೆ ನಾವು
ನೆತ್ತರು ಹರಿಸಲಿಲ್ಲ, ದಬ್ಬಾಳಿಕೆ ನಡೆಸಲಿಲ್ಲ,
ಸಾಗಿದೆ ನೀ ಜಪಿಸುತ್ತಾ ಶಾಂತಿ ಮಂತ್ರವನು

ನೀಡಿದಿರಿ ಕರೆಯನು ಅಸಹಕಾರಕ್ಕೆ
ಆಗ್ರಹಿಸಿ ನಡೆಸಿದಿರಿ ಸತ್ಯಾಗ್ರಹವನು
ಮಾಡಿದಿರಿ ಯಾತ್ರೆಯನು ದಂಡಿಯವರೆಗೂ ದೇಶವೇ
ಹಿಂಬಾಲಿಸಿತ್ತು ನಿಮ್ಮ ಹಾದಿಯನು

ಪ್ರೀತಿಗೆ ನಾವು ಬಗ್ಗುವೆವು
ದಬ್ಬಾಳಿಕೆಗೆ ಸಿಡಿದೇಳುವೆವು
ಎನ್ನುವ ನೀತಿ ಪಾಠವನು
ಕಲಿಸಿದಿರಿ ಆಂಗ್ಲರಿಗೆ

ನೀವುಕಂಡ ಕನಸನು ಅಂದು
ಮಾಡುತ್ತಿರುವೆವು ನಾವು ನನಸನಿಂದು
ಆದರೂ ನೀವಿಲ್ಲದ ದೇಶದಲಿ
ಕಾಣುತ್ತಿದೆ ಕ್ರೌರ್ಯ, ದ್ವೇಶ, ಅಸೂಯೆ,
ಬಾ ಬಾಪೂ, ಮತ್ತೆ ಹುಟ್ಟಿ ಬಾ
ಶಾಂತಿಯ ಮನೆ-ಮನಗಳಲ್ಲಿ ನೆಲೆಗೊಳಿಸಲು

# ಗಾಂಧಿ ಎಂಬ ಮಾಂತ್ರಿಕ

– ಡಾ. ಎಸ್. ರಾಮಲಿಂಗೇಶ್ವರ (ಸಿಸಿರಾ)

ಬಟ್ಟೆಗೆಟ್ಟು ಬೀದಿಗಿ ಬಿದ್ದ ನಮ್ಮ ಬದುಕನ್ನೊಮ್ಮೆ
ನೀ ಕಾಣಬೇಕು ಗಾಂಧಿ ನೀನೊಬ್ಬ ಮಾಂತ್ರಿಕ
ಸತ್ಯ ಶಾಂತಿ ಅಹಿಂಸೆ ಸಹನೆ–ಸಹಬಾಳ್ವೆಯಿಂದಲಿ
ಜಗವನ್ನೆಲ್ಲ ಸುತ್ತಿ ಬಂದವನು
ಜಾತ್ಯಾತೀತ ಶಕ್ತಿ ತಾನಾದವನು!

ಭಾರತೀಯರನು ದಾಸ್ಯದಿಂದ ಬಿಡಿಸಿದ
ಮೋಹನ ದಾಸನು ನೀನು ಕರ್ಮ ಸಿದ್ಧಾಂತವ ಬಗೆದವನು
ಪೋರಬಂದರ ಪುತಳಿ ಬಾಯಿಯ ಸುಪುತ್ರ
ಭಾರತೀಯ ಶ್ರೀ ಸಾಮಾನ್ಯರ ಮಹಾತ್ಮ !

ಜಗದ ಅಣು ತೃಣ ಕಾಷ್ಠ
ನೋವುಗಳಿಗೆ ದನಿಯಾದೆ ತಾನು
ನಮ್ಮ ಬಾಳ ಮಾರ್ಗ ದೀವಿಗೆಯಾದೆ ಗಾಂಧಿ
ಭಾರತೀಯರ ಧಮನಿಗಳಲಿ
ನಿನ್ನ ಹೆಸರನು ಅಚ್ಚೊತ್ತಿ ಹೋದೆ
ನೀನೊಬ್ಬ ಮಹಾ ಮಾಂತ್ರಿಕ ಗಾಂಧಿ !

ಮದ್ದು ಗುಂಡು ಬಂದೂಕುಗಳೆಲ್ಲ
ಕತ್ತಿ ಗುರಾಣಿಗಳೆಲ್ಲ,
ದ್ವೇಷ ಅಸೂಯೆಗಳೆಲ್ಲ
ಕಟ್ಟಿಕೊಂಡು ಬಂದವರೆಲ್ಲ
ಹೇಳ ಹೆಸರಿಲ್ಲದಂತಾಗಿ

ಮಣ್ಣು ಮುಖವ ಮಾಡಿದವು
ತುಕ್ಕಿಡಿದು ಧೂಳಿಡಿದು ಗಾಳಿಯಲ್ಲಿ ಬೆಂಕಿ ಚಂಡುಗಳಾದುವು
ಇನ್ನ್ಯಾವ ಶಕ್ತಿಯೂ ತಡೆಯಲಿಲ್ಲ ನಿನ್ನ
ತಡೆಯ ಬಂದವರು
ನಿನ್ನ ಪ್ರೀತಿ ತ್ಯಾಗ ಬಲಿದಾನಗಳೆದುರು ಶರಣಾಗಿ ಹೋದರು!

ಜಾತಿ ಮತ ಧರ್ಮ ದೇವರ
ಹೆಸರಲಿ ದೇಶ ಮಾರುತಿಹರು
ಮಾತಿನ ಭಾಷಣಗಳು ಕಿವುಡು ಮಾಡುತ್ತಿವೆ
ನೀನಿದ್ದಾಗ ಇದ್ದವುಗಳೆಲ್ಲ ಒಂದೂ ಬದಲಾಗಲಿಲ್ಲ
ದೊಡ್ಡ ದೊಡ್ಡ ಸೌಧಗಳು
ಗಗನದೆತ್ತರ ನಿಂತಿಹವು
ಅಭಿವೃದ್ಧಿಯೆಂಬ ಮರೀಚಿಕೆಯಲಿ
ಭಯದ ವಾತಾವರಣದಲಿ
ಸ್ವರ್ಗ ಕಾಣಿಸುತ್ತಿಹರು ಗಾಂಧಿ !

ಶ್ರೀ ಸಾಮಾನ್ಯನ ಅಳಲು
ಅರಣ್ಯವಿಲ್ಲದ ರೋದನವಾಗಿದೆ
ಉಳ್ಳವರೇ ಎಲ್ಲಾ
ರಾಜಕಾರಣ ಮಾಡಿಹರು
ಶಾಸ್ತ್ರವೆಂಬ ಬೂಟಾಟಿಕೆ ಗಟ್ಟಿಯಾಗಿದೆ
ಭೂಮಿ ಕಡಲು ಮುಗಿಲ
ಒಂದು ಮಾಡಿದ್ದಾರೆ
ಯಾರಿಗೂ ಪಂಚೇಂದ್ರಿಯಗಳು
ಕಾಣದಾಗಿವೆ ಗಾಂಧಿ
ನಿನ್ನ ತಾಳ್ಮೆ ನಮಗಿಲ್ಲವಾಗಿದೆ
ಗಾಂಧಿ ನಿನೊಬ್ಬ ಮಾಂತ್ರಿಕ ಮಾಹಾ ಮಾಂತ್ರಿಕ...

# ಗಾಂಧಿ ನಮ್ಮೊಳಗೆ

– ಗೋಪಿ ಎಸ್. ಎಂ.

ಬರಲೇ ಇಲ್ಲ ಇನ್ನೂ, ಗಾಂಧೀ ನಮ್ಮೊಳಗೆ;
ವೈಭವದ ಜೀವನಕೆ ಬೆನ್ನುಮಾಡಿ
ಸರಳ ಜೀವನದ ದೀಕ್ಷೆ ತೊಟ್ಟೆ
ಅರ್ಪಿಸಿಕೊಂಡೆ ಸತ್ಯಶೋಧಕೆ ನಿನ್ನನೆ,
ಸ್ವಾರ್ಥವಿರದ ಶಾಂತಸಿಂಧು, ಮಾನವತೆಯ ಮೇರುಗಿರಿ.
ಬಿಟ್ಟುಕೊಳ್ಳಲೇ ಇಲ್ಲ ಇನ್ನೂ, ನಿನ್ನ ನಮ್ಮೊಳಗೆ...

ಸ್ಪಂದಿಸಲು ಬಡವರ ಕಷ್ಟಕೆ,
ಮಾಡಿದೆ ಮನೆಯನ್ನೇ ಆಶ್ರಮವ.
ಸ್ವಾವಲಂಬನೆಯ ನೂಲು ನೇಯ್ದು,
ಹರಿದ ಮನಸ್ಸುಗಳ ಕೂಡಿಸಿದೆ.
ಶಾಂತಿಗೀತೆ ಹಾಡಿ, ಐಕ್ಯಮಂತ್ರ ಜಪಿಸಿದೆ.
ನಿನ್ನಂತಹ ಮಹಿಮನ
ಅಪ್ಪಿಕೊಳ್ಳಲೇ ಇಲ್ಲಇನ್ನೂ ನಮ್ಮೊಳಗೇ...

ಹಿಂಸೆಯ ಶಸ್ತ್ರವಿಡಿಯದೆ
ಅಹಿಂಸೆಯ ತತ್ವ ಪಾಲಿಸಿ,
ಸರ್ವೋದಯ ಸಮತೆಗಾಗಿ ನೀ ದುಡಿದೆ.
ನಿನ್ನಂತಹ ಮಹಾತ್ಮನ, ಅರೆಬೆತ್ತಲೆ ಫಕೀರನ
ಒಪ್ಪಿಕೊಳ್ಳಲೇ ಇಲ್ಲ ಇನ್ನೂ ನಮ್ಮೊಳಗೇ...

ಸರಳತೆಯ ಸಾಕಾರ ಮೂರ್ತಿ,
ಅಹಿಂಸೆಯ ಬೋಧಿಸಿದ ಬುದ್ಧಾನುಯಾಯಿ.
ವರ್ಣಭೇದದ ಉಕ್ಕಿನ ಕೋಟೆಯ ಭೇದಿಸಿದ ವಜ್ರದೇಹಿ.
ಜಗದ ನೋವಿನಕೂಗಿಗೆ ಕಿವಿಗೊಟ್ಟ ದೀನಬಂಧು
ದಕ್ಕಿಸಿಕೊಳ್ಳಲೇ ಇಲ್ಲ ನಿನ್ನ, ಇನ್ನೂ ನಮ್ಮೊಳಗೆ...

ನಿನ್ನ ತತ್ವಾದರ್ಶಗಳ ಗಾಳಿಗೆ ತೂರಿ,
ನಿನ್ನಂತೆ ಬದುಕಲಾಗದ ನಾವು,
ನಿನ್ನ ಪಟದೆದುರು ನಮಿಸಿದಷ್ಟೇ ಸಾಧನೆ.
ಓ.. ನನ್ನ ಗಾಂಧಿ, ಇನ್ನಾದರೂ
ಬರಮಾಡಿಕೊಳ್ಳಬೇಕಿದೆ ನಿನ್ನ ನಮ್ಮೊಳಗೆ...

# ಮುಖವಾಡ

– ಗೋವಿಂದಯ್ಯ ಹೆಚ್. ದ್ವಾರನಕುಂಟೆ

ಮಲೆತ ನೀರು ಬೆಳೆದ ಜಂಡು
ಕಪಟ, ಮೋಸ, ಸೋಗುಗಳ
ಮುಖವಾಡ
ಬಂತು ಅಕ್ಟೋಬರ್ ಎರಡು
ಅದೇ ಟೋಪಿ ಅದೇ ವಸ್ತ್ರ ಊರುಗೋಲು
ನೋಡೋರಿಗೆ ಗಾಂಧಿ
ತತ್ವ ಸಿದ್ಧಾಂತಗಳ ಸುರಿಮಳೆ
ಸಾರುವುದು ಸರ್ವೋದಯ ಮಂತ್ರ
ಆಡುವುದು ಮೂರೆಲೆಯ ಆಟ
ಸಿಕ್ಕಿದ್ದ ದೋಚುವ
ಹಗಲು ವೇಷಗಳು
ಅದೇ ಟೋಪಿ ಅದೇ ವಸ್ತ್ರ ಊರುಗೋಲು
ನೋಡೋರಿಗೆ ಗಾಂಧಿ
ಎಲ್ಲಿ ನೋಡಿದರಲ್ಲಿ ದ್ವೇಷ ಅಸೂಯೆ
ಮತಗಳ ಮೂಟೆಯಲ್ಲಿ ಕೋಟೆ ಕಟ್ಟಿ
ಖಾದಿ, ಕಾವಿಗಳ ದರ್ಬಾರು
ಧರ್ಮದ ಹೆಸರಲ್ಲಿ ದೇಹ ದೇಶಗಳ ಸ್ಫೋಟ,
ಬಾಂಬುಗಳ ಓಡಾಟ
ಭೂತಗಳ ಕಾಟ
ರಾಜಕೀಯದ ಅಮಲು
ನೆತ್ತಿಗೇರಿದ ತೆವಲು
ಕತ್ತಿಗಳ ಸೆಳೆತ ನೆತ್ತಿಗಳ ಹೊಡೆತ
ರಕ್ತ ಮಾಂಸಗಳ ನರಳಾಟ

ಕಡೆಗೊಮ್ಮೆ ಗೋರಿದೇವರ ಪೂಜೆ
ಬಂತು ಅಕ್ಟೋಬರ್ ಎರಡು
ಕುರ್ಚಿಗಳ ಕಾದಾಟ
ಮಂದಿರ ಮಸೀದಿಗಳ ಹೊಡೆದಾಟ
ಮುಸುಕುಗಳ ಪರದಾಟ

ಅವತರಿಸು ಬಾ ಬೆಳಕೆ
ಮಡುಗಟ್ಟಿ ಕಲುಶಿತಗೊಂಡ
ಹೊಳೆಯ ಶುದ್ಧಗೊಳಿಸು
ನೋವುಂಡ ಜಗಕೆ
ಸಾರು ಶಾಂತಿ ಮಂತ್ರ
ಹರಸು ಬಾ ಹಳೆಯ
ನಿತ್ಯ ನೂತನ ಬದುಕ

# ಗಾಂಧೀಗಿರಿಯ ಈ ದಿನಗಳಲ್ಲಿ

– ಡಾ. ಸತ್ಯಮಂಗಲ ಮಹಾದೇವ

ನೀನು ನಂಬಿದ ನಂಬಿಕೆಗಳು
ನಿನ್ನ ಎದೆ ಸೀಳಿದಾಗ
'ಹೇ ರಾಮ' ಹೊರಬಂದ
ಹುಸಿ ಪ್ರಚಾರ ಎತ್ತು
ಉಸಿರು ನಿಂತಿದೆಯೆಂದು
ಆದರೆ ಅಂಗೈನ ನೋಟಿನಲ್ಲಿ
ನೀನು ಉಸಿರಾಡುತ್ತಿದ್ದೆ

ಮನೆಯ ಮುಂದಿನ ಗಿಡದಲ್ಲಿ
ಮಳೆ ಬಂದು ಒದ್ದೆಯಾಗಿತ್ತು
ರೂಪಾಯಿ ನೋಟು
ಬೆರಳುಗಳಲ್ಲಿ ಹಿಡಿದೆ
ಅಂಗಿಯ ಜೇಬಿಗೆ ಇರಿಸಿದೆ
ನೀನು ನನ್ನ ಹೃದಯ ಸೇರಿಕೊಂಡೆ

ಬಾಯಾರಿದಾಗ, ಹೊಟ್ಟೆ ಹಸಿದಾಗ,
ಆಸ್ಪತ್ರೆಯಲಿ ಒದ್ದಾಡುವಾಗ
ದೇಶಪ್ರೇಮದ ಬಾವುಟದ ಖರ್ಚಿಗೂ
ಅಂತಿಮ ಯಾತ್ರೆಯ ತುರ್ತಿಗೂ
ವಿನಿಮಯ ಮಾಡಿದ ಆ ನೋಟಿನ ನಗು
ಆನಂದವಾಗಿ ಉಳಿದಿದೆ
ಖರ್ಚುಮಾಡಿದರೂ ಖಾಲಿಯಾಗದೇ.

ಈ ನೂರೈವತ್ತು ವಸಂತಗಳಲ್ಲಿ
ಚಿಗುರುತ್ತಲೇ ಇರುವ ಕನಸು
ಬಡಕಲು ದೇಹದ ಆ ಮಿಂಚುನಗೆ
ನಗು ಮುಗಿಯಲೇಯಿಲ್ಲ.

ನಿನ್ನೆಸರಿನಲಿ ಗದ್ದುಗೆ ಏರಿದವರ ನೋಡಿ
ನಿನ್ನ ನಗುವ ಮತ್ತೆ ಅವರು ಮುಚ್ಚಿಟ್ಟುಕೊಳ್ಳುವಾಗ
ನಾನೂ ನಗಬೇಕು ಎನಿಸುತ್ತದೆ.
ಇವರೆಲ್ಲರ ಅಸಹಾಯಕತೆಯ ಕಂಡು
ಗಾಂಧೀಗಿರಿಯ ಈ ದಿನಗಳಲಿ

# ನಾ ಕಂಡ ಗಾಂಧಿ

– ಶಶಿಕಲಾ. ಎನ್

ಕೈಯಲ್ಲೊಂದು ಕೋಲ ಹಿಡಿದು
ಅರ್ಧ ಅಂಗಿ ತೊಟ್ಟು, ಕನ್ನಡಕ ಮೂಗಿಗೇರಿಸಿ
ಹೊರಟಿಹನು ನೋಡಿ ದೇಶ ರಕ್ಷಣೆಗೆ
ಅದುವೆ ನಮ್ಮ ಗಾಂಧಿಯು...

ಸತ್ಯ, ತ್ಯಾಗ, ಅಹಿಂಸೆ ಮಂತ್ರ ಜಪಿಸಿ,
ಶಾಂತಿ, ಸಹನೆ, ತಾಳ್ಮೆ, ಸಹಬಾಳ್ವೆಯೇ
ಜೀವನ ಎಂದು ಬದುಕು ಕಳೆದ ಮಹನೀಯನು.
ನನ್ನ ದೇಶ, ನನ್ನ ಜನ, ನನ್ನ ಜನರೆ ನನ್ನ ಪ್ರಾಣ
ಎಂದು ಪ್ರಾಣವೇ ಸಮರ್ಪಿಸಿದಾತನು ದಾಸ್ಯದಿಂದ ಮುಕ್ತಗೊಳಿಸಿ
ಸ್ವಾತಂತ್ರ್ಯ ನಾಡಿಗೆ ತಂದು ಕೊಟ್ಟ ಕೀರ್ತಿ ನಿನ್ನದು.

ನೀನು ಕಲಿಸಿಕೊಟ್ಟ ಪಾಠ ಒಂದೇ ಎರಡೇ
ಭರತ ಖಂಡವೆಲ್ಲ ಒಂದೇ ಎಂದು ಜಗತ್ತಿಗೇ ಸಾರಿದೆ.
ಜಾತಿ ಮತದ ಗೋಡೆ ಕುಸಿಯುವಂತೆ ಮಾಡಿ
ಭಾಷೆಗೊಂದು ದಾರಿ ತೋರಿದೆ.

ಕುಟಿಲ ರಾಜಕೀಯದಲಿ ನೇರವಾಯಿತು ನಿನ್ನ ನಡೆ–ನುಡಿ
ಹಿಂಸೆ ಮುಖದಲ್ಲಿನ ಕ್ರೌರ್ಯ ಉಡುಗಿ ಅಹಿಂಸೆ ಬಲದಲಿ ಮೆರೆದೆ.
ಸತ್ಯದ ಕಡೆಗೆ ಮುಖಮಾಡಿ ನಿತ್ಯ ಬದುಕಲಿ ಹೊಸತು ಕಂಡೆ.

ಬಡವರಲ್ಲಿ ಬಡವನಾಗಿ, ದೇಹವನು ದೇಶಕಾಗಿ ಮೀಸಲಿಟ್ಟೆ
ಹೆಂಡ ಕುಡಿಯಬೇಡಿರೆಂದು ಕೈಯ ಮುಗಿದೆ
ನಮ್ಮ ಬಟ್ಟೆ ನಮ್ಮ ನಡತೆ ಮಾನ್ಯವೆಂದು ತಿಳಿಸಿಕೊಟ್ಟು
ಸ್ವಾತಂತ್ರ್ಯದ ಮಂತ್ರ ಜಪಿಸಿ, ಅದರ ಮಾರ್ಗದಲ್ಲಿಯೇ ನಡೆದೆ.

ಸರಳ ಬದುಕು ತನ್ನದೆಂದು ಪಾದಯಾತ್ರೆ ಮಾಡಿದೆ...
ಜೈಲುವಾಸ ಅನುಭವಿಸಿ
ಶಾಂತಿಯಿಂದಲೇ ಜನರ ಗೆದ್ದೆ.
ನೀನೇ ನಮಗೆ ತಂದೆ
ಆದ್ದರಿಂದಲೇ ಮಹಾತ್ಮನೆಂದು ಕರೆಯುವರು ಜನ ನಿನ್ನನು.

2

ಹೊಸಯುಗವು ಹೊಸ ಜಗವು ಎಲ್ಲೆಲ್ಲೂ ಹೊಸತನ
ಅಂದು ನೀವು ಹೇಳಿದಿರಿ ಯಂತ್ರ, ಯಂತ್ರ
ಎಂಬ ಭ್ರಾಂತಿಯನು ಕಳೆಯಿರೆಂದು.
ಇಂದು ಅದರ ಅರಿವಾಗಿದೆ ನಮಗೆಲ್ಲರಿಗೂ
ಜಗವು ನಾನಾ ಆಗು-ಹೋಗುಗಳನು ಕಂಡಿದೆ.
ಇಂದು ಮತ್ತೊಮ್ಮೆ ನಿನ್ನದೇ ವಿಚಾರಗಳಿಗೆ
ಮರಳಬೇಕಾಗಿದೆ... ಇಲ್ಲದಿದ್ದರೆ ನಮಗೆಲ್ಲರಿಗೂ ಕಾದಿದೆ...
ಇತ್ತ ದನಕರುಗಳಿಗೆ ನೀರಿಲ್ಲ, ಅತ್ತ ಜನರಿಗೆ ನಿಲ್ಲಲು ನೆಲೆಯಿಲ್ಲ,
ಗಂಜಿಗೂ ಗತಿಯಿಲ್ಲದ ಪರಿಸ್ಥಿತಿಯು ನಿರ್ಮಾಣವಾಗಿದೆ.
ಯಂತ್ರದ ಅವಾಂತರವು ಹಾಳುಮಾಡಿದೆ ನಮ್ಮ ಪ್ರಕೃತಿಯನ್ನ,
ಇದನು ತಿಳಿಯದ ನಾವು ನಾಶದ
ಅಂಚಿನತ್ತ ಸಾಗುತ್ತಿದ್ದೇವೆ ಎಂದು ಮರೆಯದಿರೋಣ

ಇನ್ನಾದರೂ ಇದನು ತಿಳಿದು ಕರಕುಶಲಕಲೆಗೆ
ಬೆಲೆ ಕೊಡೋಣ ಮತ್ತೊಮ್ಮೆ ಮರಳೋಣ
ದೇಸಿಯತೆಗೆ ಗ್ರಾಮಜೀವನ ಅವಲಂಬಿಸೋಣ
ಬದುಕು ಹಸನುಗೊಳಿಸಿಕೊಳ್ಳೋಣ.

# ಜಾತಿ ಕೊಳೆಯ ತೊಳೆಯಲೆಂದೆ

– ಪ್ರೊ. ರೇಣುಕಮ್ಮ. ಜಿ

ಜಾತಿ ಕೊಳೆಯ ತೊಳೆಯಲೆಂದೆ
ಜನರ ಬಾಳು ಬೆಳಗಲೆಂದೆ
ವಾಮನನಾಗಿ ಜಗಕೆ ಬಂದೆ
ವಿಕ್ರಮನಾಗಿ ಬೆಳೆದು ನಿಂದೆ
ಜನರ ಹೃದಯವಾಳಿದೆ

ಸ್ವಾರ್ಥ ಮೀರಿ ಜಗದ ಇರುಳ ಕಳೆಯಲೆಂದೆ
ದಿಟ್ಟ ಹೆಜ್ಜೆ ಇಟ್ಟು ಜಗದಿ
ಭುವಿಯ ಕಸವ ಹಸನುಗೊಳಿಸಿ
ಭಾರತೀಯರೊಂದೆ ಎಂಬ ಬೀಜಬಿತ್ತಿ
ಬೆಳೆಯ ಕಳೆಯ ಕೀಳಲೆಂದೆ
ಜನರ ಹಿತಕೆ ನಿನ್ನ ಬಾಳ ಸವೆಸಿದೆ

ಕೂಗಿ ಕೊಲುವ ಕತೆಗೆ ಅಂತ್ಯ ತಂದೆ
ಮುಗುಳು ನಕ್ಕು ಶಾಂತಿ ಮಂತ್ರ ಜಪಿಸಿದೆ
ಯುಗಯುಗದ ದಾಸ್ಯ ತೊಡೆದು ತಂದೆ
ಎಂಥ ಬಿಡುಗಡೆ
ಭುವಿಗೆ ಬಂದ ದೇವನೆಂದು
ಇಳೆಯು ಹಾಡಿ ಹೊಗಳಲು
ಬಂದಿತಂದು ಜನಕೆ ಅಳಿವು
ಶಾಂತಿಪ್ರಿಯನ ಆತ್ಮ ಹಿಂಸೆಯಲೆ
ಕೊನೆಗೊಂಡಿತು...

# ಓ ಬಾಪು ನೀ ನಮಗಾಗಿ

- ವಾಣಿ. ಕೆ

ಓ ಬಾಪು ನೀ ನಮಗಾಗಿ
ಬರಬೇಕಿದೆ ನಮ್ಮ ಜೊತೆಯಾಗಿ
ಸಾಗುತಿದೆ ಸುಳ್ಳಿನ ಕಂತೆ
ನೀ ಅದನು ನಿಲ್ಲಿಸಬೇಕೆಂತೆ

ಊರುಗೋಲಲಿ ಖಾದಿವಸ್ತ್ರದಿ
ನಡೆದು ಬಂತು ಸತ್ಯಾಗ್ರಹ
ಆ ಹಿಮಾಲಯ ಬಾಗಿ ನಿಂತಿದೆ
ನೋಡಿ ಇವರ ಸಾಹಸ

ಎಂದು ಬಿತ್ತಿದ ಆಶಾಕಿರಣ
ಅವರ ಮಿಂಚಿನ ಕಣ್ಣಲಿ
ನರ ನರದಲ್ಲೂ ಉಕ್ಕಿ ಹರಿದಿದೆ
ಸ್ವಾತಂತ್ರ್ಯ ದೀಕ್ಷಾ ಚಳುವಳಿ
ಸತ್ಯಮಾರ್ಗದಿ ನಡದು ಬಂದ ಈ ಶಿಕ್ಷಕ
ಶಾಂತಿ ಮಂತ್ರವ ಭೋದಿಸಿ
ನಿಂತ ಮಹಾನ್ ನಾಯಕ
ಹಿಂಸಾಮಾರ್ಗದಿ ನಡೆಯುವ
ಜೀವನ ನಮಗೆ ಸಾಕಾಗಿದೆ ಸತ್ಯ ಮಾರ್ಗದಿ
ನಡೆಯುವ ಜೀವನ ನಮಗೆ ಬೇಕಾಗಿದೆ

ಬಿತ್ತ ಬೇಕಿದೆ ಸರ್ವಧರ್ಮದ
ಶಾಂತಿ ಮಂತ್ರದ ಬೀಜವಾ
ಮಾನವೀಯತೆಯ ಮಾತೃಭೂಮಿಗೆ
ನಾವು ನೀಡುವ ಗೌರವ

# ಮತ್ತೊಮ್ಮೆ ಹುಟ್ಟಿ ಬಾ

– ಅಶ್ವತ್ಥಮ್ಮ. ಕೆ

ಯಾರು ಯಾರಲ್ಲಿ ನಿಂತವರು?
ಕತ್ತಲಲ್ಲಿ?
ಬಾರೆನ್ನೆಡೆಗೆ
ಬಾಂದಳದ ಕಡೆಗೆ
ಬೆಳಕು ನೀಡುವೆನು

ಬೆಳಕು ಬಂದು
ವರ್ಷಗಳು ಕಳೆದವು
ನಾವಿನ್ನು ಕತ್ತಲಲ್ಲೇ
ಕುಳಿತು ಬೆಳಕಿನೆಡೆಗೆ
ಸಾಗಲು ಪ್ರಯತ್ನಿಸುತ್ತಿರುವೆ

ಯಾಕೀ ಕತ್ತಲಲ್ಲಿ ಬೆಳಕಿನ ಹೋರಾಟ
ಕತ್ತಲಿಗೊಂದು
ಮುಕ್ತಿಯಿಲ್ಲವೇ?
ಮುಕ್ತಿಯಿದೆ ಆದರೆ
ಮುನ್ನೆಡೆಸುವ
ನಾಯಕನಿಲ್ಲವಲ್ಲ

ಯಾಕೇ! ನಮ್ಮೀ ನಾಡಿನಲ್ಲಿ
ನಾಯಕರಿಗೆ ಕೊರತೆಯೇ
ಗಂಡುಗಲಿಗಳು ಹುಟ್ಟಿದ ನಾಡು
ಮೆರೆದ ನಾಡು ಬಳುವಳಿಯಾಗಿ
ನಮಗೆ ಕೊಟ್ಟ ನಾಡು
ನಾಯಕರಿಗೆ ಕೊರತೆಯೇ

ಹೌದು, ಬಸವಣ್ಣ, ದಾಸರು,
ಶರೀಫರು, ಗಾಂಧೀ
ಮೆರೆದ ನಾಡಲ್ಲಿ
ನಾಯಕರಿದ್ದರೂ ಇಲ್ಲದಂತೆ
ಬಂಜೆಯಾಗಿದೆ

ಬಂಜೆತನವ ನೀಗಲು ನಾಡಲ್ಲಿ
ಮತ್ತೊಮ್ಮೆ ಗಾಂಧಿ
ಹುಟ್ಟಿ ಬರಬೇಕು
ಮಹಾತ್ಮರು ಹುಟ್ಟಿ
ಬಂದಂತೆ
ನೀವೇನೆನ್ನುವಿರಿ...

# ಬಾಪುವಿನ ಬಾಳ ಬುತ್ತಿ

– ಮಂಜುನಾಥ. ಡಿ.ಕೆ.

ಒಕ್ಕನೆಲ ಸುಧಾಮಪುರಿಯಲಿ ಜನುಮವೆತ್ತಿ
ಸಕ್ಕದದ ಗೀತೆಯ ಅಕ್ಕಡಿಯ ಸಾಲನು ಬಿತ್ತಿ
ತಕ್ಕಡಿಯಂತೆ ದೇಶೀ ನ್ಯಾಯವ ಹಿಡಿದು ಎತ್ತಿ
ಬೊಕ್ಕತಲೆ ಪಕೀರ ಬಂಡಿಯಂತೆ ಇಸ್ವವ ಸುತ್ತಿ

ಅಕ್ಕಳಿಕೆ ಅಸ್ಪೃಶ್ಯತೆಯ ಸಟ್ಟೋರ್ಗೆಯ ಕೆತ್ತಿ
ರಕ್ಕಸದಲೆ ದಾಟಿದಕ್ಕೆ ತಗ್ಗಿಸಲ್ಲಿಲ್ಲಾ ತನ್ನನೆತ್ತಿ
ಕಳ್ಳನ್‌ಮಕ್ಳ ಕಂಪನಿಗೆ ಸಿಡಿಲಿನಂತೆ ಮುತ್ತಿ
ಸುಕ್ಕವದು ಆರೋಗ್ಯಕ್ಕೆ ಹಾನಿಕಾರದ ಬತ್ತಿ

ಚಿಕ್ಕದರಲ್ಲಿಯೇ ನಕಲಿನ ಕಲೆಯ ಬಿಟ್ಟ ಯತ್ತಿ
ಗಕ್ಕನೆ ಜಳಪಿ ರಾಮನಾಮದ ಮಂಚಿನಕತ್ತಿ
ದಿಕ್ಕರಿಸಿ ದುಶ್ಚಟಗಳ ಕೋಲಿನಲಿ ಬದಿಗೊತ್ತಿ
ಲೆಕ್ಕವಿಲ್ಲದಷ್ಟು ಶಾಂತಿ ಪ್ರೀತಿ ಕರುಣೆಗಳ ಉತ್ತಿ

ಠಕ್ಕತನವ ಮೆಟ್ಟಿ ಅಂತರಂಗ ಶುದ್ಧಿಯ ಮೆತ್ತಿ
ನಕ್ಕವರ ಬಾಯಿಗೆ ತುರುಕಿ ಚರಕದ ಹತ್ತಿ
ಮಕ್ಕಳ ಪಾಲನೆಯಲ್ಲಿ ಕಸ್ತೂರ ಬಾ ಗಟ್ಟಿಗಿತ್ತಿ
ಕಕ್ಕರನಂತೆ ಉಪವಾಸದ ಅಸ್ತ್ರಹೂಡಿದ ಜತ್ತಿ

ಹೊಕ್ಕ ಜಾತಿ ಪದ್ದತಿಯನು ನೆಲಕೆ ಹಾಕಿ ಒತ್ತಿ
ಲೆಕ್ಕದಲಿ ಸೇವೆಯ ಪ್ರತಿಫಲ ಸೇವೆಯೆಂಬ ದತ್ತಿ
ಕಕ್ಕಸು ಹೊರುವ ಹಸುಳೆಗಳ ಸೆಳೆದು ಎದೆಗೊತ್ತಿ
ಪಕ್ಕ ಇದೇ ನನ್ನ ಸತ್ಯಾನ್ವೇಷಣೆಯ ಬಾಳ ಬುತ್ತಿ

# ಬೆಳಕಿನತ್ತ ನಡೆಸಿದ ಚಂದ್ರ

– ಜಯಚಂದ್ರಶೇಖರ. ವೈ.

ಹಿಂಸೆಯ ಪ್ರಶ್ನಿಸಿದ
ಕತ್ತಲೆಯು ಕರಗಿತು
ಆಸೆಗಳ ದೂರವಿರಿಸಿದ
ಸ್ವಾತಂತ್ರ್ಯ ಮೊಳಕೆಯೊಡೆದಿತ್ತು
ಬೆಳಕನ್ನು ಎಳೆತಂದ
ಬೆಳದಿಂಗಳು ಮೈದೋರಿತು

ಪಕ್ಷಪಾತಗಳ ಬಿಡಿಸಿದ
ಆಮಿಷಗಳ ಆಪೋಷಿಸಿದ
ಬದಲಾವಣೆಯ ಘೋಷಿಸಿದ
ಜೀವನಕೊಂದು ದಾರಿತೋರಿಸಿದ
ಬಾಪು ಪ್ರಗತಿಯ ಸ್ಥಾಪಿಸಿದ

ನೂರು ನಕ್ಷತ್ರಗಳಿಗೂ ಬೆಳಕನಿತ್ತು
ಹೊಳೆವಂತೆ ಮಾಡಿದ
ಕೋಲನ್ನೂರಿ ಬೆಳಕಿನತ್ತ
ನಮ್ಮನೆಲ್ಲಾ ನಡೆಸಿದ

# ಗಾಂಧಿ ನೀ ಬಂದ್ರೆ

– ಡಾ. ಹೆಚ್. ಎಮ್. ಚಂದ್ರಶೇಖರ ಶಾಸ್ತ್ರಿ

ಭವ್ಯ ಭಾರತ ನೋಡಪ್ಪ ಗಾಂಧಿ
ಅಂದ್ರ ಈ ಮಂದಿ
ಏನಂದಿ? ಅಂತ ಕೇಳ್ತಾರೋ ಯಪ್ಪಾ
ನೀ ಇದ್ರೆ ಹಾಕ್ತಿದ್ದೇನೋ
ಇವರ ಮಾಡೋದಕ್ಕೆಲ್ಲಾ ಸೊಪ್ಪ !
ನೀ ಬೇಕು, ನೀನು ಹೇಳಿದ್ದು ಬ್ಯಾಡ
ಅಂತಾರಪ್ಪ ಈ ಜನ
ಇನ್ನೊಮ್ಮೆ ನೀ ಹುಟ್ಟಿ ಬಂದ್ರೂ
ಗೆಲ್ಲೋಕಾಗೊದಿಲ್ಲ ಇವರ ಮನ !!
ನೀನಿದ್ದಾಗಲೇ ನಡೆಸಿದ್ರು ಭಾರಿ ಭಾರಿ ಮಸಲತ್ತು
ಈಗ ಈ ಭಾರತ ನೋಡಿ ಬಂದೆಪ ಅಂದ
ಹಿಡುಕುತರ ಇವರೇ ನಿಮ ಕತ್ತು !!!
ಇದ ನೆನಪಿರ್ಲಿ ನಿಮಗೆ ಯಾವೊತ್ತು !!!!

ನಿಮ ಫೋಟೊ ಹಾಕತಾರ
ಜಬರ್ದಸ್ತ್ ಸೆಲ್ಯೂಟ್ ಹೊಡಿತಾರ
ಜಯ ಜಯಕಾರನೂ ಮಾಡ್ತಾರ
ಮುಂದ್ ಬಿಟ್ ಹಿಂದ್
ಚೂರಿ ಹಾಕೋ ವ್ಯವಹಾರ
ತಗ್ಗಿಸಲ್ರಪೊ ಸ್ವಲ್ಪನು
ನೀ ಬಂದ್ರೆ, ನೋಡ್ತೀದ್ದಿ ಇವರ್

ಈ ಅವ್ಯವಹಾರ ಇವರಾ ಮಾಡಿದ್ದು
ಅಂತ ತೋರಿಸಿದ್ರೆ
ಮರುದಿನ ಮಣ್ಣಿನಾಗ ಮುಚ್ಚಿರುತಾರ
ಕೈ ಜೋಡ್ಸಿ ಕಾಲ್ ಸೆಟ್ಸಿ
ಗಾಂಧಿ ಮಹಾರಾಜ್ ಕಿ ಜೈ ಅಂತಾರ

ಮಾತ್ನಾಗೇನು ನೀ ಹುಟ್ಟಿ ಬಾ ಅಂತಾರ
ಬಂದ್ರ ಬಡಿದು ಓಡ್ಸತಾರ
ಸರ್ಕಲ್‌ಗೂ, ಸೌಧಕ್ಕೂ
ಎಲ್ಲೆಲ್ಲೂ ನಿನ್ನದೆ ಹೆಸರು !
ಸ್ಟ್ರೈಕ್ ಆದಾಗ್ ನೋಡ್ಬೇಕು
ನಿನ್ನ ಹೆಸರ ಮ್ಯಾಲಿನ ಕೆಸರು !!

ಯಪ್ಪಾ ಗಾಂಧಿ ನೀ ಉಟ್ಟಿದ್ರೂ ಚಿಂದಿ !
ಬಿಡಾಕೊಲ್ಲರು ಈ ಮಂದಿ
ಹಿಂಗಾ ಮಾಡಿ ನಿನ್ನ ಮಾಡ್ಯಾರ
ಪಂಜರದೊಳಗಿನ ಬಂಧಿ
ಅವತ್ ಅಂದಿದ್ರು ನೀ ಕುಳಿತಲ್ಲಿ
ದೇವ ಮಂದಿರ, ನಡೆದಲ್ಲಿ ಪವಿತ್ರ ಭೂಮೀಂತ
ಎಲ್ಲೋತು ಈ ಮಾತು? ಅಂದ ಮಂದಿ ಎಲ್ಲೊದ್ರು?
ಯಾಕ್ ಹಿಂಗಾತು? ಯಾಕ್ಹಿಂಗಾತು?
ಗಾಂಧಿ ನೀ ಬಂದ್ರೆ...

# ಮಹಾತ್ಮನೆಂಬ ಕೀರ್ತನಾ

– ಕವಿತಾ ಬಿ. ಅರವಿಂದಾ

ಮರಳಿ ಬಂತು ಭರವಸೆಗಳ ತಂತು
ಸಿದ್ಧವಾಯ್ತು ಸ್ವಾತಂತ್ರ್ಯದ ಗುರುತು
ನಿತ್ಯ ಪರಿಶ್ರಮದ ನೋವ ಮರೆತು
ಸತ್ಯ ನಡೆಯ ಕಂಡ ಲೋಕದೊಳಿತು
ಉದಯವಾಯ್ತು ಚೇತನ; ಸರ್ವೋದಯ ಚಿಂತನ

ಮರೆಯಾಗಿದ್ದ ಸ್ವಂತಿಕೆಯ ಸಾರವ ಹೊರ ತಂದು
ಸ್ವಾಭಿಮಾನದ ಸ್ವದೇಶೀತತ್ವದ ಸತ್ವದಿ ಮಿಂದು
'ಅಂದು, ಹಿಂದು, ಇಂದು, ಮುಂದು, ಎಂದೂ 'ಹಿಂದೂ'
ನಾವೆಂದು' ಸಹಕಾರದ ಉಳಿವಿಗಾಗಿ ಅಸಹಕಾರವನಿಟ್ಟು ಮುಂದು
ಸುಭದ್ರವಾಯ್ತು ಮನನ; ಅರ್ಥಪೂರ್ವ ಮಂಥನ

ಮಾತೃಭೂಮಿಗಾಗಿ ಧರಣಿ ಎಂಬ ದಾರಿ ಹಿಡಿದು
ಪಾರತಂತ್ರ್ಯದ ಅಳಿವಿಗಾಗಿ ಸತ್ಯಾಗ್ರಹದ ಹಾದಿ
ತುಳಿದುದೀನದಲಿತರೆಲ್ಲರೆಡೆಗೆ ದೈವಿಕತೆಯ ಪಾರಮ್ಯ ಮೆರೆದು
ಕ್ಲಿಷ್ಟವಾದ ಕಾಲದಲ್ಲಿ ಪಕ್ವವಾದ ಧೈರ್ಯ ತಳೆದು
ದೀಪ್ತವಾಯ್ತು ಸ್ಪಂದನ; ನವೋದಯದ ಅಂಕಣ

ಕರಿಯರೆಂಬ ಕಿರಿತನದ ಅವಮಾನವ ಸಹಿಸಿ
ಮಾನವತೆಯೆಂಬ ಹಿರಿತನದ ದಿಟ್ಟತೆಯ ಮೆರೆಸಿ
ವಿಶ್ವಭ್ರಾತೃತ್ವವೆಂಬ ಭಾವೈಕ್ಯತೆಯ ತತ್ವವ ಬೆಳೆಸಿ
ಸರಳ ಸಜ್ಜನಿಕೆಯೆಂಬ ಸಾರನೆಲ್ಲೆಡೆ ಪಸರಿಸಿ
ಮುಕ್ತವಾಯ್ತು ಬಂಧನ; ವ್ಯಕ್ತವಾಯ್ತು ಭಾವನ

ಗುಲಾಮರೆಂಬ ಕೀಳರಿಮೆಯ ಕಳಂಕವ ತೊರೆದು
ಅರಾಜಕತೆಯೆಂಬ ಅಜ್ಞಾನದ ದಟ್ಟಣೆಯ ಬಗೆದು
ಸತ್ಯಾನ್ವೇಷಣೆಗಾಗಿ ಬರಹವೆಂಬ ಮಾಧ್ಯಮವ ಹಿಡಿದು
ಸ್ವಾತಂತ್ರ್ಯವೆಂಬ ಸುಧೆಯ ಸಾರಸರ್ವಸ್ವ ಬಸೆದು
ಸಾರ್ಥಕವಾಯ್ತು ಜೀವನ; ಮಹಾತ್ಮನೆಂಬ ಕೀರ್ತನಾ

# ಕಪ್ಪು ಜನರ ಮನೆಯ ಬೆಳಗುವ ದೀಪ

– ಎಂ. ಎಸ್. ಸಿದ್ಧಾರ್ಥ

ಆ ಚಲಿಸುವ ಮೋಡಗಳಲ್ಲೊಂದು
ಆಕಾರ ಕಳಚಿಬಿದ್ದು
ಶ್ವೇತಭವನದ ಗೋಡೆಯ
ಮೇಲೊಂದುಪಟವಾಯಿತಂತೆ
ವಿಶ್ವವನ್ನೆಲ್ಲಾ ಬೆರಳ ತುದಿಯಲ್ಲಿ
ಬಂದಿಸಿಟ್ಟುಕೊಂಡಿರುವ
ಕರಿಮೈ ಸೂಟುಧಾರಿಯೊಬ್ಬ
ಪಟದಲ್ಲಿರುವ ಮುದುಕನ
ಕಣ್ಣುಗಳಲ್ಲಿ ಕಣ್ಣಿಟ್ಟು ನೋಡುತ್ತಿದ್ದಂತೆ
ಆಫ್ರಿಕೆಯ ಕಾಡುಗಳಲ್ಲಿ ಡಿಪೋಡಿಲ್ಸ್
ಹೂವುಗಳರಳುತ್ತವೆ
ದಂಡಿಯ ಕಡಲತಡಿಗಳಲ್ಲಿ
ಯುದ್ಧನೌಕೆಗಳು ಲಂಗರು ಹಾಕುತ್ತವೆ
ಈಸೂರಿನ ಧ್ವಜಗಳು ತಂಗಾಳಿಗೆ
ಮೈಯೊಡ್ಡಿ ಜೀವ ತುಂಬಿಕೊಳ್ಳುತ್ತವೆ

ಆ ಮಾಸಲು ಬಟ್ಟೆಯ ಮುದಿಯನ
ಕಣ್ಣುಗಳಲ್ಲಿ ನಕ್ಷತ್ರ ಸೆಳೆತ
ಸ್ವಲ್ಪ ಮೈ ಮರೆತರೂ, ಕಂಠ ಗುನುಗುತ್ತದೆ
ಶಂಭೂಕನ ಕೊಂದವನ
"ರಘುಪತಿ ರಾಘವ ರಾಜಾರಾಮ್"

ಈಗ, ಗೋದ್ರಾದಲ್ಲಿ ಮೇಘಗಳು ಕರಗಿ ಹನಿಯಾಡುತ್ತವೆ
ಸಬರಮತಿ ಆಶ್ರಮದ ತುಂಬ ಧ್ವನಿಸುತ್ತದೆ ಓಂಕಾರದ ನಾದ!
ಆದರೂ ಇವನ ಎದೆಯ ತುಂಬ ಪಾರಿವಾಳಗಳ ಗೂಡುಗಳು

ಹೃದಯ ಸೀಮಾತೀತ ಕ್ಷಿತಿಜ
ಅಲ್ಲಿ ಸದಾ ಸತ್ಯ ಅಹಿಂಸೆಗಳ ಧ್ಯಾನಸ್ಥ ಅಸ್ತಿತ್ವ
ಹೊಡೆಯುವ ಕೈಗೆ ಕಪಾಳಗಳ ನೀಡಿ
ಕಟುಕನೆದೆಯಲಿ ಗರಿಕೆ ನಾಟಿ ಬೇಸಾಯ
ನರನಾಡಿಗಳಲ್ಲಿ ಶಾಂತರುಧಿರ ಸಂಚಾರ
ಕಪ್ಪು ಜನರ ಮನೆಯ ಬೆಳಗುವ ದೀಪ
ಕಪ್ಪು ಮಣ್ಣಿನ ಜನರ ಸ್ವಾಭಿಮಾನದ ಹಾಡು.

ಕಾಥೆವಾಡದ ಬಯಲುಗಳಲ್ಲಿ ಹರಿಶ್ಚಂದ್ರನ ರೂಪ ಧರಿಸಿದ
ತೊಗಲು ಬೊಂಬೆಯ ಕೈಗೆ ಮೆದುಳನ್ನು ಕೊಟ್ಟವನೆ
ಬೀದಿಬೀದಿಗಳಲ್ಲಿ ಮಂಕರಿಯೊತ್ತ ಶ್ರವಣಕುಮಾರರಿಗೆ
ಶರಣು ಶರಣೆಂದವನೇ
ನಮ್ಮೂರ ಮಾರಿ ಮಸಣಿ ಮಕ್ಕಳಿಗೆ ಹರಿಜನರೆಂದು ಕರೆದೆ
ಮುಳ್ಳುಗಂಟೆಗಳಿಗೆ ಬಿಗಿದ ಜನಿವಾರದ ಗಂಟುಗಳನೇಕೆ ಬಿಚ್ಚಲಿಲ್ಲ
ದಲಿತಕೇರಿಯ ಚೋಮ ದುಡಿಯೊಡನೆ
ಹಾಡಿದ ಹಾಡನೇಕೆ ಕೇಳಲಿಲ್ಲ

ಕುಡಿದ ಅಮಲೊಳಗೆ ಜಗವ ಸೆರೆ ಹಿಡಿವ
ತವಕದಲಿ ಸುಟ್ಟ ಸಿಗರೇಟುಗಳ ಧೂಮಲೀಲೆ
ಅಂಗಭೋಗದ ಮಂಗ ತಲೆ ಹೊಕ್ಕಾಗ
ಖಾಸಗೀ ಕೋಣೆಗಳ ರಾಸಲೀಲೆ
ಎಷ್ಟೊಂದು ಪ್ರಯೋಗಗಳು ಸತ್ಯಾನ್ವೇಷಣೆಗೆ!

# ಗಾಂಧಿ

– ಎಸ್. ಬಿಳಿಗಿರಿ ವಾಸನ್

ಅಂದು 'ಗಾಂಧಿ' ಎಂದೊಡನೆ ರೋಮಾಂಚನ
ಮಿಂಚಿನ ಸಂಚಲನ ಎಲ್ಲವನು ತೊರೆದು
ಹೊರಡುವ ತವಕ
'ನಡೆ ಮುಂದೆ ನಡೆ ಮುಂದೆ
ನುಗ್ಗು ನಡೆ ಮುಂದೆ' ಎಂಬ ಪೌರುಷ
'ಗಾಂಧಿ' ಸತ್ಯ, ಅಹಿಂಸೆ,
ಸತ್ಯಾಗ್ರಹಗಳ ಗಾಯತ್ರಿ ಮಂತ್ರ
ಛಲದಂಕಮಲ್ಲ ನಿರಾಯುಧ ಸೇನಾನಿ
ನಿರಶನದ ಅಸ್ತ್ರ ಝಳಪಿಸಲು
ಶರಣಾಗಿ ಪೇರಿ ಕಿತ್ತರು
ಅಂದು ಫರಂಗಿಯವರು ಸ್ವಾತಂತ್ರ್ಯವ ಕೈಗಿತ್ತು

ಇಂದು 'ಗಾಂಧಿ' ಅನ್ಯಾಯ, ಅನೀತಿ, ಅಕ್ರಮಗಳ ಗಾಯತ್ರಿ!
ಅಸಹ್ಯ, ಜಿಗುಪ್ಸೆ, ತಿರಸ್ಕಾರರೆಲ್ಲರೂ ಗಾಂಧಿಗಳೇ
ಆ 'ಗಾಂಧಿ'ಗೂ ಈ 'ಗಾಂಧಿ'ಗಳಿಗೂ ಅಜಗಜಾಂತರ
ಅವರಲ್ಲಿತ್ತು ಮೂರು ಕಪಿಗಳ ಸಂಕೇತ
ಇವರಲ್ಲಿದೆ ಕಪಿಚೇಷ್ಟೆಗಳ ಚಪಲಗಳ ಸಾತತ್ಯ ಆಗುತಿದೆ ಅಂತ್ಯ
ಅವರು ಮಹಾತ್ಮ ಇವರು ಹುತಾತ್ಮ
ಬೆಳಗುತಿದೆ 'ಭಾರತ ಭಾಗ್ಯ–ವಿಧಾತ' ಜೈ ಭಾರತಾಂಬೆ.

# ಗಾಂಧೀ ಶತಕ

ವಿಸ್ತಾರ ಭಾರತದ ವಿವಿಧ ಜನಾಂಗದೊಳ್
ಬೇರೆಬೇರೆಯ ಸಂಸ್ಥೆ ಮತಗಳಲ್ಲಿ
ಸಾಮಂತರಾಜ್ಯದೊಳ್ ಸಕಲಗ್ರಾಮಗಳಲ್ಲಿ
ವಾಸಿಸುವ ಪ್ರತಿಯೊಬ್ಬ ಭಾರತೀಯ
ತನಗೆ ತಾನೇ ದೇಶ ಸ್ವಾತಂತ್ರ್ಯ ಸಾಧಿಸಲು
ಭಾರತಾಂಬೆಯ ಬಂಧ ಮೋಕ್ಷಮಾಡೆ
ವ್ಯಕ್ತಿ ಸತ್ಯಾಗ್ರಹವ ಕೈಕೊಳ್ಳಬೇಕೆಂದು
ಸಾರಿದೈ ಸೇತು ಹಿಮಗಿರಿಯವರೆಗೂ
ಮೂಲೆಮೂಲೆಯ ಜನಗಳೆದ್ದು ನಿಂತು
ರಾಜಕಾರ್ಯಗಳೊಂದು ನಡೆಯದಂತೆ
ಮುಷ್ಕರವ ಮಾಡಿದರು ನಿನ್ನ ನುಡಿಯೊಳ್
ಎನಿತು ಗೌರವವಿದೆ? ಮಹಾತ್ಮ ಗಾಂಧಿ

ದಕ್ಷಿಣಾಫ್ರಿದೊಳಗೆ ಬಿಳಿಯರಾಗ್ರಹದಿಂದ
ಭಾರತೀಯರೆಲ್ಲರಳುಕುತಿರಲು
ನಾಯಕತ್ವವಹಿಸಿ, ಬಿಳಿಯರೆನ್ನೆದುರಿಸಿ ಅವರಿತ್ತ
ಕಷ್ಟಾವಮಾನ ಸಹಿಸಿ ನಿನಗೆ ನೀನೆ ಕ್ಷೌರ ಕರ್ಮವಂ ಗೈಯುತೆ
ನಿನ್ನ ಬಟ್ಟೆಗಳನ್ನು ನೀನೊಗೆಯುತೆ
ನಿನ್ನ ಮನೆಕಸವನ್ನು ನೀನೆತ್ತಿ ಲೋಕಕ್ಕೆ ಸ್ವಾವಲಂಬನ
ವೃತ್ತಿಯನ್ನು ಕಲಿಸಿ ಬಿಳಿಯರಾಟೋಪವಂ ಬಗ್ಗುಬಡಿದು
ಜನರೆಲ್ಲರೊಂದೆಂಬುದಂ ಬೆಳಗಿದೆ
ಸತ್ಯ ಹಿಂಸಾವಿರತಿಯಂ ಕಲಿಸಿದೆ
ಕರ್ಮಯೋಗಿಯು ನೀ ಮಹಾತ್ಮ ಗಾಂಧಿ

ದುಂಡುಮೇಜಿನ ಸಮಾವೇಶದೊಳ್ ಕುಳಿತಾಗ
ನಿನ್ನವಾದದ ನ್ಯಾಯಧರ್ಮಗಳನು
ಪ್ರತಿಕಕ್ಷಿ ವಾಗ್ಬಂಧಗೈಯಲಾವಚ್ಛಕ್ತಿ
ಧರೆಯನ್ನೆರೆದೆ ಧೈರ್ಯೋತ್ಸಾಹದಿಂ
ರಾಜ್ಯಾಂಗ ತಂತ್ರಜ್ಞ, ರಾಜಕೀಯಜ್ಞರೊಳ್
ಕಾಲವಂ ಗಣಿಸದೆಯೆ ಸಹನದಿಂದ
ಸಾಗಿಸಿದ ವಾಕ್ಪಟಮೆ, ಸರ್ವರಭಿಪ್ರಾಯಗಳ
ಖಂಡಿಸಿತು ಕರ್ತವ್ಯ ದೃಷ್ಟಿಯಿಂದ
ನಿನ್ನ ಮಾತಿನಜಾಣ್ಮೆ, ನಿನ್ನ ತಾಳ್ಮೆ
ನಿನ್ನ ಕಿರುನಗೆ, ನಿನ್ನ ಚಿತ್ತದ ಬಗೆ
ಅನ್ಯರಿಗೆ ಲಭ್ಯವೇ? ಅಮರಜ್ಯೋತಿ
ಲೋಕಪೂಜಿತನೆ, ಮಹಾತ್ಮಗಾಂಧಿ

ನಲವತ್ತು ಮೂರನೆಯ ಫೆಬ್ರವರಿ ಹತ್ತರೊಳ್
ಮೂರುವಾರಂಗಳು ಪ್ರವಾಸಗೈದೆ
ಪಾರ್ಲಿಮೆಂಟಿನ ಭವನ ಕಂಪಿಸಿತು, ಬಿಳಿಯರೆದೆ
ಬಿರಿದು, ಇಂಗ್ಲೆಂಡೆಲ್ಲ ತಲ್ಲಣಿಸಿತು.
'ಯೂನಿಯನ್ ಜಾಕ್' ಧ್ವಜವು ತಲೆಯಬಾಗಿತು;
ನಿನ್ನ ಬಿಡುಗಡೆಯ ಮಾಡಿತು ಪ್ರಭುತ್ವವಾಗ
ಜರ್ಮನಿಯ ತಾದ್ಧತ್ಯವುಂ, ಜಪಾನರ ದಾಳಿಯಂ
ತಡೆಯೆ, ನಿನ್ನನಾಶ್ರಯಿಸಿ ಸೈನ್ಯ
ಶೇಖರಣೆಯಂ ಮಾಡಿ, ಯುದ್ಧ ಮುಗಿದ ಮೇಲೆ
ಭಾರತಕೆ ಸ್ವಾತಂತ್ರ್ಯವನ್ನು ಕೊಡುವ
ವಾಗ್ದಾನವಂ ಗೈದಿತಲ್ತೆ?
ಏಂ ಮಹಿಮೆನಿನ್ನದು ! ಮಹಾತ್ಮ ಗಾಂಧಿ

ಕ್ವಿಟ್ಟಿಂಡಿಯೋದ್ಯಮದ ಸತ್ಯಾಗ್ರಹದ ಸಮರದೋಳ್
ಸಮತ ವಾದಿಗಳ್ ಸಂಧಿಯರಿತು ಅರಸೊತ್ತಿಗೆಗೆ
ವಿಪ್ಲಚರ್ಯೆಯಿಂದಪಘಾತಗಳ ಮಾಡೆ, ನೀನದನ್ನೊಪ್ಪದಾದೆ
ನ್ಯಾಯಮಾರ್ಗದಿ ಸ್ವರಾಜ್ಯವಗಳಿಸಬೇಕೆಂದು
ಸಾಧಿಸಿಯೆ ಸಾಧಿಸಿದೆ ಸ್ವಾತಂತ್ರ್ಯವಂ
ಸಾಯುಧದ ಸೈನ್ಯಗಳ ಬಲದಿಂದ ಪಾಲಿಸುವ
"ಸ್ವಾತಂತ್ರ್ಯ" ಸ್ವಾತಂತ್ರ್ಯವಲ್ಲವೆಂದೆ ಬಲದಿಂದಗಳಿಸಿದಾ
ರಾಜ್ಯಮತ್ತೆ ಬಲದಿಂದ ಪೋಪುದೆಂದರಿತು ನೀನು
ಶಾಂತಿಯಿಂ ಸಾಧಿಸಿದೆ ಸ್ವಾತಂತ್ರ್ಯವಂ
ಶಾಂತಿ ದೂತನು ನೀ ಮಹಾತ್ಮಗಾಂಧಿ

ನವಯುಗಾರಂಭವಿದು ಭಾರತ ಚರಿತ್ರೆಯೊಳ್
ಜನವರಿಯ ಮೂವತ್ತರಿಂದಿಲ್ಲ ನೀ,
ನಿನ್ನ ಹಿಂಸಾಭೋಧೆ ಮಾಳ್ಪರೊಬ್ಬರು ಮಿಲ್ಲ
ಮತಮತಗಳೈಕ್ಯತೆಗೆ ದಾರಿಯಿಲ್ಲ
ಮಾನವತೆ ಮಮತೆಗಳು ನಿರ್ನಾಮವಾದವು
ಹಿಂಸಿಪರೆ ಸಾಧುಸಜ್ಜನರಾದರು
ಇದೆ "ಅಹಿಂಸೆ"ಯ ಗೋರಿ, ಇದುವೆ "ಕರುಣ" ಸಮಾಧಿ
ಇದುವೆ ಪ್ರಸ್ಥಾನ ಮಾನವತೆಗೆಲ್ಲ
ಭಾರತದತಂದೆ, ಶಾಂತಿದೂತನೆ
ಸಾಧುವೇ, ಪ್ರಿಯತಮನೆ, ಸರ್ವಜ್ಞನೆ,
ಆತ್ಮಯಜ್ಞಾಧೀಕ್ಷ, ಸತ್ಯವ್ರತ
ನಿರ್ಗತಿಕರಾದೆವು ಮಹಾತ್ಮ ಗಾಂಧಿ

ಗಾಂಧಿಯೇ ನೀನಮರ ನಿರಕದೊಳ್ ನಿಂತಿರ್ಪೆ
ಗಾಂಪರೆಮ್ಮನು ನೋಡಿ ನಗುತಲಿರ್ಪೆ
ಅಮರಲೋಕದಿ ನಿನಗೆ ಕೆಲಸವೇನಿರ್ಪುದೈ?
ಅಲ್ಲಿಯೇ ನಿಂತೆಮ್ಮನಾಳಲಹುದೆ?
ಮತಮತಾಂತರ ಕಲಹವಂತಿರಲಿ, ಬಂದುಬಿಡು
ಅಹಿಂಸೆ ಸತ್ಯದ ಪಾದದಿಂದ ನಡೆದು
ಪೂರ್ಣಕಾಮರು ಸುರರು, ನೀನುಪೂರ್ಣನು,
ನಿನಗೆ ಅವರ ಜೊತ ಹೊಂದುವುದೆ? ಹೊರಟುಬಾರೈ
ನಿನ್ನ ಮುಖಸೂರ್ಯನಿಂ ವೈಷಮ್ಯದ
ತಮವಡಗಿ, ಭಾರತವು ಭವ್ಯವಾಗಿ
ಬೆಳಗುವುದು ದಿಕ್ತಟಕೆ ಬೆಳಕಬೀರಿ
ಓಡಿಬಾರೈ ನೀ ಮಹಾತ್ಮಗಾಂಧಿ

ಅಪವರ್ಗ ಭಾಂಧವ ಮನಕೆ ಲೌಕಿಕ
ಧರ್ಮವನ್ನೊರೆದೆ ಯಾ ನಂದಬಾಲನಂತೆ
ದಿಕ್ಕು ತೋರದೆ ನೊಂದ ಮೂಕಜೀವದ ನಿತ್ಯ
ನೋವ ನಂದಿಸಿದೆ "ಗೌತಮು"ನ ತೆರದೆ
ಸತತ ಕ್ಷಮಾ ಪ್ರೇಮ ಶರಣರೋಲ್ ನರಪಶು
ಕಿಲ್ಬಿಪವ ಹರಿಸಿದೆ 'ಕ್ರಿಸ್ತ'ನಂತೆ ಆತ್ಮನಮರರತ್ವ ಕಾಯದ
ನಾಶ ನಿಜಮೆಂದು ಸಾರಿದೆ ಯಾ 'ಸಾಕ್ರಟೀಸ'ನಂತೆ।
ಬಾನಿಸದ ಬಂಧನವ ಹರಿಸಿ ಲೋಕ ಬಂಧುವಾದೆ
'ಏಬ್ರಹಾಮ'ನಂತೆ ಅಧ್ಬುತವು ನಿನ್ನ ಜೀವನದ ಸತ್ವ,
ಮೃತನಲ್ಲವೈ ನೀ ಮಹಾತ್ಮ ಗಾಂಧಿ

# ಭರತ ವಾಕ್ಯ

ಜಯ ಜಯತು ಜಯತು ಜಯ ಜಯತು ಜಯತು
ಜಯಮಂಗಳಂ ಗಾಂಧಿ, ನಿನ್ನಾತ್ಮಕೆ
ಜಯಮಕ್ಕೆ, ಭಾರತದ ಭೂಮಿಗನಿಶಂ
ಜಯಮಕ್ಕೆ, ಲೋಕ ಲೋಕಾಳಿಗೆಲ್ಲ

ಗಾಂಧಿ ಸಾಹಿತ್ಯ ಮಾಲೆ – 31

# ಗಾಂಧಿ ಭಜನಾವಳಿ

ಸಂಪಾದಕರು : ಎನ್. ಕೃಷ್ಣಸ್ವಾಮಿ

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಪ್ರಕಟಣೆ 2010 – 11

# ಸರ್ವಧರ್ಮ ಪ್ರಾರ್ಥನೆ

– ಆಚಾರ್ಯ ವಿನೋಬಾ ಬಾವೆ

ಓಂ ತತ್ಸತ ಶ್ರೀ ನಾರಾಯಣ ನೀ
ಪುರುಷೋತ್ತಮ ಗುರು ನೀ
ಸಿದ್ಧ ಬುದ್ಧ ನೀ ಸ್ಕಂದ ವಿನಾಯಕ
ಸವಿತಾ ಪಾವಕ ನೀ

ಬ್ರಹ್ಮ ಮಜ್ದನೀ ಯಹ್ವ ಶಕ್ತಿನೀ
ಏಸು ಪಿತಾ ಪ್ರಭು ನೀ
ರುದ್ರ ವಿಷ್ಣುನೀ ರಾಮಕೃಷ್ಣ ನೀ
ರಹೀಮ ತಾವೋನೀ

ವಾಸುದೇವ ಗೋ ವಿಶ್ವರೂಪ ನೀ
ಚಿದಾನಂದ ಹರಿ ನೀ
ಅದ್ವಿತೀಯ ನೀ ಅಕಾಲ ನಿರ್ಭಯ
ಆತ್ಮಲಿಂಗ ಶಿವ ನೀ

# ಗುಜರಾತಿ ಭಜನೆ

(ಖಮಾಜ – ತ್ರಿತಾಲ)

ನರಸೀ ಮೆಹತಾ

ವೈಷ್ಣವ ಜನತೋ ತೇನೇ ಕಹಿಯೇ
ಜೇ ಪೀಡ ಪರಾಯೀ ಜಾಣೇರೇ

ಪರದುಃಖೇ ಉಪಕಾರ ಕರೇ ತೋಯೇ
ಮನ ಅಭಿಮಾನ ನ ಆಣೇರೇ

ಸಕಳ ಲೋಕಮಾಂ ಸಹುನೇ ವಂದೇ
ನಿಂದಾ ನ ಕರೇ ಕೇನೀ ರೇ
ವಾಚ ಕಾಛ ಮನ ನಿಶ್ಚಳ ರಾಖೇ
ಧನ ಧನ ಜನನೀ ತೇನೀ ರೇ

ಸಮದೃಷ್ಟಿ ನೇ ತೃಷ್ಣಾ ತ್ಯಾಗೀ
ಪರಸ್ತ್ರೀ ಜೇನೇ ಮಾತರೇ
ಜಿಹ್ವಾ ಥಕೀ ಅಸತ್ಯನ ಬೋಲೇ
ಪರಧನ ನವಝಾಲೇ ಹಾಥ ರೇ

ಮೋಹ ಮಾಯಾ ವ್ಯಾಪೇ ನಹಿ ಜೇನೇ
ದೃಢ ವೈರಾಗ್ಯ ಜೇನಾ ಮನಮಾಂ ರೇ
ರಾಮ ನಾಮಶುಂ ತಾಳೀ ಲಾಗೀ
ಸಕಳ ತೀರಥ ತೇನಾ ತನಮಾಂ ರೇ

ವಣಲೋಭೀ ನೇ ಕಪಟ ರಹಿತ ಛೇ
ಕಾಮ ಕ್ರೋಧ ನಿವಾರ್ಯಾ ರೇ
ಭಣೇ ನರಸೈಯೋ ತೇನು ದರಶನ ಕರತಾ
ಕುಳ ಏಕೋತೇರ ತಾರ್ಯಾ ರೇ

# ಭಜನೆ

(ರಾಗ – ನಿರ್ಗುನೀ ಮಾಂಡ್ – ಸತವಾ)

ಸಂತ ಕಬೀರ್‌ದಾಸ

ಝಿನೀ ಝಿನೀ ಬಿನೀ ಚದರಿಯಾ
ಕಾಹೇ ಕೈ ತಾನಾ ಕಾಹೇ ಕೈ ಭರನೀ
ಕೌನ ತಾರಸೇ ಬಿನೀ ಚದರಿಯಾ

ಇಂಗಲಾ ಪಿಂಗಲಾ ತಾನಾ ಭರನೀ
ಸುಖಮನ ತಾರಸೇ ಬನೀ ಚದರಿಯಾ

ಅಠ ಕವಲ ದಲ ಚರಖಾ ಡೋಲೈ
ಪಾಂಚ ತತ್ತ್ವಗುನ ತಿನೀ ಚದರಿಯಾ

ಸಾಂಯಿಕೋ ಸೀಯತ ಮಾಸ ದಸ ಲಾಗೈ
ಠೋರಠಕಕೇ ಬಿನೀ ಚದರಿಯಾ

ಸೋ ಚಾದರ ಸುರ ನರ ಮುನಿ ಓಡೀ
ಓಢೀಕೇ ಮೈಲೀ ಕೀನಿ ಚದರಿಯಾ

ದಾಸ ಕಬೀರ ಜತನಸೇ ಓಢೀ
ಜ್ಯೋ ಕೀ ತ್ಯೋಂ ದೀನೀ ಚದರಿಯಾ

## ಭಜನೆ

(ಪಹಡಿ – ತ್ರಿತಾಲ)

ಸಂತ ಮೀರಾ ಬಾಯಿ

ಪಯೋಜಿ ಮೈನೇ ರಾಮರತನ ಧಯ ಪಾಯೋ
ವಸ್ತು ಅಮೋಲಿಕ ದೀ ಮೇರೇ ಸತಗುರು
ಕಿರಪಾ ಕರ ಅಪನಾಯೋ

ಜನಮ ಜನಮಕೀ ಪೂಂಜೀ ಪಾಯೀ
ಜಗಮೇ ಸಭೀ ಖೋವಾಯೋ

ಖರಚೈನ ಖೂಟೈ ವಾಕೋ ಚೋರನ ಲೂಟೈ
ದಿನ ದಿನ ಬಢತ ಸವಾಯೋ

ಸತ ಕೀ ನಾವ ಖೇವಟಿಯಾ ಸತಗುರು
ಭವಸಾಗರ ತರ ಆಯೋ

ಮೀರಾ ಕೇ ಪ್ರಭು ಗಿರಿಧರ ನಾಗರ
ಹರಖ ಹರಖ ಜಸ ಗಾಯೋ

---

ಸುಳ್ಳಿನಲ್ಲಿ ಯಾವುದೇ ಹೆಮ್ಮೆಯೂ ಇಲ್ಲ ಸತ್ಯದಲ್ಲಿ ಯಾವುದೇ ಅಗೌರವವೂ ಇಲ್ಲ

– ಮಹಾತ್ಮ ಗಾಂಧಿ

# ಭಜನೆ

(ಮಾಂಡ್ – ತ್ರಿತಾಲ)

ಸಂತ ತುಕಡೋಜೀ

ಸಬಕೇಲಿಯೇ ಖುಲಾ ಹೈ
ಮಂದಿರ ಯಹ ಹೈ ಹಮಾರಾ
ಮತ ಭೇದಕೋ ಭುಲಾತಾ
ಮಂದಿರ ಯಹ ಹೈ ಹಮಾರಾ
ಆವೋ ಸಭೀ ಹೀ ಪಂಥೀ
ಆವೋ ಸಭೀ ಹೀ ಧರ್ಮೀ
ದೇಶೀವಿದೇಶೀಯೋಂಕಾ
ಮಂದಿರ ಯಹ ಹೈ ಹಮಾರಾ
ಮಾನವ ಕಾ ಧರ್ಮ ಕ್ಯಾ ಹೈ
ಮಿಲತೀ ಹೈ ರಾಹ ಜಿಸ ಮೇ
ಚಾಹತಾ ಭಲಾ ಸಭೀ ಕಾ
ಮಂದಿರ ಯಹ ಹೈ ಹಮಾರಾ
ಸಂತೋಂಕೀ ಉಚ್ಚ ವಾಣೀ
ಸಬ ಜನ ಹೈ ಭಾಯೀ ಭಾಯೀ
ಸಬ ದೇವತಾ ಸಮಾತ
ಮಂದಿರ ಯಹ ಹೈ ಹಮಾರಾ
ಮತ ಭೇದ ಹೋನೇ ಪರ ಭೀ
ಮನಭೇದ ಹೋನ ಪಾಯೇ
ಹರ ಏಕತಾಕಾ ಹಾವೀ
ಮಂದಿರ ಯಹ ಹೈ ಹಮಾರಾ
ಆವೋ ಸಭೀ ಮಿಲೇಂಗೇ
ಬೈಠೇಂಗೇ ಪ್ರಾರ್ಥನಾ ಮೇ
ತುಕಡ್ಯಾ ಕಹೇ ಅಮರ ಹೈ
ಮಂದಿರ ಯಹ ಹೈ ಹಮಾರಾ

# ಬಂಗಾಳಿ ಹಾಡು – 1

– ರವೀಂದ್ರನಾಥ ಠ್ಯಾಗೂರ್

ಜದಿ ತೋರ ಡಾಕ ಶುನೇ ಕೇವು ನಾ ಆಸೆ
ತಬೇ ಈಕಲಾ ಚಲೋ ರೇ

ಜದಿ ಕೇವು ಕಥಾ ನಾಕಯ (ಓರೇ ಓ ಅಭಾಗಾ)
ಜದಿ ಸಬಾಯಿ ಥಾಕೇ ಮುಖಫಿರಾಯೇ
ಸಬಾಯಿ ಕರೇಭಯ–ತಬೇ ಪರಾಣ ಖುಲೇ
ಓ ತೂಯಿ ಮುಖುಟೇ ತೋರ ಮನೇರ ಕಥಾ
ಏಕಲಾ ಬಲೋರೇ

ಜದಿ ಸಬಾಯಿ ಫಿರೇ ಜಾಯ (ಓರೇ ಓ ಅಭಾಗಾ)
ಜದಿ ಹಗನ ಪಥೇ ಜಾಬಾರ ಕಾಲೇ
ಕೇವು ಫಿರೇನಾ ಚಾಯ–ತಬೇ ಪಥೇರಾ ಕಾಂಟಾ
ಓ ತೂಯಿ ರಕ್ತಮಾಖಾ ಚರಣ ತಲೇ ಏಕಲಾ ದಲೋರೇ

ಜದಿ ಆಲೋ ನಧರೇ (ಓರೇ ಓ ಅಭಾಗ)
ಒದಿ ಝುಡ ಬಾದಲೇ ಆಂಧಾರ ರಾತೇ

ದುಬಾರ ದೇಯ ಘರೇ
ತಬೇ ವಜ್ರಾನಲೇ
ಆಪನ ಬುಕೇರ ಪಾಂಜರ ಜ್ವಲಿಯೇ ನೀಯೇ
ಈಕಲಾ ಜ್ವಲೋರೇ

## ಬಂಗಾಳಿ ಹಾಡು - 2

ತುಮಿ ಬಂಧು ತುಮಿ ನಾಥ
ನಿಶಿದಿನ ತುಮಿ ಅಮಾರ

ತುಮಿ ಸುಖ ತುಮಿ ಶಾಂತಿ
ತುಮಿ ಹೇ ಅಮೃತಪಾಥಾರ

ತುಮಿ ತೋ ಆನಂದಲೋಕ
ಜುಡಾವೋ ಪ್ರಾಣ ನಾಶ ಶೋಕ
ತಾಪಹರಣ ತೋಮಾರ ಚರಣ
ಅಸೇಮಶರಣ ದೀನಜನಾರ

---

ಮುಂದಕ್ಕೆ ಮುಂದಕ್ಕೆ ಸಾಗೋಣ
ಜೈ ಜಗತ್ ಘೋಷಣೆ ಮಾಡೋಣ
ಭೂಮಿಯ ಗ್ರಾಮಕೆ ನೀಡೋಣ
ನವಗ್ರಾಮ ಸ್ವರಾಜ್ಯವ ಕಟ್ಟೋಣ

## ಭಜನೆ

(ಧುನ್-ಕೆಹರವಾ)

ಜಯ ಜಗದೀಶ ಹರೇ
ಭಕ್ತ ಜನೋಂಕಾ ಸಂಕಟ ಕ್ಷಣ ಮೇ ದೂರ ಕರೇ
ಜೋ ಧ್ಯಾವೇ ಫಲ ಪಾವೇ ದುಖಃ ವಿನಸೇ ಮನಕಾ
ಸುಖ ಸಂಪತಿ ಘರ ಆವೇ ಕಷ್ಟ ಮಿಟೇ ತನಕಾ
ಮಾತಪಿತಾ ತುಮ ಮೇರೇ ಶರಣ ಗಹೂ ಕಿಸಕೀ
ತುಮ ಬಿನ ಔರ ನ ದೂಜಾ ಆಶ ಕರೂ ಜಿಸಕೀ
ತುಮ ಪೂರನ ಪರಮಾತ್ಮಾ ತುಮ ಅಂತರಯಾಮೀ
ಪಾರಬ್ರಹ್ಮ ಪರಮೇಶ್ವರ ತುಮ ಸಬಕೇ ಸ್ವಾಮೀ
ತುಮ ಕರುಣಾಕೇ ಸಾಗರ ತುಮ ಪಾಲನ ಕರ್ತಾ
ಮೈ ಮೂಕಖ ಖಲ ಕಾಮೀ ಕೃಪಾ ಕರೋ ಭರ್ತಾ
ತುಮ ಹೂ ಏಕ ಅಗೋಚರ ಸಬಕೇ ಪ್ರಾಣಪತಿ
ಕಿಸ ವಿಧ ಮಿಲೂ ಗುಸಾಯಿ ತುಮಕೋ ಮೈ ಕುಮತಿ
ದೀನಬಂಧು ದುಖಹರತಾ ಠಾಕುರ ತುಮ ಮೇರೇ
ಅಪನೇ ಹಾಥ ಉಠಾವೋ ದ್ವಾರ ಪರೋ ತೇರೇ
ವಿಷಯ ವಿಕಾರ ಮಿಟಾವೋ ಪಾಪ ಹರೋ ದೇವಾ
ಶ್ರದ್ಧಾ ಭಕ್ತಿ ಬಡಾವೋ ಸಂತನಕೀ ಸೇವಾ

---

ಅಹಿಂಸೆಯಲ್ಲೂ ಸತ್ಯಗಳೂ

ಸೋಲು ಎಂಬುದೇ ಇರುವುದಿಲ್ಲ

– **ಮಹಾತ್ಮ ಗಾಂಧಿ**

ಗಾಂಧಿ ಸಾಹಿತ್ಯ ಮಾಲೆ - 30

# ಗಾಂಧಿ ವಚನ ಮುಕ್ತಾವಳಿ

ಸಂಪಾದಕರು : ಎನ್. ಕೃಷ್ಣಸ್ವಾಮಿ

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಪ್ರಕಟಣೆ 2010 - 11

# ಗಾಂಧಿ ವಚನ ಮುಕ್ತಾವಳಿ

– ತಿ.ತಾ. ಶರ್ಮ

ಎಚ್ಚರಿಕೆ! ಎಚ್ಚರಿಕೆ! ಅನ್ನುತ್ತಿಹರೆನ್ನ ಗೆಳೆಯರು
ರಕ್ಷಕನು ದೇವರಯ್ಯ! ಮತ್ತಾರ ರಕ್ಷಣೆ ಬೇಡಲಯ್ಯ
'ತೇನವಿನಾ ತೃಣಮಪಿ ನಚಲತಿ'
ಅವನಿರಲಾಗಿ ನನಗೆಲ್ಲಿಯ ಭಯ
ಇದು ಮಹಾತ್ಮಾ ಶ್ರದ್ಧಾನಂದರ ವಚನ ಇದೇ ಭಕ್ತನ ವಚನ!

ಎಲ್ಲರ ಎದುರಿಗೂ ಮಾಡದುದನ್ನು ಒಳಗೊಳಗೇ
ಮಾಡಲು ನನ್ನಮನಒಡಂಬಡಲಿಲ್ಲ

ಬಡತನದ ಕಲೆಯ ನಿಪುಣರು ಮಾಳವೀಯರು
ನಾನವರಿಂದಲೀ ಕಲೆಯ ಕಲಿತಿಹೆನು
ಅವರು ರಾಜ ಮಹಾರಾಜರ ಭಂಡಾರಗಳ ಬರಿದು ಮಾಡಿದರೆ
ನಾ ನಾಚಿಕೆ ಇಲ್ಲದೆ ಬಡವರ ಕಿಸೆಗಳ ಬರಿದು ಮಾಡುತಿಹೆನು
ಏತಕೆನ್ನುವಿರಾ ಅವರಿಗಿಂತ ಬಡವರಸಲುವಾಗಿ
ಅದನುಪಯೋಗಿಸಲು

ಪಡುವಲು ಗಾಳಿಗೆ ಮಯ್ಯನೊಡ್ಡಬೇಡಿ ಅದು ಕಶ್ಮಲದ ಗಾಳಿ
ಸಕಾಲದಲ್ಲಿ ನೇವೆಚ್ಚರಗೊಳ್ಳದಿದ್ದರೆ, ಬಲಗೊಳ್ಳುತ್ತಿರುವ
ಆ ವಿಷಜ್ವಾಲೆ ನಿಮ್ಮನೆಲ್ಲ ಸುತ್ತುವರಿದು ಆಹುತಿಗೊಳಬಹುದು

ಮನ–ನಿತ್ಯ ಹೊಸದು; ಕ್ಷಣ ಕ್ಷಣಕೂ ಹೊಸದು;
ಮಾನವನು–ಹಳಬ ಹಳೆಯದು ನೆರಳಂತೆ,
ಹೊಸತು ಸೂರ್ಯ ಕಿರಣದಂತೆ!

ಜನಪದ ಸೇವಕತನ ಸಾಕೆನಗೆ
ಸೇವಾಧರ್ಮವೇ ಪರಮ ಧರ್ಮ
ಎಂಬ ನಂಬಿಕೆ ನನಗಿರುವವರೆಗೆ
ನಾನು ಮತ್ತೇನನ್ನೂ ಬಯಸೆ

ಆತ್ಮ ಅವನಾಶಿಯೆಂಬ ವಿಶ್ವಾಸದ
ಪುಣ್ಯಭೂಮಿಯ, ಅಮೃತಪುತ್ರ
ನಾನಾಗಿ, ಎಲ್ಲ ಬಂಧನಗಳನ್ನು ನಾನು
ಪ್ರತಿಭಟಿಸುವೆ. ಯಾರು ಬಂಧನದಲ್ಲಿ
ಇದ್ದರೂ ಕಂಡೂ ಮರುಗುವೆ
ಎಲ್ಲರ ಬಂಧನ ದುಃಖ ನಿವೃತ್ತಿಯಾದದಂದು
ಈಶ್ವರನ ಸಂಕಲ್ಪ ಸಿದ್ಧಿ

ಗಣರಾಜ್ಯವೆಂದರೆ ಗುಣರಾಜ್ಯ
ಆ ರಾಜ್ಯದಲ್ಲಿ ಶಾಸನ ವಿಧೇಯತೆಯುಂಟು
ಸ್ವಾತಂತ್ರ್ಯ ಪಾಲನೆಯುಂಟು
ಆಸ್ತಿ, ಮಾನ, ಪ್ರಾಣ, ರಕ್ಷಣೆಯುಂಟು
ಎಲ್ಲರಿಗೂ ಸುಖ-ಶಾಂತಿಯುಂಟು

ದೊಣ್ಣೆ ಎತ್ತಿದರೆ ತಣ್ಣಗಾಗುವರೆಂದು ಬ್ರಿಟನ್ ಭಾವಿಸಿತ್ತು!
ಚಕ್ರಗತಿ ವಿಲಾಸ! ಭಾರತ ಬಿಟ್ಟು ಬ್ರಿಟನ್ ಓಡಿತು!

ಪ್ರಾಚೀನ ಋಷಿಗಳು ಜ್ಞಾನಿಗಳಯ್ಯ
ಜನರ ಐಹಿಕ ಸುಖಾಭಿಲಾಷೆಯನ್ನು ಮಿತಿಗೊಳಿಸಿದರು
ಸಮಾಜವನ್ನು ನಿಯಮಬದ್ಧಗೊಳಿಸಿದರು
ಐದು ಸಾವಿರ ವರ್ಷಗಳ ಹಳೇ ನೇಗಿಲು
ಇಂದು ರೈತನ ನೇಗಿಲಯ್ಯ!
ಅದರಲ್ಲಿದೆ ನಮ್ಮ ಮೋಕ್ಷಕಾಣಯ್ಯ!

ನನ್ನ ಜೀವನದ ಮೂಲಾಧಾರ ಚಕ್ರ ಸತ್ಯ!
ಸತ್ಯ ಸಂತಾನವೇ ಬ್ರಹ್ಮಚರ್ಯೆ – ಅಹಿಂಸೆ
ಜ್ಞಾನ ಯೋಗದ ಅಂತ್ಯವೇನಯ್ಯ?
"ಶೀಲ" ಸಂಪಾದನವಯ್ಯ!

ಬೇಸಾಯ, ಕೈನೂಲಿಗೆ
ಇವರಡು ರಾಷ್ಟ್ರದೇಹದ
"ಹೃತ್ಕೋಶ", "ಹೃತ್ಕುಕ್ಷಿ"!

ಚರಕದ ಕರೆ, ಘನನ ಕರೆ!
ಚರಕದ ಕರೆ, ಪ್ರೇಮದ ಕರೆ!

"ನೂಲಿಗೆ ಪ್ರತಿಯೊಬ್ಬನ
ಅವಶ್ಯಕ ಯಜ್ಞಕಾರ್ಯ ಕಣಾ!
ಬರೆಯಬಲ್ಲವರೆಲ್ಲ ನೂಲಬಲ್ಲರು!

ಸ್ವರಾಜ್ಯಕ್ಕಾಗಿ ನೂಲುವುದು ಮೇಲು;
ನೂಲುವುದು "ನೂಲಿಗೆ ಶರ್ಮರ ಪದ
ಶಿಲ್ಪನ "ಹೊಲಿಗೆ"ಯಂತೆ ಬರಹಕ್ಕಿಂತ

ಅವನಿಗಿಂತ ನಾ ಶ್ರೇಷ್ಠ
ಹೀಗೆಂದು ಭಾವಿಸುವುದಕ್ಕಿಂತ ಪಾಪವಿಲ್ಲವಯ್ಯ !
ಇದು ದೈವ ದ್ರೋಹಕಣಾ!
ಇದು ಮಾನವ ದ್ರೋಹಕಣಾ!

ಭಕ್ತಿಯ ಕುಸುಮ ಕೋಮಲವಲ್ಲ
ಚಂಡಮಾರುತಕ್ಕದು ಬಾಗುವುದಿಲ್ಲ
ಭಕ್ತಿಯು ಹಿಮಾಚಲದಂತೆ ಕದಲುವ ಮಾತೇ ಇಲ್ಲ

ಹಿಡಿದಿರುವ ಕೆಲಸದಲಿ ನಿನನಗೆ
ನಂಬಿಕೆಯುಂಟೇನಯ್ಯ?
ಆ ಕಾರ್ಯಸಾಧನ ವಿಧಾನದಲಿ
ನಿನಗೆ ನೆಚ್ಚಿಕೆಯುಂಟೇನಯ್ಯ?
ದೇವರಲಿ ನಿನಗೆ ನಂಬಿಕೆ
ಉಂಟೇನಯ್ಯ? ಹಾಗಾದರೆ
ನಿನ್ನ ಪಾಲಿಗೆ ಪ್ರಚಂಡ ಭಾಸ್ಕರನು
ಪೂರ್ಣ ಚಂದ್ರನು ಕಣಾ!

ಸತ್ಯಾಗ್ರಹ ಶಸ್ತ್ರಾಗಾರದಲ್ಲಿ
ಉಪವಾಸವೊಂದು ಪರಮ ಶಸ್ತ್ರ!

ನನ್ನ ಉಪವಾಸವೇನಿದ್ದರೂ
ನನ್ನ ಶುದ್ಧಿಗಾಗಿ! ನನ್ನ ಬಲಕ್ಕಾಗಿ!

ಉಪವಾಸವೇ!
ಅದು ನನ್ನ – ದೇವರ
ಮಧ್ಯದ ಮಾತು!

ಸತ್ಯವೇ ದೇವರಯ್ಯ;
ಸತ್ಯವನುಳಿದು ಬೇರೆ ದೇವರಿಲ್ಲಯ್ಯ

ನವಕೋಟಿ ನಾರಾಯಣರಿಲ್ಲದೆ
ರಾಷ್ಟ್ರವೊಂದಿಬಹುದಯ್ಯ
ಬಂಡವಾಳಗಾರರಿಲ್ಲದೆ
ರಾಷ್ಟ್ರವೊಂದಿರಬಹುದಯ್ಯ
ಕೂಲಿ, ಕೆಲಸ, ದುಡಿಮೆ ಇಲ್ಲದೆ
ರಾಷ್ಟ್ರವೇ ಇಲ್ಲವಯ್ಯ

ಭಾಷೆಯೆಂದರೇನಯ್ಯ?
ಆ ನಾಡಿನ ಜನರ ಬೆಳವಣಿಗೆ, ಶೀಲವಯ್ಯ!

ಪ್ರೇಮವೇ ಜೀವನದ ಪರಮ ಧರ್ಮ
ಈ ಧರ್ಮ ಪ್ರಯೋಗಕ್ಕಿಂತ
ಅವಿನಾಶಿಯಾದ ಆನಂದವೇನುಂಟು?

ಪ್ರೇವವೆಲ್ಲಿ, ಜೀವನವೆಲ್ಲಿ;
ದ್ವೇಷವೆಲ್ಲಿ, ನಾಶವಲ್ಲಿ

ಪ್ರೇಮಕ್ಕಿಂತ ಮಿಗಿಲಾದ
ಶಕ್ತಿಯಿಲ್ಲ; ಜಗದೊಳಗೆ;
ಭಾವಿಸಲು ಅದಕಿಂತ ದೀನ
ವಾದದಿಲ್ಲ ಜಗದೊಳಗೆ

ಪ್ರೇಮ 'ತಾ' ಅನ್ನುವುದೇ ಇಲ್ಲ
ಪ್ರೇಮ ಸದಾ 'ಕೋ' ಅನ್ನುತ್ತದೆ

ಗುರುತ್ವಾಕರ್ಷಣವೆಂತು
ಜಗತ್ತನ್ನು ಹಿಡಿದು ಕಾದಿದೆ
ಅಸಹಕಾರ ಅಂತು ಸಮಾಜವನ್ನು ಹಿಡಿದು ಕಾದಿದೆ!

ನಾನೊಬ್ಬ ಒದ್ದಾಡುವ ಬಡ ಪ್ರಾಣಿ;
ಒಳ್ಳೆಯವನಾಗಿರಲು ಕಾತರಿಸುತಿಹೆನಯ್ಯ
ಪೂರ್ಣ ಸತ್ಯಸಂಧನಾಗಿರಲಾಶಿಸುವೆನಯ್ಯ
ಕಾಯಾ, ಮನಸಾ, ವಾಚಾ,
ಅಹಿಂಸಾವ್ರತಿಯಾಗ ಬಯಸುವೆನಯ್ಯ
ಈ ಆದರ್ಶ ದುಸ್ಸಾಧ್ಯವಾದರೂ ಅದು
ಒಳ್ಳೆಯದೆಂಬುದನು ನಾ ಬಲ್ಲೆನಯ್ಯ

ಅಹಿಂಸೆಯೆಂಬುದು ನನಗೊಂದು ದರ್ಶನ ತತ್ತ್ವವಲ್ಲಯ್ಯ;
ಅದು ನನ್ನ ಧರ್ಮ, ನನ್ನ ಜೀವದ ಉಸಿರು ಕಾಣಯ್ಯ

ಅರಿಯದೆ ಮಾಡಿದ ಅಪರಾಧಗಳನ್ನು
'ಮನ್ನಿಸಾ! ಮನ್ನಿಸಾ!' ಎಂದು
ಕಾರುವ ರಕ್ತದ ಹೃದಯದಿಂದ
ನಾ ಮಾಡುವ ವ್ರತವೇ 'ಪ್ರಾರ್ಥನೆ'

ಹೃದಯಾಂತರಾಳದ ದೇವತ್ವವನು
ಎಚ್ಚರಗೊಳಿಸಬೇಕೆಂಬ ಹಸಿವುಂಟೇ?
ಹಾಗಾದರೆ ಪ್ರಾರ್ಥನೆಯೊಂದೇ ಶರಣು, ಶರಣು

ಬಾಲ ವಿತಂತುವ ಕಂಡು ನಾ
ಜರ್ಝರಿತನಾಗುವೆನು
ಆಗತಾನೆ ಸತಿಯನ್ನು ಕಳಕೊಂಡವನು
ಕ್ರೂರ, ಉದಾಸೀನತೆಯಿಂದ
ವಿವಾಹ ಸಿದ್ಧನಾಗುವುದ ಕಂಡು
ನನಗೆ ಮೈಕಂಪವಾಗುವುದಯ್ಯ

ಸ್ತ್ರೀ ಪುರುಷರು ಸಮಾನಸ್ಕಂಧರು
ಆದರೆ ಸ್ತ್ರೀ ಪುರುಷನಲ್ಲ;
ಪುರುಷ ಸ್ತ್ರೀಯಲ್ಲ

ಭಾರತ ಮಹಿಳೆಯರ ಸಲುವಾಗಿ ನಾನು
ಚರಕಾ ಹಿಡಿದು ಹೊರಟಿರುವೆನಯ್ಯ!
ಭಿಕ್ಷಾಪಾತ್ರೆ ಹಿಡಿದು ಹೊರಟಿರುವೆನಯ್ಯ!

ಸೌಜನ್ಯ : ಗಾಂಧಿ ಸಾಹಿತ್ಯ ಮಾಲೆ – 30, ಗಾಂಧಿ ವಚನ ಮುಕ್ತಾವಳಿಯಿಂದ

ಅಕ್ಟೋಬರ್ 2010–11

# ಸರ್ವೋದಯ ಪದ್ಯಾವಳಿ
# ಪುಸ್ತಕದಿಂದ ಆಯ್ದ ಕವನಗಳು

ಪ್ರಕಟಣೆ : ವಿಶ್ವ ಮೈತ್ರಿ ಟ್ರಸ್ಟ್, ಬದಿಯಡ್ಕ, ಕಾಸರಗೋಡು

# ಕಾಯಕವೇ ಕೈಲಾಸ

ಕಾಯಕವೇ ಕೈಲಾಸ
ಕಾಯಕವಿಲ್ಲದೆ ನಡೆಯದು ಜಗದಲಿ
ಬರುವುದೆ ಬರಿದೆ ವಿಕಾಸ ?

ಕಾಯಕವೇ ಭೂಮಾತೆಯ ಸೇವೆ
ಕಾಯಕವೇ ಶ್ರೀ ರಾಮನ ಪೂಜೆ
ಕಾಯಕವೇ ಮಹಾದೇವನ ಭಜನೆ

ಕೆಲಸಮಾಡದೆ ತಿನ್ನುವ ಅನ್ನ
ಕಳುವಿನದೆನುವುದು ಗೀತಾವಚನ
ತಿಳಿದು ನೋಡಲದೆ ಪಾಪಭೋಜನ

ಆಳಾಗಿ ದುಡಿ ಅರಸಾಗುಣ್ಣು
ಆಲಸದಲಿ ಕುಳಿತರೆ ತಿನ್ನು ಮಣ್ಣು
ಹೇಳಿದ ಗಾದೆಯು ವೇದವಿದೆನ್ನು

ಕಾಯಕದಿಂದಾರೋಗ್ಯದ ವೃದ್ಧಿ
ಕಾಯಕದಿಂದೈ ಸಿರಿ ಅಭಿವೃದ್ಧಿ
ಕಾಯಕದಿಂದಲೇ ಶ್ರೇಯದ ಸಿದ್ಧಿ

ಕೈಕೆಸರಾದರೆ ಬಾಯಿಗೆ ಮೊಸರು
ಲೋಕೋಕ್ತಿಯೊಳಿದೆ ಅನುಭವದುಸಿರು
ಸಾಕು ಸಾಕು ಸಂಶಯ ಬದಿಗಿರಿಸು

# ಸುಖಮಯ ಸ್ವಪನಾ

ಹೇಗಿರುವುದು ಈ ಸುಖಮಯ ಸ್ವಪನಾ
ಕೇಳಿರಿ ಎಲ್ಲ ಜಗವಿದು ನಮ್ಮ

ಭಾರತ ದೇಶದ ಯುವಕರು ನಾವು
ಗಾಂಧೀ ತಾತನ ಮಕ್ಕಳು ನಾವು
ಸತ್ಯ ಅಹಿಂಸೆಯೆ ನಮ್ಮಯ ಸಾಧನೆ
ನಮ್ಮಯ ಕರ್ಮವು ಮಾನವ ಸೇವೆ
ಎಲ್ಲರ ಸುಖವೇ ನಮ್ಮಯ ಸುಖವು
ಎಲ್ಲರ ದುಃಖದಿ ಸೇರುವೆವ್ ನಾವು

ಮೇಲು ಕೀಳಿನಾ ವಿಷವನು ನುಂಗಿ
ಜಾತಿ ಭೇದವಾ ಗರ್ಭವ ಸೀಳಿ
ಸೋದರ ಭಾವನೆ ಜಗಕೆ ನೀಡಿ
ಮೆರೆವೆವು ನಾವು ಗಾಂಧಿ ದೇಶದಿ

# ನಡೆಸೋಣ ಚಳವಳಿ

ನಡೆಸೋಣ ಚಳವಳಿ, ನಡೆಸೋಣ ಬಾ
ಅಡಿ ಇಟ್ಟು ಒಂದೊಂದೆ, ನಡೆಯೋಣ ನಾವ್ ಮುಂದೆ
ನಡೆಸೋಣ ಚಳವಳಿ, ನಡೆಸೋಣ ಬಾ

ಒಂದಾಗಿ ಚಂದಾಗಿ ಸಾಗೋಣ ಬಾ
ಬಂಧುಭಾವನೆ ತುಂಬಿ ಹರಿಸೋಣ ಬಾ
ಕುಂದು ಕೊರತೆಗಳೆಲ್ಲ ಕಳೆಯೋಣ ಬಾ

ಹಿಂದೆ ಆಂಧೋಲನ ನಡೆಸಿದ್ದೆವು
ಚೆಂದಾಗಿ ಹೆಸರನ್ನು ಗಳಿಸಿದ್ದೆವು
ಇಂದೇಕೆ ಸುಮ್ಮನೇ ಕುಳಿತಿದ್ದೇವೆ ?

ಕರಬಂದಿ ಚಳವಳಿ ನಡೆಸಿದ್ದೆವು
ಸೆರೆಮನೆ ವನವಾಸ ಕಂಡಿದ್ದೆವು
ಈಗೇಕೆ ಪುರುಷಾರ್ಥ ಕಳಕೊಂಡೆವು ?

ಭೂಮಾತೆ ಬಂಧನ ಕಳೆಯೋಣ ಬಾ
ಸಮಾಜ ಕ್ರಾಂತಿಯ ಗೈಯೋಣ ಬಾ
ಪ್ರೇಮದಿ ಬಂದದ್ದು ಉಣ್ಣೋಣ ಬಾ

ಸಾಮಾನ್ಯ ಜನರೊಂದುಗೂಡೋಣ ಬಾ
ಗ್ರಾಮದಾನಕೆ ಸಿದ್ಧರಾಗೋಣ ಬಾ
ಗ್ರಾಮರಾಜ್ಯವ ಕಟ್ಟಿ ನಡೆಸೋಣ ಬಾ

# ಶಾಂತಿ ಸೈನಿಕ ಗೀತ

ಶಾಂತಿಯಾ ಸಿಪಾಯಿ ನಡೆ ಕ್ರಾಂತಿಯಾ ಸಿಪಾಯಿ ನಡೆ
ಜನತೆ ಸೇವೆಗಾಗಿ ನಡೆ ಸಹನೆಯಿಂದ ಮುಂದೆ ನಡೆ
ಶಾಂತಿಯ ಸಿಪಾಯಿ ನಡೇ ನಡೇ ನಡೇ

ವೈರಭಾವ ಮರೆಯುತಾ ಪ್ರೇಮಭಾವ ಬೆಳೆಸುತಾ
ಬೇಧ ಭಾವ ಅಳಿಸುತಾ ನಮ್ರನಾಗಿ ನಡೆಯುತಾ
ಜನತೆ ಸೇವೆಗಾಗಿ ನಡೆ ನಡೇ ಶಾಂತಿಯಾ ಸಿಪಾಯಿ ನಡೆ

ದ್ವೇಷಭಯವು ಇಲ್ಲವು ಕೋಪವೆಲ್ಲ ಮಾಯವು
ಸೇವೆಯೊಂದೆಇರುವ ಗುರಿಯು ಜನರ ಅಂತರಾತ್ಮ ಕರೆಯು
ಶಾಂತಿಯಿಂದ ಮುಂದೆ ನಡೆ ನಡೇ
ಸಹನೆಯಿಂದ ಮುಂದೆ ನಡೆ ಶಾಂತಿಯಾ ಸಿಪಾಯಿ ನಡೆ

ಸತ್ಯದಲಿ ನಿಷ್ಠೆಯೂ ಅಹಿಂಸೆಯ ದೃಷ್ಟಿಯೂ
ಶಾಂತಿ ಕಾರ್ಯಕ್ಕಾಗಿ ಪ್ರಾಣ ನೀಗುವವನೆ ನಿಜದಿ ಜಾಣ
ನಮ್ರನಾಗಿ ಮುಂದೆ ನಡೆ ನಡೇ ಶಾಂತಿಯಾ ಸಿಪಾಯಿ ನಡೆ

ಜೈ ಜಗತ್ ಜೈ ಜಗತ್ ಜೈ ಜಗತ್ ಎಂದೆನ್ನುತಾ
ಊರು ಊರು ತಿರುಗುತಾ ಪ್ರೇಮಶಸ್ತ್ರ ಹಿಡಿಯುತ
ನಿರುತ ಸೇವೆ ಮಾಡುತಾ ನಮ್ರನಾಗಿ ಮುಂದೆ ನಡೆ ನಡೇ
ಶಾಂತಿಯಾ ಸಿಪಾಯಿ ನಡೆ

•

## ಬಾವೇ ಕೂಗು

ಕಂಚಿನ್ಸಾಳೆ ಬಾವೆ ಕೂಗೂ ಧರ್ಮಾದ್ಗಂಟು
ಹಂಚ್ಕೋಂಡ್ಬಾಳಿ ಭೂಮಿ ಹಕ್ಕು ಎಲ್ಲಾರ್ಗುಂಟು

ಗಂಡಾಗುಂಡಿ ಬೇಡಿರಣ್ಣ ಅಪ್ಪನ್ಗಂಟು
ಕಂಡೋರೆಲ್ಲ ತಮ್ಮಾ ತಂಗಿ ಭಾಗಾವುಂಟು

ಭೂಮಿದಾನ ಗ್ರಾಮಕ್ಕಿತ್ತು ಬಾಳ್ಬೇಕ್ನಂಟು
ನೆಮ್ಮದಿ ಶಾಂತಿಗಿದುವೆ ದಾರಿ ಮತ್ತೊಂದ್ಬಿಟ್ಟು

ಉತ್ತು ಬಿತ್ತಿ ಬೆಳೆವರ್ಗೆ ತಂಗಿಲ್ದಾ ತಿಟ್ಟು
ಕೂತ್ಕೊಂಡುಣ್ಣೋ ಗೆಳೆಯಾಗೇಕೆ ಭೂಮಿಪಟ್ಟು

ಕಾಲದೇಶ ವರ್ತಮಾನ ವರ್ತೀ ಇಟ್ಟು
ಬಾಳಿರಪ್ಪ ಶಾಂತಿಯಿಂದ ಭೂಮಿ ಕೊಟ್ಟು

ಹುಟ್ಟಿದ್ಮೇಲೆ ಸಾಯ್ಲೇ ಬೇಕು ಗಳಿಸಿದ್ಬಿಟ್ಟು
ಹುಟ್ಟಬೇಕು ಪುಣ್ಯ ಹೊತ್ತು ಹನುಮನ್ಗುಟ್ಟು

## ಶೀಲವು ಬೇಕು

ಶೀಲವು ಬೇಕು ಶಾಂತಿಯು ಬೇಕು ವಿಶ್ವದ ಜನಕೆಲ್ಲಾ
ಸುಪ್ತ ಚೇತನ ಮೊಳಗಿಸಿ ಇಂದು
ಚಿತ್ತ ಸ್ಥೈರ್ಯದ ತಾಳಿರಿ ಇಂದು
ಶಕ್ತಿ ಮಾತೆಯ ಧೀರರು ಎಂದು ಸಾಗುತ ನಾವೆಲ್ಲ

॥ ಸಾಗುತ ನಾವೆಲ್ಲ ॥

ಕರುಣೆಯ ಶಾಂತಿಯ ಸಾಧನ ರೂಪ
ಬುದ್ಧ ಮಹಾತ್ಮನ ಅಮರ ಸ್ವರೂಪ
ಸಮತೆಯ ಹರಡುವ ಜೀವನ ದೀಪ ಹಚ್ಚಿ ನಾವೆಲ್ಲ

॥ ಹಚ್ಚುವ ನಾವೆಲ್ಲ ॥

ಸತ್ಯ ಅಹಿಂಸೆಯು ಗೆಲುವಿಗೆ ಸಾಧನ
ಸಂತ ಶರಣರ ಹಾದಿಯೆ ಪಾವನ
ಚಿತ್ತಶುದ್ಧಿಯ ತ್ಯಾಗದ ಜೀವನ ನಡೆಸುವ ನಾವೆಲ್ಲ

॥ ನಡೆಸುವ ನಾವೆಲ್ಲ ॥

ವೈರವ ಅಳಿಸಿ ಪ್ರೇಮವ ಬೆಳೆಸಿ
ವಿಶ್ವಸಮತೆಯ ಭಾವನೆ ಹರಿಸಿ
ಸಜ್ಜನ ದುರ್ಜನ ಭೇದವ ಮರೆಸಿ ಬದುಕುವ ನಾವೆಲ್ಲ

॥ ಬದುಕುವ ನಾವೆಲ್ಲ ॥

# ಗಾಂಧೀಜಿ ನಿಧನಕ್ಕೆ
# ಕನ್ನಡ ಕವಿಗಳ ಭಾಷ್ಪಾಂಜಲಿ

ರಾಷ್ಟ್ರಪಿತ ದಿವಂಗತ ಉನ್ನತ ಹಸ್ತ ಹತಃ
ನರಹೃದಯದ ವಿಷವಾರ್ಧಿಗೆ, ಜೀವಾಮೃತ ಸಮರ್ಪಿತ
ಕ್ಷಮಿಸು ಓ ಜಗತ್ ಪಿತಾ! ಅದೃಷ್ಟ ಹೀನ ಭಾರತ

– ಕುವೆಂಪು

ನಿನ್ನ ಪ್ರತಿಮೆಯ ನಿಲ್ಲಿಸಿ ನಾವು ಮೆರೆವುದು ವ್ಯರ್ಥ
ನಮ್ಮ ಹೃದಯದೊಳಿರಲಿ ನಿನ್ನ ಮರಣದ ಅರ್ಥ
ನಿನ್ನ ಭಸ್ಮಕ್ಕೆ ಕಾಶಿ ಗೋಕರ್ಣ ಬೇಕಿಲ್ಲ
ನಿನ್ನ ಬೂದಿಯ ತ್ರಾಣ ಪುಣ್ಯಕ್ಷೇತ್ರಕ್ಕಿಲ್ಲ
ನಿನ್ನ ಕರ್ಮದ ಕಲ್ಪವೃಕ್ಷ ಅಜರಾಮರವು
ನಿನಗೇಕೆ ಪುಣ್ಯತಿಥಿಗಳ ಬಾಹ್ಯ ಜಂಜಡವು
ಹುಟ್ಟಿದವರಿಗೆ ಹಬ್ಬ, ಸತ್ತವರಿಗೆ ತಿಥಿಯು
ನಿನಗೆ ಎರಡೂ ಇಲ್ಲ, ಯಾವುದೂ ಇತಿಮಿತಿಯು
ನಿನಗೇಕೆ ಸ್ಮಾರಕವು ಶಿಲ್ಪಕೃತಿ ಹೂಮಾಲೆ
ಲೋಕವನೇ ಬೆಳಗುತಿದೆ ನಿನ್ನ ಎಲುಬಿನ ಜ್ವಾಲೆ

– ದಿನಕರ ದೇಸಾಯಿ

ಹತ್ತರ ಜೋಡಿಗೆ ಒಂದು ಮುತ್ತು ಹಡೆದಳು ಭಾರತ ಮಾತಾ,
ಹಿಗ್ಗಿಕೊಂಡಳು, ಹೂ ಬಿದ್ದಲ್ಲೇ ಬಾಡಿತು ಗಂಧ ದಿಗ್ದೇಶಕ್ಕೆ ಹರಡಿತು
ಭಾರತ ಜೀವಂತ ಅನಿಸಿಕೊಂಡಿತು

– ದ.ರಾ. ಬೇಂದ್ರೆ

ಹೇ ರಾಮ, ಹೇ ರಾಮ ಪ್ರೇಮಕ್ಕೆ ವಿದ್ವೇಷ
ಗುಂಡಿಕ್ಕಿ ಕೊಂದಿತೋ ಸೋದರ ಕುಡಿ ನಂದಿತೋ ಸತ್ಯದಲಿ
ಶಾಂತಿಯಲಿ ಪ್ರೇಮದಲಿ, ಧರ್ಮದಲಿ ಜಗವನೆತ್ತಿದ
ಲೋಕವಂದ್ಯ ಗಾಂಧಿಯ ಕೊಂದು ನಾವು ಸತ್ತೆವು

– ಕಯ್ಯಾರ ಕಿಞ್ಞಣ್ಣರೈ

ನಿನ್ನ ನೆತ್ತರು ನೆಲಕೆ ಚೆಲ್ಲಿದಂದು
ಮಣ್ಣು ನಡುಗಿತು ಹಗಲ ಹೂ ಬಾಡಿತು
ನಿನ್ನ ಪುಂಗಿಗೆ ಜವಗು ಭೂಮಿಗೂ ಹೂ ಅರಳಿಸಿ
ನಗುವ ಮನಸಾಯಿತು
ಗಾಳಿಯಲೆಗುಂಟ ಹೊಸ ಕನಸುಗಳ
ಕಂಪು ಹರಿದಾಡಿತು

– ಗಿರಡ್ಡಿ ಗೋವಿಂದರಾಜ

ಆದರೂ ಅವನ ನೆನಪು ಪದೇ ಪದೇ ಕಾಡುತ್ತದೆ
ನಮ್ಮ ಸೊಕ್ಕು ಸೋಲು ಕ್ರೂರವಾಗಿ ಬಿಚ್ಚಿಕೊಳ್ಳುತ್ತದೆ
ಅವನೇ ತಂದು ಕೊಟ್ಟ ಸ್ವಾತಂತ್ರ್ಯವನ್ನು ಯಾರೋ
ಕಸಿದು ತಮ್ಮ ಕಿಸೆಗೆ ತುಂಬಿಕೊಳ್ಳುತ್ತಿರುವಂತೆ ಭಾಸವಾಗುತ್ತದೆ

– ಚೆನ್ನವೀರ ಕಣವಿ

ನೀನಿದ್ದೆ ಎಂಬುದಕ್ಕೆ ಸ್ಮಾರಕ ನಿರ್ಮಿಸುವುದನ್ನು ನಾವು ಮರೆತಿಲ್ಲ
ಇಗೋ ಈ ಚೌಕದಲಿ, ಆ ಮಹಲಿನಲ್ಲಿ, ಈ ಪಾರ್ಕಿನಲ್ಲಿ ನಿನ್ನ
ವಿಗ್ರಹವನ್ನು ಸ್ಥಾಪಿಸಿ, ವರ್ಷ ವರ್ಷವೂ ನಿನ್ನ ನೆನಪುಗಳಲ್ಲಿ ಕೈ
ತೊಳೆದುಕೊಳ್ಳುತ್ತಿದ್ದೇವೆ. ಆದರೂ ಕೈಗಂಟಿಕೊಂಡಿರುವ ನಿನ್ನ ರಕ್ತದ
ಗುರುತು ಇನ್ನೂ ಹೋಗುತ್ತಿಲ್ಲ

– ಜಿ.ಎಸ್. ಶಿವರುದ್ರಪ್ಪ

ನಿನ್ನ ಹೆಸರಿಡಬಹುದು ಬೀದಿ ಬೀದಿಗೆ ಸುಲಭ
ನಿನ್ನಂತೆ ಬದುಕುವುದು ದುರ್ಲಭ
ನಿನ್ನ ಹೆಸರೆತ್ತಿದರೆ, ನಿನ್ನ ಮಾತಾಡಿದರೆ
ನಿನ್ನ ವೈರಿಗೆ ಕೂಡಾ ಲಾಭ

– ಕೆ.ಎಸ್. ನರಸಿಂಹಸ್ವಾಮಿ

ನಿನ್ನ ಕಂಡು ಬೆರಗಾದರು; ನಿನಗೆ ನಮೋ ನಮೋ ಎಂದರು
ನಿನ್ನ ಹೊಗಳಿ ಹಾಡಿದರು ಹಣ್ಣು ಕಾಯಿ ತಂದರು
ನಿನ್ನ ಪಥವ ಮರೆತು ನಿನ್ನ ಪದಕೆ ಬಿದ್ದ ಅಂಧರು
ನಿನಗೆ ಗುಡಿಯ ಕಟ್ಟಿ ತಾವು ಬಚ್ಚಲಲ್ಲೆ ನಿಂದರು

– ಎಂ. ಗೋಪಾಲಕೃಷ್ಣ ಅಡಿಗ

ಬೇಕಾರಿ ಬರೀ ಚರ್ಮ, ಎಲುಬು ಆದರಿವನು ರಾಷ್ಟ್ರರುಧಿರದ
ಆಗರ ಪಂಚೆಯುಟ್ಟಿಹ ರೈತ, ನಮ್ಮ ತಲೆಮಾರಿನವನು
ಬುದ್ಧ ಕೃಪಾಸಾಗರ

– ವಿನಾಯಕ

ಎನಿತು ಸರಳ ನುಡಿ, ಎಷ್ಟು ಸಹಜ ನಡೆ
ಮನದ ಮಹತಿಯೇನು?
ಅವನ ಎದೆಯ ಉನ್ನತಿಯ ನಿಲುಕುವದು
ಯಾವ ಗಿರಿಯಸಾನು?

– ಡಿ.ಎಸ್. ಕರ್ಕಿ

ನೆಲದ ನಡವಳಿಕೆಯಲಿ ನಾಕದೌನತ್ಯವನ್ನು
ಮೇಳವಿಸಿ ತೋರಿದ ಪವಾಡ ಪುರುಷ

– ತೀ.ನಂ. ಶ್ರೀಕಂಠಯ್ಯ

ಮೈತ್ರಿಯಿಂದೆ ಶತ್ರುಗಳನು ಸೋಲಿಸಿರುವ ವೀರ, ಮೃತ್ಯುವನೂ
ಮಿತ್ರನಂತೆ ಸ್ವಾಗತಿಸಿದ ಧೀರ, ನಿನ್ನ ನೌಕೆ ನಂಬಿದವನನು
ತಲ್ಪಿಸಿತ್ತೈ ತೀರ, ನೀನು ನಡೆದ ದಾರಿಯದೇ ಸತ್ಯ ಧರ್ಮಸಾರ
ನಮನವಿದೋ ನಮನವಿದೋ ನಮನ ಸಹಜಯೋಗಿ

– ಆನಂದಕಂದ

ಜನಮನದ ಹಗೆತನದ ರೋಷ ಹಾಲಾಹಲದಿ ಹಾಲುದಿಸಿ
ಬರುವಂತೆ ಮೂಡಿಬಂದೆ ಕ್ರಿಸ್ತ ಬುದ್ಧರ ಮೈತ್ರಿಯಿಂ ಸಾಧಿಸುತ
ವಿಶ್ವಸೇವಕರ ಪಂಕ್ತಿಯಲಿ ನಿಂದೆ

– ಕುವೆಂಪು

ಕಲಿಯುಗದಲಿ ಕೃತಯುಗವನು ತೋರಿದೆ
ಸತ್ಯವರಿಯದ ಜಗಕೆ ಮಣ್ಣಿನಲಿ ಮಹಾತ್ಮ ಮೆರೆದು
ಹೊಸ ಕಣ್ಣವಿತ್ತೆ ಮಾನವ ಕುಲಕೆ

– ಎನ್ಕೆ

ಭಾರತ ಮಾತೆಗೆ ಮುಕ್ತಿಯ ನೀಡಿ ಮುಕ್ತನಾದ ಗಾಂಧೀ ತಾತ
ಮಕ್ಕಳ ಕೈಯಲ್ಲಿ ಹಣ್ಣನು ನೀಡಿ ಕಣ್ಣು ಮುಚ್ಚಿದನು ದಿವಿಜಾತ
ಗಾಂಧೀ ಎಂಬ ಎರಡಕ್ಷರಗಳ ನಿನ್ನಿಂದೆ ಪಡೆದಿಹವು ನಿನ್ನಿಂದಲೇ
ಭಾರತವು ಸ್ವತಂತ್ರವು ಅಮರತ್ವ ನಮೋ ನಮೋ ಇದು
ಗಾಂಧೀತತ್ವ ಮುಕ್ತಳಾದಳೋ ಭಾರತಮಾತಾ

## ಬಾಪೂಜಿಗೆ

ಹತ್ತರ ಜೋಡಿಗೆ ಒಂದು ಮುತ್ತು ಹೆಡೆದಳೂ
ಭಾರತಮಾತಾ ಹಿಗ್ಗಿಕೊಂಡಳೂ
ಹೂವು ಬಿದ್ದಲ್ಲೇ ಬಾಡಿತು, ಗಂಧಾ ದಿಗ್ದೇಶಕ್ಕೆ ಹರಡಿತು
ಭಾರತಾ ಜೀವಂತಾ ಅನಿಸಿಕೊಂಡಿತು

– ಅಂಬಿಕಾತನಯದತ್ತ

ಸಾಧುವರ ವೃತ್ತಿಯಂ ತನ್ನೊಳೆ ಜಗಕೆ ತೋರಿ
ಐತಿಕಾರ್ಥಗಳರ್ಥ್ಯಮಂ ವಿಶದಪಡಿಸಿ
ಪಾಶ್ಚಾತ್ಯ ಜನಕೆಮತಿ ವಿಮಲ ನೀತಿಯನು ಪೇಳ್ವಾ
ದೈವ ಸಂಪನ್ಮಾರ್ಗದರ್ಶಕಂ ಗಾಂಧಿಯಲ್ತೆ

– ಡಿ.ವಿ.ಜಿ.

ನಿನ್ನ ನೆತ್ತರು ನೆಲಕೆ ಚೆಲ್ಲಿದಂದು
ಮಣ್ಣು ನಡುಗಿತು, ಹಗಲ ಹೂ ಬಾಡಿತು
ನರನು ಕೆರಳುವ ಹುಂಬ, ಬಾಳು ಯೂಪಸ್ತಂಭ
ಉತ್ತಮರ ಬಲಿ ಇಲ್ಲಿ ಬಾನಾಡಿತು

– ಗಂಗಾಧರ ಚಿತ್ತಾಲ

ಸೌಜನ್ಯ : ಅಮರ ಬಾಪು ಚಿಂತನ ಮಾಸಿಕ
ಅಕ್ಟೋಬರ್ – ನವೆಂಬರ್ 2013

# ಗಾಂಧೀಜಿ ಅವರ ಜೀವನ ಘಟನಾವಳಿಗಳು

| | |
|---|---|
| ಪೋರಬಂದರದಲ್ಲಿ ಜನನ | 2.10.1869 |
| ಕಸ್ತೂರ್‌ಬಾರೊಂದಿಗೆ ವಿವಾಹ | 1883 |
| ಮೆಟ್ರಿಕ್ಯುಲೇಶನ್ ಉತ್ತೀರ್ಣರಾದದ್ದು | 1887 |
| ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಪ್ರಯಾಣ | 1888 |
| ಬ್ಯಾರಿಸ್ಟರರಾಗಿ ದಾಖಲಾತಿ | 1891 |
| ಮರಳಿ ಭಾರತಕ್ಕೆ ಬೊಂಬಾಯಿ, ರಾಜ್‌ಕೋಟೆಯಲ್ಲಿ ವಕೀಲಿ ವೃತ್ತಿ | 1891 |
| ದಕ್ಷಿಣ ಆಫ್ರಿಕಾಕ್ಕೆ ಹಡಗಿನಲ್ಲಿ ಪ್ರಯಾಣ | 1893 |
| ಭಾರತಕ್ಕೆ ಮರಳಿ ಬಂದು ಅದೇ ವರ್ಷ ಮರಳಿ ಆಫ್ರಿಕಾಗೆ ತೆರಳಿದರು | 1896 |
| ಬೋಯರ್ ಯುದ್ಧ ಮತ್ತು ಜೂಲು ದಂಗೆಯಲ್ಲಿ ಇಂಡಿಯನ್ ಅಂಬುಲೆನ್ಸ್ ಕೋರ್ ನೇತೃತ್ವ | 1899 ಮತ್ತು 1906 |
| ಭಾರತಕ್ಕೆ ವಾಪಸ್ಸು | 1901 |
| ಭಾರತದಲ್ಲಿ ವ್ಯಾಪಕವಾದ ಪ್ರವಾಸ, ಕಲ್ಕತ್ತದಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸಭೆಯಲ್ಲಿ ಪಾಲ್ಗೊಂಡಿದ್ದು, ಬೊಂಬಾಯಿಲ್ಲಿ ಲಾಯರ್ ಆಫೀಸ್ ಪ್ರಾರಂಭ | 1901 |
| ಭಾರತೀಯರ ಕೋರಿಕೆಯಂತೆ ದಕ್ಷಿಣ ಆಫ್ರಿಕಾಕ್ಕೆ ಪ್ರಯಾಣ | 1902 |
| ಟ್ರಾನ್ಸ್‌ವಾಲ್ ಬ್ರಿಟಿಷ್ ಇಂಡಿಯಾ ಅಸೋಸಿಯೇಷನ್ | 1903 |

ಇಂಡಿಯನ್ ಒಪಿನಿಯನ್ ಪತ್ರಿಕೆಯ ಪ್ರಾರಂಭ 1904
ಫೀನಿಕ್ಸ್ ಆಶ್ರಮ ಸ್ಥಾಪನೆ 1904
ಸೆಪ್ಟಂಬರ್ ವೀರಾಗಾಂನಲ್ಲಿ ಸಮುದ್ರ
ಪ್ರಯಾಣಿಕರ ಶೋಷಣೆಯ ವಿರುದ್ಧ
ಸತ್ಯಾಗ್ರಹ ಮಾಡುವ ಬೆದರಿಕೆ 1905
ಟ್ರಾನ್ಸ್‌ವಾಲ್‌ನ ಭಾರತೀಯ ವಲಸೆಗಾರರ
ಮೇಲೆ ಪ್ರಯೋಗಿಸಲಾಗುವ "ಏಸಿಯಾಟಿಕ್
ಆರ್ಡಿನೆನ್ಸ್ ವಿರುದ್ಧ ಚಳುವಳಿ 1906
ಬ್ರಹ್ಮಚರ್ಯ ವ್ರತ ಸ್ವೀಕಾರ 1906
ಇಂಗ್ಲೆಂಡಿಗೆ ಪ್ರಯಾಣ 1906
ಜೂನ್, ಸತ್ಯಾಗ್ರಹ ಏಷಿಯನ್ನರ ಬಲತ್ಕಾರದ
ನೋಂದಾವಣೆ (ಕರಾಳ ಕಾನೂನು) ವಿರುದ್ಧ
ಸತ್ಯಾಗ್ರಹ 1907
ಸತ್ಯಾಗ್ರಹ ನಡೆಸಿದ್ದಕ್ಕೆ ದಕ್ಷಿಣ ಆಫ್ರಿಕಾದ
ಜೋಹನ್ಸ್‌ಬರ್ಗ್‌ನಲ್ಲಿ ಪ್ರಥಮ ಜೈಲುವಾಸ 1908
ಇಂಗ್ಲೆಂಡಿಗೆ ಪ್ರಯಾಣ, ಭಾರತೀಯ
ವಲಸೆಗಾರರ ಪರವಾದಗಳು, ಸ್ತ್ರೀ ಸ್ವಾತಂತ್ರ್ಯ
ಹೋರಾಟ ಪರಿಶೀಲನೆ 1909
ಮೇ ಜೋಹಾನ್ಸ್‌ಬರ್ಗ್‌ನಲ್ಲಿ ಟಾಲ್‌ಸ್ಟಾಯ್
ಫಾರ್ಮ್ ಸ್ಥಾಪನೆ 1910
ದಕ್ಷಿಣ ಆಫ್ರಿಕಾದಲ್ಲಿ ಚಾರಿತ್ರಿಕ ಸತ್ಯಾಗ್ರಹ ಆರಂಭ 1913
ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಆಗಮನ 1914
ಮೇ ಅಹಮದಾಬಾದ್ ಬಳಿ ಸತ್ಯಾಗ್ರಹ
ಆಶ್ರಮ ಸ್ಥಾಪನೆ 1915
ಸಬರಮತಿ ಆಶ್ರಮ ಸ್ಥಾಪನೆ 1917

| | |
|---|---|
| ಫೆಬ್ರವರಿ ಅಹಮದಾಬಾದ್ ಮಿಲ್ ಕೂಲಿಗಾರರ | |
| ಪರ ಹೋರಾಟ, ಮೂರು ದಿನ ಉಪವಾಸ | |
| ಸತ್ಯಾಗ್ರಹ, ಭಾರತದಲ್ಲಿ ಇದೇ ಮೊದಲ ಉಪವಾಸ | |
| ಖೇಡಾದಲ್ಲಿ ಕರನಿರಾಕರಣೆ ಚಳುವಳಿ | 1918 |
| ಜಲಿಯನ್ ವಾಲಾಬಾಗ್ ಹತ್ಯಾಕಾಂಡ | |
| ವಿರೋಧಿಸಿ ಏಪ್ರಿಲ್ 13–14ರಂದು ಉಪವಾಸ | 1919 |
| ಯಂಗ್ ಇಂಡಿಯಾ ಮತ್ತು | |
| ನವಜೀವನ ಪತ್ರಿಕೆಗಳ ಆರಂಭ | 1919 |
| ಅಸಹಕಾರ ಚಳುವಳಿ, ಖಿಲಾಫತ್ ಚಳುವಳಿ | |
| ಅಖಿಲ ಭಾರತ ಹೋಂರೂಲ್ ಲೀಗ್ ಅಧ್ಯಕ್ಷತೆ | 1920 |
| ಖಾದಿಯ ಪಂಚೆ ಉಡುವ ನಿರ್ಧಾರ ಮತ್ತು | |
| ತುಂಡು ಉಡುಗೆ ಪ್ರಚಾರ ಆರಂಭ | 1921 |
| ಚೌರಿಚೌರಾ ಹತ್ಯಾಕಾಂಡ, ಅಸಹಕಾರ ಸತ್ಯಾಗ್ರಹ | |
| ನಿಲುಗಡೆ, ಬಾರ್ದೋಲಿಯಲ್ಲಿ ಐದು ದಿನದ | |
| ಉಪವಾಸ, ಯಂಗ್ ಇಂಡಿಯಾ | |
| ಲೇಖನಗಳಿಗಾಗಿ ರಾಜದ್ರೋಹದ ಆಪಾದನೆ | |
| ಮೇಲೆ ದಸ್ತಗಿರಿ ಭಾರತದಲ್ಲಿ ಪ್ರಥಮ ಜೈಲುವಾಸ | 1922 |
| ಫೆಬ್ರವರಿ ಯರವಾಡಾ ಜೈಲಿನಿಂದ ಬಿಡುಗಡೆ | 1924 |
| ಹಿಂದೂ ಮುಸ್ಲಿಂ ಏಕತೆಗಾಗಿ 21 ದಿನ ಉಪವಾಸ | 1924 |
| ಬೆಳಗಾವಿ ಕಾಂಗ್ರೆಸ್ ಅಧಿವೇಶನ | 1924 |
| ಚರಖಾ ಸಂಘದ ಸ್ಥಾಪನೆ | 1925 |
| ಬಾರ್ದೋಲಿ ಸತ್ಯಾಗ್ರಹ ಅನ್ಯಾಯದ ತೆರಿಗೆ ವಿರುದ್ಧ | 1928 |
| ಮೂರನೇ ಅಖಿಲ ಭಾರತ ಸತ್ಯಾಗ್ರಹ | |
| ಜನವರಿ 26 ರಾಷ್ಟ್ರದಿನವೆಂದು ಸೂಚನೆ | |
| ಉಪ್ಪಿನ ಸತ್ಯಾಗ್ರಹ ಮತ್ತು ದಂಡೀಯಾತ್ರೆ | 1930 |
| ಯೂರೋಪು ಸಂದರ್ಶನ ಮತ್ತು | |
| ದುಂಡು ಮೇಜಿನ ಪರಿಷತ್ತು ವಿಫಲ | 1931 |

| | |
|---|---|
| ಹರಿಜನರಿಗೆ ಪ್ರತ್ಯೇಕ ಚುನಾವಣೆಗಳನ್ನು | |
| ಏರ್ಪಡಿಸುವ ಬ್ರಿಟಿಷ್ ಯೋಜನೆಗಳನ್ನು | |
| ವಿರೋಧಿಸಿ ಉಪವಾಸ ಸತ್ಯಾಗ್ರಹ | |
| ಹರಿಜನ ವಾರ ಪತ್ರಿಕೆ ಆರಂಭ | |
| ಸೇವಾಗ್ರಾಮ ಆಶ್ರಮ ಸ್ಥಾಪನೆ | 1933 |
| ಕಾಂಗ್ರೆಸ್ ಪಕ್ಷಕ್ಕೆ ರಾಜೀನಾಮೆ, ಮೂರು ಸಲ | |
| ಗಾಂಧೀಜಿಯ ಕೊಲೆಯ ಪ್ರಯತ್ನಗಳು | |
| ಅಖಿಲ ಭಾರತ ಗ್ರಾಮೋದ್ಯೋಗ ಸಂಘ ಆರಂಭ | 1934 |
| ವಾರ್ಧಾ ಸಮೀಪ ಸೇವಾಗ್ರಾಮ ಆಶ್ರಮ ಆರಂಭ | 1936 |
| ನಯೀ ತಾಲೀಂ ಶಿಕ್ಷಣ ಪದ್ಧತಿ ಪ್ರಾರಂಭ | 1937 |
| "ಭಾರತ ಬಿಟ್ಟು ತೊಲಗಿ" ಚಳವಳಿ | 1942 |
| 21 ದಿನಗಳ ಉಪವಾಸ ಸತ್ಯಾಗ್ರಹ ಆರಂಭ | 1943 |
| ಫೆ. 22 ಕಸ್ತೂರಬಾ ಮರಣ, 23ರಂದು | |
| ಅಗಾಖಾನ್ ಅರಮನೆ ಆವರಣದಲ್ಲಿ ದಹನ | 1944 |
| ಕೊನೆಯ ಬಾರಿಗೆ ಆಗಾಖಾನ್ | |
| ಅರಮನೆಯಲ್ಲಿ ಸೆರೆವಾಸ | |
| ಕ್ಯಾಬಿನೆಟ್ ಮಿಷನ್, ಶಿಮ್ಲಾ ಸಮ್ಮೇಳನ | 1945 |
| ಕ್ಯಾಬಿನೆಟ್ ಅಂಗೀಕಾರ, ನೌಖಾಲಿ ಶಾಂತಿ | |
| ಪಾದಯಾತ್ರೆ | 1946 |
| ಭಾರತಕ್ಕೆ ಸ್ವಾತಂತ್ರ್ಯ ಮತ್ತು ದೇಶ ವಿಭಜನೆ | 1947 |
| ದೆಹಲಿಯಲ್ಲಿ ಕೋಮುವಾರು ಸೌಹಾರ್ದಕ್ಕಾಗಿ | |
| ಕೊನೆಯ ಉಪವಾಸ | 1948 |
| ಹಂತಕನ ಗುಂಡೇಟಿಗೆ ಬಲಿ | 30-1-1948 |
| ರಾಜ್‌ಘಾಟಲ್ಲಿ ದಹನ | 31-1-1948 |

# ಕಸ್ತೂರ್‌ಬಾ ಅವರ ಜೀವನ ಘಟನಾವಳಿಗಳು

| | |
|---|---|
| ಪೋರಬಂದರದಲ್ಲಿ ಜನನ | 11.04.1869 |
| ಗಾಂಧಿ ಅವರೊಡನೆ ವಿವಾಹ | 1888 |
| ದಕ್ಷಿಣ ಆಫ್ರಿಕಾಕ್ಕೆ ಹಡಗಿನಲ್ಲಿ ಪ್ರಯಾಣ | 1896 |
| ಗಾಂಧಿ ಅವರ ಮೇಲೆ ಆಕ್ರಮಣ ಖಂಡನೆ | 1897 |
| ಜೋಹನ್ಸ್‌ಬರ್ಗ್‌ನಲ್ಲಿ ಪ್ಲೇಗ್ ಪೀಡಿತರ ಸೇವೆ | 1904 |
| ಜೋಹನ್ಸ್‌ಬರ್ಗ್‌ನಲ್ಲಿ ಭಾರತೀಯ ಮಹಿಳೆಯರಿಗೆ ಸಂದೇಶ | 1909 |
| ಗುಜರಾತಿನ ಕೊಚಬರ್‍ಾದಲ್ಲಿ ಆಶ್ರಮ ಸ್ಥಾಪನೆ | 25.05.1915 |
| ಗಾಂಧೀಜಿ ಅವರೊಡನೆ ಭಾರತದಾದ್ಯಂತ ಪ್ರವಾಸ | 1916 |
| ಗಾಂಧೀಜಿ ಅವರೊಡನೆ ಚಂಪಾರಣ್ಯ ಚಳುವಳಿಯಲ್ಲಿ ಭಾಗಿ | 1917 |
| ಸಾಬರಮತಿ ಆಶ್ರಮದ ನಿರ್ವಹಣೆಯ ಜವಾಬ್ದಾರೆ | 1920 |
| ಗಾಂಧೀಜಿ ಅವರೊಡನೆ ವಿದೇಶಿ ವಸ್ತ್ರಗಳ ನಾಶ | 1921 |
| ವಿದೇಶಿ ವಸ್ತ್ರ ಬಹಿಷ್ಕಾರ ಮತ್ತು ನೂಲು ನೇಯಲು ಕರೆ | 23.03.1922 |
| ಅಸಹಕಾರ ಚಳುವಳಿಯಲ್ಲಿ ಭಾಗಿ | 1930 |
| ಭಾರತೀಯ ಮಹಿಳೆಯರಿಂದ ಕಸ್ತೂರ್‌ಬಾಗೆ ಹಣ ನೀಡಿಕೆ | 1931 |
| ಅಸಹಕಾರ ಚಳುವಳಿಗಾಗಿ 6 ವಾರಗಳ ಸೆರೆಮನೆ ವಾಸ | 1932 |
| ಬ್ರಿಟಿಷರಿಂದ ಬಂಧನ ಮತ್ತೆ ಸೆರೆವಾಸ | 1933 |

| | |
|---|---|
| ಸಾಬರಮತಿ ಆಶ್ರಮ ಮುತ್ತಿಗೆ | 1933 |
| ಗಾಂಧಿಯವರೊಡನೆ ಪೂನಾದ ಮುನಿಸಿಪಲ್ ಹಾಲ್‌ಗೆ ಕಾರಿನಲ್ಲಿ ಪ್ರಯಾಣಿಸುತ್ತಿದ್ದಾಗ ನಾಡಬಾಂಬ್ ಎಸೆತ | 1934 |
| ಸೇವಾಗ್ರಾಮ ಆಶ್ರಮ ಸ್ಥಾಪನೆ | 1936 |
| ರಾಜ್‌ಕೋಟ್‌ನಲ್ಲಿ ಠಾಕೂರ ದಬ್ಬಾಳಿಕೆ ವಿರುದ್ಧ ಮಹಿಳಾ ಹೋರಾಟಗಾರರಿಗೆ ನೆರವು | 1939 |
| ಬಂಧನ, ಕತ್ತಲ ಜೈಲಿನಲ್ಲಿ ಸೆರೆಮನೆವಾಸ | 03.02.1939 |
| ಕಸ್ತೂರ್‌ಬಾ ಕುರಿತು ಹರಿಜನ ಪತ್ರಿಕೆಯಲ್ಲಿ ಗಾಂಧೀಜಿ ಅವರ ಲೇಖನ ಪ್ರಕಟ | 06.02.1939 |
| ಕಾಂಗ್ರೇಸ್ ಅಧಿವೇಶನಕ್ಕೆ ಗಾಂಧೀಜಿ ಅವರೊಡನೆ ಮುಂಬೈಗೆ ಪಯಣ | 1942 |
| ಶಿವಾಜಿ ಪಾರ್ಕ್‌ನಲ್ಲಿ ಬೃಹತ್ ಸಾರ್ವಜನಿಕ ಸಮಾವೇಶದಲ್ಲಿ ಮಾಡಿದ ಭಾಷಣಕ್ಕೆ ಬಂಧನ | 09.08.1942 |
| ಸೆರೆಮನೆಯಲ್ಲಿ 2 ಬಾರಿ ಹೃದಯಾಘಾತ | 1944 |
| ಸೆರೆಮನೆಯಲ್ಲಿ ತಮ್ಮ 74ನೇ ವಯಸ್ಸಿನಲ್ಲಿ ನಿಧನ | 22.02.1944 |

# ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಪ್ರಕಟಣೆಗಳು

| | | |
|---|---|---|
| 1. | ಆರೋಗ್ಯ ರಹಸ್ಯ | 10–00 |
| 2. | ಕರ್ನಾಟಕದಲ್ಲಿ ಗಾಂಧೀ | 5–00 |
| 3. | ರಾಮನಾಮ | 6–00 |
| 4. | ಗಾಂಧೀ ಬಳಗದ ವಿದೇಶಿಯರು | 40–00 |
| 5. | ಆರೋಗ್ಯ | 8–00 |
| 6. | ಪ್ರಾರ್ಥನೆ | 40–00 |
| 7. | ಸತ್ಯಾಗ್ರಹ | 8–00 |
| 8. | ಮಹಿಳೆಯರಿಗಾಗಿ | 8–00 |
| 9. | ಪಂಚಾಯತ್ ರಾಜ್ | 12–00 |
| 10. | ಆದರ್ಶಗಳು | 12–00 |
| 11. | ನಮ್ಮ ಗಾಂಧೀ ತಾತ | 22–00 |
| 12. | ದೇವನಗರಿಯಲ್ಲಿ ಗಾಂಧೀ ಧ್ವನಿ | 2–00 |
| 13. | ನಮ್ಮ ಗಾಂಧೀ ತಾತ | 15–00 |
| 14. | ಹೋರಾಟ ಶ್ರೀ | 40–00 |
| 15. | ಮಹಾತ್ಮ ಗಾಂಧೀಜಿ ಅವರ ಜೀವನ ಮೈಲಿಗಲ್ಲುಗಳು | 3–00 |
| 16. | ಗಾಂಧೀಜಿ ಜೀವನ ಚರಿತ್ರೆ | 25–00 |
| 17. | ಕುವೆಂಪು ಕಂಡ ಗಾಂಧೀ | 25–00 |
| 18. | ಉಪ್ಪಿನ ಸತ್ಯಾಗ್ರಹ | 5–00 |
| 19. | ಹಿಂದ್ ಸ್ವರಾಜ್ | 50–00 |
| 20. | ಗಾಂಧೀ ಮತ್ತು ಆಧ್ಯಾತ್ಮಿಕ ಜೀವನ | 25–00 |
| 21. | ನನ್ನ ಕನಸಿನ ಭಾರತ | 30–00 |
| 22. | ಹಿಂದೂ ಧರ್ಮ | 25–00 |
| 23. | ಮಹಿಳೆಯರು | 63–00 |
| 24. | ಸ್ವಾತಂತ್ರ್ಯ | 42–00 |
| 25. | ಅಸ್ಪೃಶ್ಯತೆ | 45–00 |
| 26. | ಒಳ್ಳೆಯ ಜೀವನ | 60–00 |
| 27. | ಗಾಂಧೀ ಮತ್ತು ಕರ್ನಾಟಕ | 200–00 |
| 28. | ಸತ್ಯ | 38–00 |

| | | |
|---|---|---|
| 29. | ವಿದ್ಯಾರ್ಥಿಗಳಿಗಾಗಿ | 30-00 |
| 30. | ಸರ್ವೋದಯ | 30-00 |
| 31. | ಖಾದಿ ಗ್ರಾಮೋದ್ಯೋಗ | 58-00 |
| 32. | ನನ್ನ ಬಾಲ್ಯದ ನೆನಪುಗಳು | 52-00 |
| 33. | ಗ್ರಾಮರಾಜ್ಯ ಆಡಳಿತ | 5-00 |
| 34. | ನನ್ನ ಕನಸಿನ ಸ್ವರಾಜ್ಯ | 42-00 |
| 35. | ಹಾಸ್ಯ ಮತ್ತು ಗಾಂಧೀ | 44-00 |
| 36. | ನನ್ನ ಆದರ್ಶಗ್ರಾಮ | 5-00 |
| 37. | ಮಹಾತ್ಮ ಗಾಂಧೀ ವಿಚಾರಗಳು ಹಾಗೂ ವ್ಯವಸ್ಥಾಪನ ಪದ್ಧತಿ | 48-00 |
| 38. | ಸತ್ಯಾಗ್ರಹಿ | 40-00 |
| 39. | ಗ್ರಾಮದಾನ ಗ್ರಾಮ ಸ್ವರಾಜ್ಯ | 25-00 |
| 40. | ಗಾಂಧೀಜಿಯವರ ಪ್ರಾತ: ಸಾಯಂ ಪ್ರಾರ್ಥನೆ ಮತ್ತು ಭಜನೆ | |
| 41. | ಉಪ್ಪಿನ ಸತ್ಯಾಗ್ರಹ ಮತ್ತು ಮೈಲಾರ ಮಹಾದೇವ | 5-00 |
| 42. | ಸತ್ಯಾಗ್ರಹ | 5-00 |
| 43. | ಹಿಂದ್ ಸ್ವರಾಜ್ | 5-00 |
| 44. | ಆರೋಗ್ಯ | 5-00 |
| 45. | ಮಹಾತ್ಮ ಗಾಂಧಿ ಪ್ರಸ್ತುತತೆ | 10-00 |
| 46. | ಬಹುರೂಪಿ ಗಾಂಧಿ | 35-00 |
| 47. | ನಂದಿ ಗಿರಿಧಾಮದಲ್ಲಿ ಮಹಾತ್ಮ ಗಾಂಧಿ | 30-00 |
| 48. | ಕೃತಯುಗಿ ವಿನೋಬಾ ಭಾವೆ | 15-00 |
| 49. | ಮೋಹನ ತರಂಗ | 40-00 |
| 50. | ನಮ್ಮ ಗಾಂಧಿ ತಾತ | 22-00 |
| 51. | ಗೀತಾ ಪ್ರವಚನ | 80-00 |
| 52. | ಜೆ.ಪಿ. ಜೀವನ ಹಾದಿ | 45-00 |
| 53. | ಗಣ್ಯರು ಕಂಡಂತೆ ಗಾಂಧಿ | 20.0 |
| 54. | ಗೀತಾಮಾತೆ | 80.00 |
| 55. | ಲೋಕ ಚಿಂತಕರು | 145.00 |

| | | |
|---|---|---|
| 56. | ಕರ್ನಾಟಕದ ಕಸ್ತೂರ್‌ಬಾ ಯಶೋಧರಮ್ಮ ದಾಸಪ್ಪ | 38.00 |
| 57. | ಮಹದೇವ ದೇಸಾಯಿ | 63.00 |
| 58. | ಸಮಾಜವಾದ : ಗಾಂಧೀ ದೃಷ್ಟಿಕೋನ | 15.00 |
| 59. | ಮಹಾತ್ಮ ಗಾಂಧಿ ಮತ್ತು ಆಧ್ಯಾತ್ಮಿಕ ರಾಜಕಾರಣ | 28.00 |
| 60. | ಗಾಂಧೀ ಬಳಗದ ವಿದೇಶಿಯರು | 89.00 |
| 61. | ಮಹಾತ್ಮ ಗಾಂಧೀ ಮತ್ತು ಸ್ವಚ್ಛ ಭಾರತ | 33.00 |
| 62. | ಮಹಾತ್ಮ ಗಂಧೀಜಿ ಅವರ ಶೈಕ್ಷಣಿಕ ಸಿದ್ಧಾಂತ | 80.00 |
| 63. | ಹುಕ್ಕೇರಿಕರ ರಾಮರಾಯರು | 110.00 |
| 64. | ಮಹಿಳೆಯರು | 63.00 |
| 65. | ನನ್ನ ಬಾಲ್ಯದ ನೆನಪುಗಳು | 52.00 |
| 66. | ನಯೀ ತಾಲೀಂ | 58.00 |
| 67. | ಚರಕ ಸಂಹಿತೆ | 68.00 |
| 68. | ಸ್ವಚ್ಛ ಭಾರತಿ | 82.00 |
| 69. | ನಂದಿ ಗಿರಿಧಾಮದಲ್ಲಿ ಮಹಾತ್ಮ ಗಾಂಧಿ | 66.00 |
| 70. | ಗಾಂಧಿಯೊಳಗಿನ ಪತ್ರಕರ್ತ ಮರು ವೀಕ್ಷಣೆ | 68.00 |
| 71. | ಅಂದಿಗೂ-ಇಂದಿಗೂ ಪ್ರಸ್ತುತ ಗಾಂಧೀಜಿ | 94.00 |
| 72. | ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ | 92.00 |
| 73. | ಆಧ್ಯಾತ್ಮಿಕ ಸುಸ್ಥಿರತೆ | 72.00 |
| 74. | Nayi Talim | 58.00 |
| 75. | Temple & Mosque | 10-00 |
| 76. | Rastrapita Mahatma Gandhi | 25-00 |
| 77. | Swarajya of My Dreams | 5-00 |
| 78. | Gandhi My Grand Father | 5-00 |
| 79. | Grand Pa Gandhi | 5-00 |
| 80. | Relevance of Gandhi | 20-00 |
| 81. | Vinoba Sage of the Age | 20.00 |
| 82. | Kasturba | 33.00 |
| 83. | Mahatma Gandhi and his Foreign Associates | 87.00 |

## ಕರ್ನಾಟಕದಲ್ಲಿ ಗಾಂಧೀಜಿ ಭೇಟಿ ನೀಡಿದ ಸ್ಥಳಗಳು

| | |
|---|---|
| ● ಬೆಂಗಳೂರು | ದಿ. 08–05–1915 |
| ● ಬೆಳಗಾವಿ | ದಿ. 27–04–1916 ರಿಂದ<br>ದಿ. 01–05–1916 ರವರೆಗೆ |
| ● ಬಿಜಾಪುರ (ವಿಜಯಪುರ) | ದಿ. 05–05–1918 ರಿಂದ<br>ದಿ. 06–05–1918 ರವರೆಗೆ |
| ● ಕಾಸರಗೋಡು | ದಿ. 19–08–1920 |
| ● ಮಂಗಳೂರು | ದಿ. 20–08–1920 |
| ● ಬೆಂಗಳೂರು | ದಿ. 21–08–1920 |
| ● ನಿಪ್ಪಾಣಿ, ಚಿಕ್ಕೋಡಿ, ಹುಕ್ಕೇರಿ<br>ಸಂಕೇಶ್ವರ, ಬೆಳಗಾವಿ | ದಿ. 08–11–1920 |
| ● ಬೆಳಗಾವಿ ಶಹಾಪುರ<br>ಖಾನಾಪುರ, ನಂದಗಢ<br>ಹಳ್ಯಾಳ | ದಿ. 09–11–1920 |
| ● ಧಾರವಾಡ | ದಿ. 10–11–1920 |
| ● ಹುಬ್ಬಳ್ಳಿ, ಗದಗ | ದಿ. 11–11–1920 |
| ● ಸಾಂಗಲಿ | ದಿ. 12–11–1920 |
| ● ಬಾಗಲಕೋಟೆ | ದಿ. 27–05–1921 |
| ● ಬಿಜಾಪುರ (ವಿಜಯಪುರ), ಸೊಲ್ಲಾಪುರ | ದಿ. 28–05–1921 |
| ● ಬಳ್ಳಾರಿ | ದಿ. 30–09–1921 |
| ● ಬೆಳಗಾವಿ | ದಿ. 21–12–1924 ರಿಂದ<br>ದಿ. 30–12–1924 ರವರೆಗೆ |
| ● ಗುಲ್ಬರ್ಗಾ | ದಿ. 22–02–1927 ರಿಂದ<br>ದಿ. 23–02–1927 ರವರೆಗೆ |
| ● ನಿಪ್ಪಾಣಿ | ದಿ. 27–03–1927 ರಿಂದ<br>ದಿ. 31–03–1927 ರವರೆಗೆ |

| | |
|---|---|
| ● ಬೆಳಗಾವಿ | ದಿ. 01–04–1927<br>ದಿ. 18–04–1027 ರಿಂದ<br>ದಿ. 19–04–1927ರವರೆಗೆ |
| ● ಬೆಂಗಳೂರು | ದಿ. 06–06–1927 ರಿಂದ<br>ದಿ. 13–07–1927 ರವರೆಗೆ |
| ● ತುಮಕೂರು | ದಿ. 14–07–1927 |
| ● ತುಮಕೂರು, ಮಧುಗಿರಿ | ದಿ. 15–07–1927 |
| ● ತುಮಕೂರು | ದಿ. 16–07–1927 |
| ● ಬೆಂಗಳೂರು | ದಿ. 17–07–1927 |
| ● ಬೆಂಗಳೂರು | ದಿ. 18–07–1927 |
| ● ಮೈಸೂರು | ದಿ. 19–07–1927 ರಿಂದ<br>ದಿ. 21–07–1927 ರವರೆಗೆ |
| ● ಕೃಷ್ಣರಾಜಸಾಗರ, ಯಡತೊರೆ<br>ಶ್ರೀರಂಗಪಟ್ಟಣ, ದರಿಯಾದೌಲತ್ | ದಿ. 22–07–1927 |
| ● ಮೈಸೂರು | ದಿ. 23–07–1927 |
| ● ಬೆಂಗಳೂರು | ದಿ. 24–07–1927 ರಿಂದ<br>ದಿ. 30–07–1927 ರವರೆಗೆ |
| ● ಕೊಲ್ಸ್‌ಪೇಟೆ (ರಾಮನಗರ) | ದಿ. 31–07–1927 |
| ● ಕಾನಕಾನಹಳ್ಳಿ (ಕನಕಪುರ) | |
| ● ಬೆಂಗಳೂರು | ದಿ. 01–08–1927 |
| ● ಅರಸೀಕರೆ, ಹಾಸನ | ದಿ. 02–08–1927 |
| ● ಹಾಸನ | ದಿ. 03–08–1927 |
| ● ಹಾಸನ, ಹೊಳೆನರಸೀಪುರ | ದಿ. 04–08–1927 |
| ● ಬೆಂಗಳೂರು | ದಿ. 05–08–1927 ರಿಂದ<br>ದಿ. 11–08–1927 ರವರೆಗೆ |
| ● ದಾವಣಗೆರೆ | ದಿ. 12–08–1927 |

| | |
|---|---|
| ● ಹರಿಹರ, ಹೊನ್ನಾಳಿ<br>ಮಲೆಬೆನ್ನೂರು | ದಿ. 13–08–1927 |
| ● ಶಿವಮೊಗ್ಗ | ದಿ. 14–08–1927 ರಿಂದ<br>ದಿ. 15–08–1927 ರವರೆಗೆ |
| ● ಆಯನೂರು, ಕುಂಸಿ, ಸಾಗರ<br>ಶಿವಮೊಗ್ಗ | ದಿ. 16–08–1927 |
| ● ಶಿವಮೊಗ್ಗ, ತೀರ್ಥಹಳ್ಳಿ<br>ಮಂದಗದ್ದೆ, ರಾಜನೂರು | ದಿ. 17–08–1927 |
| ● ಭದ್ರಾವತಿ, ತರೀಕೆರೆ | ದಿ. 18–08–1927 |
| ● ಬೀರೂರು, ಕಡೂರು | |
| ● ಚಿಕ್ಕಮಗಳೂರು | ದಿ. 19–08–1927 |
| ● ಬೇಲೂರು, ಹಳೇಬೀಡು | ದಿ. 20–08–1927 |
| ● ಅರಸೀಕೆರೆ | |
| ● ತಿಪಟೂರು | ದಿ. 21–08–1927 |
| ● ಬೆಂಗಳೂರು | ದಿ. 22–08–1927 |
| ● ಬೆಂಗಳೂರು | ದಿ. 23–08–1927 |
| ● ಹೊಸೂರು, ಸೂಳಗಿರಿ<br>ಕೃಷ್ಣಗಿರಿ | ದಿ. 24–08–1927 |
| ● ಬೆಂಗಳೂರು | ದಿ. 25–08–1927 ರಿಂದ<br>ದಿ. 30–08–1927 ರವರೆಗೆ |
| ● ಹಿಂದೂಪುರ, ವಿಧುರಾಶ್ವತ್ಥ<br>ಗೌರಿಬಿದನೂರು<br>ದೊಡ್ಡಬಳ್ಳಾಪುರ, ತುಮಕೂರು<br>ತ್ಯಾಮಗೊಂಡ್ಲು, ನೆಲಮಂಗಲ<br>ಬೆಂಗಳೂರು, ಮೈಸೂರು | ದಿ. 04–01–1934 |
| ● ತಗಡೂರು, ಬದನವಾಳು<br>ನಂಜನಗೂಡು, ಮೈಸೂರು | ದಿ. 05–01–1934 |

- ಮಂಡ್ಯ, ಚನ್ನಪಟ್ಟಣ, ರಾಮನಗರ ಕನಕಪುರ, ಬಿಡದಿ, ಕೆಂಗೇರಿ — ದಿ. 06-01-1934
- ಬೆಂಗಳೂರು — ದಿ. 07-01-1934 ರಿಂದ ದಿ. 09-01-1934 ರವರೆಗೆ
- ಪೊನ್ನಂಪೇಟೆ, ಹುದಿಕೇರಿ — ದಿ. 22-02-1934
- ವಿರಾಜಪೇಟೆ, ಬೆಳ್ಳೂರು — ದಿ. 23-02-1934
- ಸೋಮವಾರ ಪೇಟೆ
- ಗುಂಡುಕಟ್ಟೆ
- ಮಡಿಕೇರಿ, ಸಂಪಾಜೆ, ಸುಳ್ಯ — ದಿ. 24-02-1934
- ಪುತ್ತೂರು, ಉಪ್ಪಿನಂಗಡಿ
- ವಿಠಲಗಬ್ಬ, ಕಲ್ಲಡ್ಕ, ಪಾಣೆ
- ಮಂಗಳೂರು, ಬಂಟ್ವಾಳ
- ಮಂಗಳೂರು
- ಮಂಗಳೂರು, ಗುರುಪುರ, ಬಜ್ಪೆ ಯಕ್ಕೂರು, ಕಟೀಲು, ಕಿನ್ನಗೋಳಿ ಮೂಲ್ಕಿ, ಪಡುಬಿದ್ರಿ, ಕಾಟಪಾಡಿ ಗುರುಪುರ, ಉದ್ಯಾವರ ಉಡುಪಿ, ಬ್ರಹ್ಮಾವರ, ಸಿದ್ದಾಪುರ — ದಿ. 25-02-1934
- ಕುಂದಾಪುರ — ದಿ. 26-02-1934
- ಕುಂದಾಪುರ, ಭಟ್ಕಳ ಹೊನ್ನಾವರ, ಕಾರವಾರ — ದಿ. 27-02-1934
- ಕಾರವಾರ, ಕುಮುಟಾ, ಅಂಕೋಲ ಚಂದಿಯಾ, ಶಿರಸಿ — ದಿ. 28-02-1934
- ಶಿರಸಿ, ಸಿದ್ದಾಪುರ, ದಾಸನಕೊಪ್ಪ ಇಸಲೂರು, ಏಕಾಂಬಿ, ಆಲೂರು ಬ್ಯಾಡಗಿ, ಮೋಟೆಬೆನ್ನೂರು — ದಿ. 01-03-1934

| | |
|---|---|
| ● ಹಾವೇರಿ, ರಾಣೆಬೆನ್ನೂರು, ಹರಿಹರ ದಾವಣಗೆರೆ, ಹರಪನಹಳ್ಳಿ, ಕೊಟ್ಟೂರು ಕೂಡ್ಲಿಗಿ, ದುಗ್ಗಾವತಿ, ಕಣಿವೆಹಳ್ಳಿ ಸೊಂಡೂರು | ದಿ. 02-03-1934 |
| ● ಸೊಂಡೂರು, ಬಳ್ಳಾರಿ, ಹೊಸಪೇಟೆ ಖಾನಾಪುರ, ಗದಗ, ಜಕ್ಕಲಿ, ಹುಬ್ಬಳ್ಳಿ | ದಿ. 03-03-1934 |
| ● ಹುಬ್ಬಳ್ಳಿ, ಧಾರವಾಡ, ಅಮ್ಮಿನಭಾವಿ ಹಿರೇಉಳ್ಳಗೇರಿ, ಬೈಲಹೊಂಗಲ ಉಪ್ಪಿನ, ಬೆಟಗೇರಿ, ಸೌಂದತ್ತಿ ಸಂಪಗಾಂವ್, ಹೊಸೂರು, ಬೆಳಗಾವಿ | ದಿ. 04-03-1934 |
| ● ಬೆಳಗಾವಿ | ದಿ. 05-03-1934 |
| ● ಬೆಳಗಾವಿ | ದಿ. 06-03-1934 |
| ● ಬೆಳಗಾವಿ, ಯಮಕನಮರಡಿ ಹುಕ್ಕೇರಿ, ಗೋಕಾಕ, ಸಂಕೇಶ್ವರ ನವಲೀಹಾಳ, ಚಿಕ್ಕೋಡಿ, ಅಂಕಲಿ | ದಿ. 07-03-1934 |
| ● ಶೆಡಬಾಳ, ಬನಹಟ್ಟಿ, ಅಥಣಿ ಬಿಜಾಪುರ (ವಿಜಯಪುರ), ತಿಕೋಟ, ತೊರವಿ ಇಳಕಲ್ | ದಿ. 08-03-1934 |
| ● ನಂದಿ ಬೆಟ್ಟ | 10-05-1936 ರಿಂದ 30-05-1936 ರವರೆಗೆ |
| ● ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ಚಿಂತಾಮಣಿ ಕೋಲಾರ, ಬಂಗಾರ ಪೇಟೆ, ಕೆ. ಜಿ. ಎಫ್ | 31-05-1936 |
| ● ಬೆಂಗಳೂರು | 01-06-1936 ರಿಂದ 12-06-1936 ರವರೆಗೆ |
| ● ಬೆಳಗಾವಿ ಜಿಲ್ಲೆಯ ಹುದಲಿ | 16-04-1937 ರಿಂದ 21-04-1937ರವರೆಗೆ |

## ಏಕಾದಶ ವ್ರತಗಳು

| | |
|---|---|
| ಸತ್ಯ | **Truth** |
| ಅಹಿಂಸೆ | **Ahimsa or Love** |
| ಅಸ್ತೇಯ (ಕದಿಯದಿರುವುದು) | **Non-Stealing** |
| ಬ್ರಹ್ಮಚರ್ಯ | **Brahmacharya or Chastity** |
| ಅಸಂಗ್ರಹ (ಅಪರಿಗ್ರಹ) | **Non-Possession** |
| ಶರೀರ ಶ್ರಮ | **Physical Labour** |
| ಅಸ್ವಾದ (ನಾಲಿಗೆ ಚಪಲ) | **Control on the Palate** |
| ಸರ್ವತ್ರ ಭಯವರ್ಜನ (ಅಭಯ) | **Fearlessness** |
| ಸರ್ವಧರ್ಮ ಸಮಾನತ್ವ | **Equality of Religion** |
| ಸ್ವದೇಶಿ | **Swadeshi** |
| ಸ್ಪರ್ಶ ಭಾವನೆ (ಅಸ್ಪೃಶ್ಯತಾ ನಿವಾರಣೆ) | **Removal of Untouchability** |

---

## ಏಳು ಸಾಮಾಜಿಕ ಪಾತಕಗಳು Seven Social Sins

| | |
|---|---|
| ತತ್ವರಹಿತ ರಾಜಕಾರಣ | **Politics without Principles** |
| ದುಡಿಮೆ ಇಲ್ಲದ ಸಂಪತ್ತು | **Wealth without Work** |
| ಆತ್ಮಸಾಕ್ಷಿ ಇಲ್ಲದ ಸಂತೋಷ | **Pleasure without Conscience** |
| ಚಾರಿತ್ರ್ಯವಿಲ್ಲದ ಶಿಕ್ಷಣ | **Education without Character** |
| ನೀತಿ ಇಲ್ಲದ ವ್ಯಾಪಾರ | **Commerce without Morality** |
| ಮಾನವೀಯತೆ ಇಲ್ಲದ ವಿಜ್ಞಾನ | **Science without Humanity** |
| ತ್ಯಾಗ ಇಲ್ಲದ ಪೂಜೆ | **Worship without Sacrifice** |

– ಮಹಾತ್ಮ ಗಾಂಧೀಜಿ

## ಹದಿನೆಂಟು ರಚನಾತ್ಮಕ ಕಾರ್ಯಗಳು
## 18 CONSTRUCTIVE PROGRAMMES

| | |
|---|---|
| ಮತೀಯ ಐಕ್ಯತೆ | Communal Unity |
| ಅಸ್ಪೃಶ್ಯತಾ ನಿವಾರಣೆ | Removal of Untouchability |
| ಪಾನನಿರೋಧ | Prohibition |
| ಖಾದಿ | Khadi |
| ಇತರೆ ಗ್ರಾಮೋದ್ಯೋಗ | Other village industries |
| ಗ್ರಾಮ ನೈರ್ಮಲ್ಯ | Village Sanitation |
| ಮೂಲ ಶಿಕ್ಷಣ | Basic Education |
| ವಯಸ್ಕರ ಶಿಕ್ಷಣ | Adult Education |
| ಮಹಿಳಾ ಸಬಲೀಕರಣ | Women Empowerment |
| ಆರೋಗ್ಯ ಮತ್ತು ಶುಚಿತ್ವ ಶಿಕ್ಷಣ | Hygiene & Health Education |
| ಪ್ರಾದೇಶಿಕ ಭಾಷೆ | Provincial Languages |
| ರಾಷ್ಟ್ರಭಾಷೆ | National Language |
| ಆರ್ಥಿಕ ಸಮಾನತೆ | Economic Equality |
| ರೈತರ ಸಬಲೀಕರಣ | Empowerment of Farmers |
| ಕಾರ್ಮಿಕರ ಸಬಲೀಕರಣ | Empowerment of Labourers |
| ಆದಿವಾಸಿ ಸಬಲೀಕರಣ | Tribal Empowerment |
| ಕುಷ್ಠರೋಗ ನಿರ್ಮೂಲನೆ | Cure of Lepracy |
| ವಿದ್ಯಾರ್ಥಿ | Students |

'ಕವನಗಳಲ್ಲಿ ಮೂಡಿದ ಗಾಂಧಿ' ಸಂಕಲನದಲ್ಲಿನ ಒಂದೊಂದು ಕವಿತೆಯಲ್ಲೂ ಗಾಂಧಿ ಕುರಿತ ಪ್ರೀತಿ, ಅಭಿಮಾನ, ಗೌರವ ಉಕ್ಕಿ ಹರಿದಿದೆ. ಗಾಂಧಿಯನ್ನು ಮಾನವತೆಯ ಆದರ್ಶ ಎಂದು ಭಾವಿಸಲಾಗಿದೆ. ಗಾಂಧಿ ಚಿಂತನೆಗಳು ಇಂದಿಗೂ ಪ್ರಸ್ತುತ ಎಂದು ನಂಬಲಾಗಿದೆ. ಗಾಂಧಿ ನಡೆದ ದಾರಿಯಲ್ಲಿ ಕ್ರಮಿಸಬೇಕೆನ್ನುವ ಸಂಕಲ್ಪವಿದೆ. ಗಾಂಧಿ ಹಂತಕನ ಬಗೆಗೆ ಇರುವ ಸಿಟ್ಟನ್ನು ಹೊರಗೆ ಹಾಕಲಾಗಿದೆ. ಗಾಂಧಿ ಪ್ರೀತಿಯ ಅಸ್ತ್ರಗಳಾಗಿ ಸತ್ಯ, ಶಾಂತಿ, ತ್ಯಾಗ, ಕರುಣೆ, ಅಹಿಂಸೆಯನ್ನು ಪ್ರಯೋಗ ಮಾಡಿದ ಬಗೆಗೆ ಮೆಚ್ಚುಗೆಯನ್ನು ಸೂಚಿಸಿರುವುದಲ್ಲದೆ, ಅವುಗಳನ್ನು ತಮ್ಮದಾಗಿ ಮಾಡಿಕೊಳ್ಳಬೇಕೆನ್ನುವ ಆಸಕ್ತಿಯಿದೆ. ಇಂಥದೊಂದು ಅಪರೂಪದ ಪ್ರಯತ್ನದಿಂದ ಮಹಾತ್ಮ ಗಾಂಧಿಗೆ ಮಹಾಗೌರವವನ್ನು ಸಲ್ಲಿಸುತ್ತಿರುವುದಕ್ಕಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯನ್ನು, ಅದರ ಗೌರವ ಕಾರ್ಯದರ್ಶಿಗಳೂ ಸಂಕಲನದ ಪ್ರಧಾನ ಸಂಪಾದಕರೂ ಆದ ಇಂದಿರಾ ಕೃಷ್ಣಪ್ಪ ಅವರನ್ನು ಅಭಿನಂದಿಸುತ್ತೇನೆ.

ಡಾ. ಬೈರಮಂಗಲ ರಾಮೇಗೌಡ

ಮಹಾತ್ಮಾಜಿ ಅವರನ್ನು ಕನ್ನಡದ ಕವಿಗಳು ಅವರ ಕವನಗಳ ಮುಖಾಂತರ ಹೇಗೆ ಕಂಡಿದ್ದಾರೆ ಎಂಬ ಚಿತ್ರಣ, ಈ ಕವನ ಸಂಕಲನ ಕಟ್ಟಿಕೊಡುತ್ತದೆ. ಕನ್ನಡ ಜಾನಪದ, ಲಾವಣಿಯಿಂದ ಮೊದಲ್ಗೊಂಡು ಈ ತಹಲ್‌ವರೆಗಿನ ಅಂದರೆ ಸುಮಾರು 100 ವರ್ಷಗಳಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರವು ಗಾಂಧೀಜಿ ಅವರನ್ನು ದರ್ಶಿಸಿದ್ದ ವಿಹಂಗಮ ನೋಟವನ್ನು ಈ ಕವನ ಸಂಕಲನ ಅನಾವರಣ ಮಾಡುತ್ತದೆ. ಜಗತ್ತಿನ ಶಾಂತಿದೂತ, ವಿಶ್ವವಂದ್ಯ ಗಾಂಧಿಯನ್ನು ಕನ್ನಡ ಕಾವ್ಯಲೋಕ ತನ್ನೊಳಗೆ ಮೇಳೈಸಿಕೊಂಡ ವಿಹಂಗಮ ನೋಟವನ್ನು ಈ ಕೃತಿ ಕೊಡುವಂತೆ ಮಾಡಿರುವುದಕ್ಕೆ ಶ್ರೀಮತಿ ಇಂದಿರಾ ಕೃಷ್ಣಪ್ಪ ಅವರಿಗೆ ನಾನು ಅನಂತ ಧನ್ಯವಾದಗಳನ್ನು ತಿಳಿಸುತ್ತೇನೆ.

ನಾಡೋಜ ಡಾ. ವೂಡೇ ಪಿ. ಕೃಷ್ಣ

ನಿರಂತರವಾಗಿ ಎರಡು ವರ್ಷ ಕನ್ನಡದ ಕವನಗಳನ್ನು ಅರಸುತ್ತಾ ಸಾಗಿದೆ. ಆಗ ದೊರಕಿದ ಗಾಂಧೀಜಿ ಅವರ ಕವನಗಳನ್ನು ಒಗ್ಗೂಡಿಸಿದಾಗ, "ಕವನಗಳಲ್ಲಿ ಮೂಡಿದ ಗಾಂಧಿ" ಕಾವ್ಯಗುಚ್ಛ ಹೊರಬರಲು ಸಾಧ್ಯವಾಯಿತು. ಬಹಳ ಸಂತೋಷದ ವಿಷಯವೆಂದರೆ, ಕನ್ನಡದ ಎಲ್ಲಾ ಮಹತ್ವದ ಕವಿಗಳು, ಕವಿಯಿತ್ರಿಯರು ಗಾಂಧಿ ಅವರನ್ನು ಅರಸಿದ್ದಾರೆ, ಬೆದಕಿದ್ದಾರೆ. ಮನಸ್ಸಿನಲ್ಲಿ ಒಡಮೂಡಿಸಿಕೊಂಡು ಅನುಸಂಧಾನ ಮಾಡಿದ್ದಾರೆ. ನಂತರ ನುಡಿಗಳಲ್ಲಿ ಗೀತೆಗಳಲ್ಲಿ, ಕಾವ್ಯದಲ್ಲಿ, ಭಜನೆಗಳಲ್ಲಿ ಹಾಡುತ್ತಾ ಕನ್ನಡಿಗರಿಗೆ ಹಾಡಲು, ಮನದಲ್ಲಿ ತುಂಬಿಕೊಳ್ಳಲು ಕೃತಿರೂಪದಲ್ಲಿ ಕೊಟ್ಟಿದ್ದಾರೆ.

ಇಂದಿರಾ ಕೃಷ್ಣಪ್ಪ

**ಕರ್ನಾಟಕ ಗಾಂಧಿ ಸ್ಮಾರಕ ನಿಧಿ**

**ಗಾಂಧಿ ಭವನ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು**